ಅಲೆಮಾರಿ ಸಮುದಾಯಗಳ ಅಧ್ಯಯನಮಾಲೆ

# ಅಲೆಮಾರಿ ಕುರುಬ

ಡಾ ಯರ್ರಪ್ಪ ಡಿ



ಕರ್ನಾಟಕ ಸರ್ಕಾರ

**ಕನ್ನಡ ಪುಸ್ತಕ ಪ್ರಾಧಿಕಾರ**

**ಬೆಂಗಳೂರು**

ಕರ್ನಾಟಕ ಅಲೆಮಾರಿ ಸಮುದಾಯಗಳ ಅಧ್ಯಯನ ಮಾಲೆ ೨೧

# ಅಲೆಮಾರಿ ಕುರುಬ

## (ಅರೆ ಅಲೆಮಾರಿ ಸಮುದಾಯ)

ಡಾ ಯರ್ರಪ್ಪ ಡಿ

ಕರ್ನಾಟಕ ಸರಕಾರ

ಕನ್ನಡ ಪುಸ್ತಕ ಪ್ರಾಧಿಕಾರ

ಕನ್ನಡ ಭವನ, ಜೆ ಸಿ ರಸ್ತೆ, ಬೆಂಗಳೂರು ೫೬೦ ೦೦೨

ದೂರವಾಣಿ ೦೮೦ ೨೨೪೮ ೪೫೧೬

**Alemari Kuruba** (Karnataka **Nomadic Community Studies-20**) by **Dr. Yerrappa D.**, Published by **Ashok N. Chalawadi, Administrative** Officer, Kannada **Pustaka Pradhikara, Kannada Bhavana, J.C. Road, Bangaloru-560 002.**



ಮೊದಲ ಮುದ್ರಣ: ೨೦೦೮
ಪುಟಗಳು : xxxiv + ೨೨೪
ಬೆಲೆ : **ರೂ. ೯೫/-**
ಪ್ರತಿಗಳು : ೧೦೦೦

First Print : 2008
Page : xxxiv + 224
Price : **Rs. 95/-**
Copies : 1000
**ISBN : 81-7713-233-4**

ಪ್ರಕಾಶಕರು
**ಅಶೋಕ ಎನ್. ಚಲವಾದಿ**
ಆಡಳಿತಾಧಿಕಾರಿಗಳು
ಕನ್ನಡ ಪುಸ್ತಕ ಪ್ರಾಧಿಕಾರ
ಕನ್ನಡ ಭವನ, ಜೆ.ಸಿ. ರಸ್ತೆ
ಬೆಂಗಳೂರು-೫೬೦ ೦೦೨

ಮುಖಪುಟ ವಿನ್ಯಾಸ : **ಪ್ರತಾಪ ರಾ ಬಹುರೂಪಿ, ಬೆಳಗಾವಿ**
ಕರಡು ತಿದ್ದಿದವರು : ಡಾ. ಆರ್.ಬಿ. ಕುಮಾರ್, ರಾಮಸಾಗರ

*ಅಕ್ಷರ ಜೋಡಣೆ :*
**ಭಾವನಾ ಗ್ರಾಫಿಕ್ಸ್**
ಕಮಲಾಪುರ-೫೮೩ ೨೨೧

*ಮುದ್ರಕರು :*
**ರಾಜಾ ಪ್ರಿಂಟರ್ಸ್**
ನಂ. ೫೯, ೪ನೇ ಕ್ರಾಸ್, ಲಾಲ್‌ಬಾಗ್ ರಸ್ತೆ
ಬೆಂಗಳೂರು-೫೬೦ ೦೨೭, ದೂ: ೨೨೨೩೪೦೬೭

# ಸಂಪಾದಕ ಮಂಡಳಿ

ಪ್ರಧಾನ ಸಂಪಾದಕರು

**ಪ್ರೊ ಎಸ್ ಜಿ ಸಿದ್ದರಾಮಯ್ಯ**

ಸಂಪಾದಕರು

**ಡಾ ಕೆ ಎಂ ಮೇತ್ರಿ**

ಪ್ರಕಾಶಕರು

**ಅಶೋಕ ಎಸ್ ಚಲವಾದಿ**

## ಸಲಹಾ ಸಮಿತಿಯ ಸದಸ್ಯರು

ಕೆ ಭಾಸ್ಕರದಾಸ್ ಎಕ್ಕಾರು
ಶೇಷಪ್ಪ ಅಂದೊಳ್ಳು
ಡಾ ಶರಣಮ್ಮ ಗೊರೆಬಾಳ
ಹಂಸಲೇಖ
ಡಾ ಕಾಶಿನಾಥ ಅಂಬಲಗಿ
ಶೀಲಾ ತಿವಾರಿ
ಹೊರೆಯಾಲ ದೊರೆಸ್ವಾಮಿ

## ಲೇಖಕರು ಮತ್ತು ಸಂಪಾದಕ ಮಂಡಳಿಯ ಸದಸ್ಯರು

| ಪುಸ್ತಕಗಳು | ಲೇಖಕರು |
|---|---|
| ೦೧. ಬುಡ್ಗ ಜಂಗಮ | ಬಾಲಗುರುಮೂರ್ತಿ, ಪ್ರತಾಪ ರಾ ಬಹುರೂಪಿ |
| ೦೨. ಚೆನ್ನ ದಾಸರ | ಡಾ ಯಲ್ಲಪ್ಪ ಬಿ ಹಿಮ್ಮಡಿ |
| ೦೩. ದಕ್ಕಲಿಗ | ಜಾನಕಲ್ ರಾಜಣ್ಣ ಎಂ |
| ೦೪. ಗೋಸಂಗಿ | ಅಪ್ಪಾಜಿ ಎಸ್ ಸಿಂಧೆ, ಕೆ ಚಾವಡೆ ಲೋಕೇಶ್ |
| ೦೫. ಹಂದಿ ಜೋಗಿ | ಚೆಂದ್ರಪ್ಪ, ಎಂ ದುಷಂತ್ |
| ೦೬. ಕೊರಮ | ಮಲ್ಲಿಕಾರ್ಜುನ ಬಿ ಮಾನ್ಪಡೆ |
| ೦೭. ಶಿಳ್ಳೇಕ್ಯಾತ | ಡಾ ಸಣ್ಣವೀರಣ್ಣ ದೊಡ್ಡಮನಿ, ಪಿ ಮಹೇಂದ್ರರಾವ್ ಸಾಸ್ನಿಕ್ |
| ೦೮. ಸಿಂಧೊಳ್ಳು | ಡಾ ದೊಡ್ಡಮನಿ ಲೋಕರಾಜ,ಶ್ರೀನಿವಾಸ್ ಎಸ್ ರಾವುಲೋಳ್ |
| ೦೯. ಸುಡುಗಾಡು ಸಿದ್ಧ | ಎಂ ಎಸ್ ಗಂಟಿ |
| ೧೦. ಡುಂಗ್ರಿ ಗರಾಸಿಯ | ಜಗದೀಶ ಕೆ ಕೆ |
| ೧೧. ಹಕ್ಕಿಪಿಕ್ಕಿ | ಕುಮುದಾ ಬಿ ಸುಶೀಲಪ್ಪ |
| ೧೨. ಪಾರ್ಧಿ | ಡಾ ಲಕ್ಕಿ ಷಟ್ಟಿರಾಟ್, ಎಚ್ ಪಿ ಶಿಕಾರಿ ರಾಮು |
| ೧೩. ರಾಜಗೊಂಡ | ಡಾ ಕೆ ಎಂ ಮೇತ್ರಿ, ಸುದರ್ಶನ್ ಸೆಡ್ಮಾಕಿ |
| ೧೪. ಬೈಲಪತ್ತಾರ | ವಿಶ್ವನಾಥ ಎಲ್ ಬೈಲಪತ್ತಾರ, ಜಗನ್ನಾಥ ಎಂ ಬೈಲಪತ್ತಾರ |
| ೧೫. ದೊಂಬಿದಾಸ | ಕುಪ್ಪೆ ನಾಗರಾಜ |
| ೧೬. ಘಿಸಾಡಿ | ಡಾ ಬಸವರಾಜ ಎಸ್ ಹಿರೇಮಠ, ಅಂಜಲಿ ಸಾಳುಂಕೆ |
| ೧೭. ಗೋಂಧಳಿ | ಶಿವಾನಂದ ಬಿ ಪಾಚಂಗಿ |
| ೧೮. ಕಂಜರಭಾಟ | ಜೆ ವ್ಹಿ ಬಾಗಡೆ |
| ೧೯. ಸಿಕ್ಲಿಗರ | ಡಾ ಚಲವಾದಿ ಬಸವರಾಜ, ಶೇಖರಸಿಂಗ್ ಎಸ್ |
| ೨೦. ಅಲೆಮಾರಿ ಕುರುಬ | ಡಾ ಯರ್ರಪ್ಪ ಡಿ |
| ೨೧. ಕಾಡುಗೊಲ್ಲ | ಡಾ ಎಂ ಗುರುಲಿಂಗಯ್ಯ, ವಿ ನಾಗಪ್ಪ |

# ಅಧ್ಯಕ್ಷರ ಮಾತು

ನಮ್ಮದು ಬಹು ಸಂಸ್ಕೃತಿಗಳ ಸಮಾಜ. ಗಣತಿಯಲ್ಲಿ ಲೆಕ್ಕಕ್ಕೆ ಸಿಕ್ಕವು ಕೆಲವಾದರೆ, ಸಿಗದವು ಹಲವು, ಲೆಕ್ಕಕ್ಕೆ ಸಿಕ್ಕಿಯೂ ಸರಿಯಾಗಿ ಪರಿಗಣನೆಗೆ ಬಾರದೆ ತಪ್ಪು ನಮೂದಾಗಿರುವ ಸಮುದಾಯಗಳು ಇನ್ನೂ ಹಲವಾರಿವೆ. ಅದರಲ್ಲೂ ಅಲೆಮಾರಿ ಸಮುದಾಯಗಳಿಗೆ ಗಣತಿಯ ವಿಚಾರದಲ್ಲಿ ಆಗಿರುವ ಅಧ್ವಾನ ಅನ್ಯಾಯ ಅಪಾರವಾದುದು. ಎಷ್ಟೋ ಅಲೆಮಾರಿ ಸಮುದಾಯಗಳಿಗೆ ಇಂದಿಗೂ ಹೇಳಿಕೊಳ್ಳಲು ಒಂದು ನಿರ್ದಿಷ್ಟ ನೆಲೆ ಇಲ್ಲ. ಇಂದು ಇಲ್ಲಿ, ನಾಳೆ ಅಲ್ಲಿ, ನಾಡಿದ್ದು ಇನ್ನೆಲ್ಲೋ ಎನ್ನುವ ಸ್ಥಿತಿಯಲ್ಲಿ ಹಲವಾರು ಅಲೆಮಾರಿ ಕುಟುಂಬಗಳು ಜೀವನೋಪಾಯಕ್ಕಾಗಿ ಇಂದಿಗೂ ಅಲೆದಾಡುತ್ತಲೇ ಇವೆ. ಇದರಿಂದಾಗಿ ಅವರಿಗೆ ಅವರದೇ ಆದ ಭೂಮಿ ಕಾಣಿ ಊರು ಕೇರಿ ಎಂಬುದು ಇಲ್ಲ. ಎಷ್ಟೋ ಅಲೆಮಾರಿ ಸಮುದಾಯಗಳಿಗೆ ನಿರ್ದಿಷ್ಟವಾದ ಹೆಸರೂ ಇಲ್ಲ. ಕರ್ನಾಟಕದಲ್ಲೇ ಒಂದು ನಿರ್ದಿಷ್ಟ ಅಲೆಮಾರಿ ಸಮುದಾಯವನ್ನು ಹಲವಾರು ಹೆಸರುಗಳಲ್ಲಿ ಕರೆಯುವುದು ಕಂಡುಬರುತ್ತದೆ. ಒಂದು ಸಮುದಾಯವನ್ನು ಮೈಸೂರು ಕಡೆ ಒಂದು ಹೆಸರಿನಲ್ಲಿ ಗುರುತಿಸಿದರೆ, ಅದೇ ಸಮುದಾಯವನ್ನು ಉತ್ತರ ಕರ್ನಾಟಕದ ಭಾಗಗಳಲ್ಲಿ ಬೇರೆ ಬೇರೆ ಹೆಸರುಗಳಲ್ಲಿ ಗುರುತಿಸಲಾಗುತ್ತಿದೆ. ಹಾಗೆಯೇ ಕರ್ನಾಟಕವನ್ನು ಬಿಟ್ಟು ಗಡಿ ಭಾಗಗಳಲ್ಲಿ ಸಂಚರಿಸುವಾಗ ಅಲ್ಲೆಲ್ಲ ಬೇರೆ ಬೇರೆ ಹೆಸರುಗಳಲ್ಲಿ ಇವುಗಳನ್ನು ಕರೆಯಲಾಗುತ್ತಿದೆ. ಹೀಗೆ ನಿರ್ದಿಷ್ಟ ಗುರುತಿಗೆ (ಐಡೆಂಟಿಟಿ) ಸಿಗದೆ ಬಹುನಾಮಗಳಿಗೆ ಒಳಗಾಗುವುದರಿಂದ ಆಗುವ ಅಪಾಯಗಳ ಅರಿವಿಲ್ಲದೆ ಆ ಸಮುದಾಯಗಳು ಬದುಕಿವೆ. ಇದರ ಜೊತೆಗೆ ಶಿಕ್ಷಣ ವಂಚಿತ ಮಕ್ಕಳು ಬದುಕಿನ ಮುಖ್ಯ ಪ್ರವಾಹದಲ್ಲಿ ಪಾಲ್ಗೊಳ್ಳದೆ ಹೋಗುವ ದುರ್ಗತಿ ಅವರ ನಿತ್ಯದ ನರಕವಾಗಿದೆ. ಯಾವುದೇ ಅಲೆಮಾರಿ ಸಮುದಾಯವನ್ನು ತೆಗೆದುಕೊಂಡರೂ ಆ ಸಮುದಾಯ ನಿರ್ದಿಷ್ಟವಾಗಿ ಯಾವುದೇ ಒಂದು ಭಾಷೆಗೆ ತನ್ನನ್ನು ಕಟ್ಟಿ ಹಾಕಿಕೊಂಡಿರುವುದಿಲ್ಲ. ಒಂದು ಅಲೆಮಾರಿ ಸಮುದಾಯ ಕನಿಷ್ಠ ೪ ಭಾಷೆಗಳನ್ನು ತನ್ನ ನಿತ್ಯ ಬಳಕೆಗೆ ವಾಹಕವಾಗಿಸಿಕೊಂಡಿದೆ. ಇವುಗಳಲ್ಲಿ ಅವರ ಮಾತೃಭಾಷೆ ಯಾವುದು ಎಂಬುದು ಗೊತ್ತಾಗಲಾರದ ಮಟ್ಟಿಗೆ ಅವರಾಡುವ ಭಾಷೆಗಳ ಪ್ರಯೋಗ ಪರಿಣತಿ ಅವರಲ್ಲಿ ಪ್ರಬುದ್ಧವಾಗಿದೆ. ಇಂಥ ಸಮುದಾಯಮೂಲಗಳ ಪ್ರತಿಭೆಗಳಿಗೆ ಶಿಕ್ಷಣ,

ದುಡಿಮೆ, ಅಧಿಕಾರ, ಸ್ಪರ್ಧೆ, ರಾಜಕೀಯ ಇತ್ಯಾದಿ ಕ್ಷೇತ್ರಗಳು ತೆರೆದುಕೊಂಡರೆ ಹೊಸ ವಿಸ್ತರಣೆಗಳ ಸಾಧ್ಯತೆಗಳು ಅಪಾರವಾಗಿರುತ್ತವೆ.

ಬುಡ್ಗಜಂಗಮ್‌ಸಮುದಾಯದವರ ರಾಜ್ಯಮಟ್ಟದ ಸಮಾವೇಶವೊಂದು ಬೆಂಗಳೂರಿನ ಅಂಬೇಡ್ಕರ್ ಭವನದಲ್ಲಿ ೨೦೦೫ರ ಆಗಸ್ಟ್ ೧೧ ಮತ್ತು ೧೨ ರಂದು ನಡೆಯಿತು. ಅಲ್ಲಿ ಅತಿಥಿಯಾಗಿ ಭಾಗವಹಿಸಿದ್ದೆ. ಆ ದಿನ ಅಂಬೇಡ್ಕರ್ ಭವನದ ತುಂಬಾ ವಿವಿಧ ವೇಷಧಾರಿಗಳು ಕುಂತಕಡೆ ಕೂರದೆ, ಅತ್ತಿಂದಿತ್ತ ಓಡಾಡುತ್ತಿದ್ದರು. ಬಹಳಷ್ಟು ಜನರ ಹೆಗಲಮೇಲೆ ಒಂದು ಮಾರುದ್ದದ ಕೋಲು ಅದಕ್ಕೆ ನೇತು ಬಿದ್ದ ಒಂದು ಹಸಿಬೆ ಚೀಲ, ಕೆಲವರು ಕಸೆಪಂಚೆ ಉಟ್ಟಿದ್ದರೆ, ಇನ್ನು ಕೆಲವರು ಬಣ್ಣಬಣ್ಣದ ಲುಂಗಿ, ಮೇಲೆ ತೊಟ್ಟ ಶರಟು ರಂಗು ರಂಗಿನ ವಿಚಿತ್ರ ಬಣ್ಣದ್ದು. ಇವರ ಮಧ್ಯೆ ಪುರಾಣ ಕಾಲದ ರಾಮ, ರಾವಣ, ಲಕ್ಷ್ಮಣ, ಸೀತೆ, ಹನುಮಂತ, ಶೂರ್ಪನಖಿ ವೇಷಧಾರಿಗಳು. ಕೆಲವರು ಹೆಗಲಿಗೆ ನೇತು ಹಾಕಿಕೊಂಡ ತಮಟೆ, ಮೃದಂಗ, ಡೋಲುಗಳನ್ನು ಹೊತ್ತೇ ಓಡಾಡುತ್ತಿದ್ದರೆ, ಇವರೆಲ್ಲರ ಮಧ್ಯೆ ಕೆಲವರು ಪ್ಯಾಂಟು, ಶರಟು ಸೂಟುಧಾರಿಗಳು ತುಂಬಾ ಶ್ರಮದಲ್ಲಿ ಅವರನ್ನು ಕೂರಿಸಲು ಪ್ರಯತ್ನಿಸುತ್ತಿದ್ದರು. ಅವರ ಮನವಿಗಳು ಯಾರ ಕಿವಿಗೂ ಕೇಳಿಸಿದಂತೆ ಕಾಣುತ್ತಿರಲಿಲ್ಲ. ಸ್ಟೇಜಿನ ಮೇಲಿಂದ ವ್ಯವಸ್ಥಾಪಕರ ಪೈಕಿಯ ಯುವ ಮುಂದಾಳು ಬಾಲಗುರುಮೂರ್ತಿ, ಮೈಕಿನಿಂದ ಪದೇ ಪದೇ ಎಲ್ಲರನ್ನೂ ಕುಳಿತು ಕೊಳ್ಳುವಂತೆ ಬಂದ ಅತಿಥಿಗಳ ಮಾತನ್ನು ಕೇಳಿಸಿಕೊಳ್ಳುವಂತೆ ಮನವಿ ಮಾಡುತ್ತಿದ್ದರು. ಯಾರಿಗೂ ಕೂರುವುದು ಬೇಕಿರಲಿಲ್ಲ. ಆ ವಿಚಿತ್ರ ಸನ್ನಿವೇಶ ಅವರ ಬದುಕನ್ನು ಪ್ರತಿಬಿಂಬಿಸುವ ಒಂದು ಘಟನೆಯಾಗಿ ನನಗೆ ಭಾಸವಾಯಿತು. ಜೀವನದುದ್ದಕ್ಕೂ ಎಲ್ಲಿಯೂ ನೆಲೆ ನಿಂತವರಲ್ಲ ಅವರು. ಅಲೆಮಾರಿತನವೇ ಜೀವನಗತಿಯಾದ ಅವರಿಗೆ ಒಂದು ಕಡೆ ಗಂಟೆಗಟ್ಟಲೆ ಕೂರುವುದು ಅಭ್ಯಾಸವಿಲ್ಲದ ಹಾಗೂ ಒಗ್ಗದ ಕೆಲಸ. ಅವರಲ್ಲಿ ವೇಷಧಾರಿಗಳಾಗಿದ್ದವರಿಗೆ ಸ್ಟೇಜಿನ ಮೇಲೆ ತಮ್ಮ ಪ್ರದರ್ಶನ ನೀಡುವ ಆತುರ. ಆದರೆ, ವ್ಯವಸ್ಥಾಪಕರಿಗೆ ಅದಕ್ಕಿಂತ ಮುಖ್ಯವಾಗಿ ಸಂಘಟನೆ ಶಿಕ್ಷಣ ಹೋರಾಟದ ಹಾದಿಯನ್ನು ಅವರಿಗೆ ತಿಳಿಸಿ, ಮುಂದಿನ ದಿನಗಳಲ್ಲಿ ಕೈಗೊಳ್ಳಬೇಕಾದ ಕಾರ್ಯಕ್ರಮಗಳ ತಿಳಿವಳಿಕೆ ನೀಡುವ ತುರ್ತು. ಸಂಘಟನೆಗಾಗಿ ಶ್ರಮಿಸುತ್ತಿರುವ ಯುವಕರ ಹರಸಾಹಸ ಅದಕ್ಕೆ ಕಿವಿಗೊಡದೆ ತಮ್ಮ ಸಾಂಪ್ರದಾಯಿಕ ಜೀವನ ಶೈಲಿಯಲ್ಲಿ ಭ್ರಮಾತ್ಮಕ ಸಂಭ್ರಮದಲ್ಲಿರುವ ಜನಸ್ತೋಮ. ಎಚ್ಚೆತ್ತ ಯುವಕರು ಕ್ರಮಿಸಬೇಕಾದ ದಾರಿ ಇನ್ನೂ ತುಂಬಾ ದೂರವಿದೆ ಹಾಗೂ ಪ್ರಯಾಸದಾಯಕವಿದೆ ಎಂಬುದನ್ನು ಸಾರಿ ಸಾರಿ ಹೇಳುತ್ತಿತ್ತು ಆ ಸನ್ನಿವೇಶ.

ಈ ದೇಶದ ಸಾಮಾಜಿಕ ವಿಸಂಗತಿ ಎಂದರೆ ಬಲಿಷ್ಠ ಜಾತಿಗಳು ದಿನದಿಂದ ದಿನಕ್ಕೆ ಸಾಂಸ್ಕೃತಿಕ ಮುಖವಾಡದಲ್ಲಿ ಹೆಚ್ಚು ಧೃವೀಕರಣಗೊಳ್ಳುತ್ತಿವೆ. ರಾಜಕೀಯ ಅಧಿಕಾರವನ್ನು ಹಿಡಿಯುವ ಪೈಪೋಟಿಯಲ್ಲಿ ತೊಡಗಿ ತನ್ನ ಅಧೀನ ಹೆಚ್ಚಿನ ಅನುಕೂಲತೆಗಳನ್ನು

ತಮ್ಮದಾಗಿಸಿಕೊಳ್ಳುತ್ತಿವೆ. ಶಿಕ್ಷಣ ಉದ್ಯೋಗ ರಾಜಕೀಯ ಅಧಿಕಾರವೆಂಬುದು ಉಳ್ಳವರ್ಗಗಳ ಶಕ್ತಿಯಾಗಿ ಬಳಕೆಯಾಗುತ್ತಿದೆ. ಆದರೆ, ಇದೆಲ್ಲದರಿಂದ ಗಾವುದ ಗಾವುದ ದೂರವಿರುವ ಇಂಥ ಅಲೆಮಾರಿ ಸಮುದಾಯಗಳು ಸಂಘಟನೆಯ ಪ್ರಾಥಮಿಕ ತಿಳಿವಳಿಕೆಯೂ ಇಲ್ಲದೆ ತಮ್ಮ ಹಕ್ಕಿನ ಭಾಗಗಳನ್ನು ಉಳ್ಳವರೇ ಉಣ್ಣುವಂತೆ ಮಾಡಿಕೊಂಡಿವೆ. ಇಂಥ ವಿಸಂಗತಿಯ ನಡುವೆ ಎಲ್ಲ ಅಲೆಮಾರಿ ಸಮುದಾಯಗಳ ಪ್ರಜ್ಞಾವಂತ ಯುವಕರು ತಮ್ಮ ಬದುಕಿನ ಆತ್ಮಾವಲೋಕನ ಮಾಡಿಕೊಂಡಂತೆ ಸಂಘಟನೆಗೆ ತೊಡಗಿದ್ದಾರೆ. ಈ ದೇಶದಲ್ಲಿ ಜಾತಿ ಹಾಗೂ ಸಮುದಾಯಗಳ ಹೆಸರಿನಲ್ಲಿ ಸಂಘಟಿತವಾಗುವ ನೈತಿಕ ಹಕ್ಕು ಇರುವುದು ಇಂಥ ವಂಚಿತ ಗುಂಪುಗಳಿಗೆ ಮಾತ್ರ. ಎಲ್ಲ ಸುಖ ಸವಲತ್ತುಗಳನ್ನು ಪಡೆದಿರುವ ಮೇಲಿನ ಸಂಘಟಿತ ಸಮುದಾಯಗಳು ನೈತಿಕವಾಗಿ ವಿಸರ್ಜನೆಗೊಳ್ಳುವ ಅಗತ್ಯವಿದೆ. ಸೆಕ್ಯುಲರ್ ಎನ್ನುವುದರ ನಿಜವಾದ ಅನುಭವ ನಮ್ಮ ನಡುವೆ ಸಂಭವಿಸುವುದು ಹೀಗೆ ವಿಸರ್ಜನೆಗೊಳ್ಳುವುದರಿಂದ ಮತ್ತು ಕಲೆ ಸಂಸ್ಕೃತಿ ಅಭಿರುಚಿ ಕಾಯಕಗಳ ಮುಖೇನ ಬದುಕಿಗೆ ಹೊಸಚಲನೆ ನೀಡಲು ಸಂಘಟನೆಯಾಗುವುದರಿಂದ. ಆದರೆ ವಸ್ತುಸ್ಥಿತಿ ಹೇಗಿದೆ ಎಂದರೆ, ಇಂದು ಬಲಿಷ್ಠ ಜಾತಿಗಳ ಧ್ರುವೀಕರಣಕ್ಕೆ ಕಲೆ ಸಂಸ್ಕೃತಿ ಧರ್ಮ ಕಾಯಕ ಇತ್ಯಾದಿಗಳು ಮುಖವಾಡಗಳಾಗಿ ಬಳಕೆಯಾಗುತ್ತಿವೆ. ತಮ್ಮ ಜೀವನ ನಿರ್ವಹಣೆಗೆ ಅಗತ್ಯವಾದ ತಮ್ಮ ಪಾಲಿನ ಹಕ್ಕಿಗಾಗಿ ಹೋರಾಡಲು ಸಂಘಟಿತವಾಗಬೇಕಾದ ಸಮುದಾಯಗಳು ಶಕ್ತಿರಾಜಕಾರಣದಲ್ಲಿ ದಾಳಗಳಾಗಿ ಬಳಕೆಯಾಗುತ್ತಿವೆ. ದಿನದಿಂದ ದಿನಕ್ಕೆ ಒಳಪಂಗಡಗಳ ಹೆಸರಿನಲ್ಲಿ ಛಿದ್ರಗೊಳ್ಳುತ್ತಿವೆ. ಇದನ್ನು ತಪ್ಪಿಸುವುದು ಇಂದಿನ ಸಾಮಾಜಿಕ ಹೊಣೆಯಾಗಿದೆ. ಆದರೆ, ಬೆಕ್ಕಿನ ಕೊರಳಿಗೆ ಗಂಟೆ ಕಟ್ಟುವವರಾರು? ಇಂಥ ಪ್ರಶ್ನೆಯನ್ನೇ ಮತ್ತೆ ಪ್ರಶ್ನಿಸುವ ಹೊಸ ಎಚ್ಚರ ಇಂದು ನಮ್ಮ ನಡುವೆ ಸಂಭಾವ್ಯವಾಗಬೇಕಿದೆ. ಬೆಕ್ಕಿಗೆ ಬಲಿಯಾಗದಂತೆ ಉಳಿಯುವ ಬೆಳೆಯುವ ಅರಿವಿನ ಎಚ್ಚರಿಕೆಯ ಸಂಘಟನೆಯಾದರೆ ಒಗ್ಗಟ್ಟಿನ ಬಲದಲ್ಲಿ ಗಂಟೆ ಕಟ್ಟುವ ಅಗತ್ಯವೇ ಬೀಳುವುದಿಲ್ಲ. ದುರಂತವೆಂದರೆ, ಇಂಥ ಎಚ್ಚರದ ಮನಸ್ಸುಗಳು ಸ್ವಾರ್ಥಕ್ಕೆ ಸಮುದಾಯಗಳ ಹಿತವನ್ನು ಬಲಿಗೊಡುವ ದಂದೆಗಿಳಿದಿವುದು. ಕಳೆದ ಮೂವತ್ತು ವರ್ಷಗಳ ಈ ಎಲ್ಲ ವಿದ್ಯಮಾನಗಳನ್ನು ಮನಸ್ಸಿನಾಳಕ್ಕೆ ತಂದುಕೊಂಡಂತೆ ಅಲೆಮಾರಿ ಸಮುದಾಯಗಳ ಮೂಲದಿಂದ ಬಂದ ಯುವಕರು ಒಕ್ಕೂಟ ರಚನೆಯಲ್ಲಿ ಆಸಕ್ತಿವಹಿಸಿ, ಸಂಕಲ್ಪಬದ್ಧ ಭಾವದಲ್ಲಿ ಸಂಘಟಿತವಾಗುತ್ತಿದ್ದಾರೆ. ಆ ಸಂಘಟನೆಯ ಫಲ ಇಂಥ ಅಧ್ಯಯನದ ಕಾರ್ಯ ಯೋಜನೆ.

ಈ ಮಾಲಿಕೆಯಲ್ಲಿ ಇಪ್ಪತ್ತೆರಡು ಅಲೆಮಾರಿ ಸಮುದಾಯಗಳ ಅಧ್ಯಯನವಿದೆ. ಈ ಅಧ್ಯಯನದಲ್ಲಿ ಇರುವ ವಿಶೇಷತೆ ಎಂದರೆ, ಇದು ಹೊರಗಿನವರು ನಡೆಸಿದ ಅಧ್ಯಯನವಲ್ಲ. ಆಯಾ ಸಮುದಾಯ ಮೂಲಗಳಿಂದ ಬಂದು ಅಕ್ಷರ ಜಗತ್ತಿಗೆ ತೆರೆದುಕೊಂಡಿರುವ ಎಚ್ಚೆತ್ತ ಯುವಕರು ತಮ್ಮ ತಮ್ಮ ಸಮುದಾಯಗಳ ಬಗ್ಗೆ

ಕ್ಷೇತ್ರಾಧ್ಯಯನ ನಡೆಸಿ ಕಟ್ಟಿಕೊಟ್ಟಿರುವ ವಸ್ತುನಿಷ್ಠ ಅಧ್ಯಯನವಿದು. ನೊಂದ ನೋವ ನೊಂದವನೇ ನಿವೇದಿಸಿರುವ ವ್ಯಥಾನಕವಿದು. ಇಲ್ಲಿ ಕುಟುಂಬವೆಂಬ ಚಿಕ್ಕ ಘಟಕವನ್ನು ಕೇಂದ್ರವಾಗಿಟ್ಟುಕೊಂಡು ಮಾಹಿತಿ ಸಂಗ್ರಹಿಸಿದ್ದರಿಂದ ಮೊದಲ್ಗೊಂಡು ಇಡೀ ಸಮುದಾಯವನ್ನು ಪ್ರಾದೇಶಿಕ ನಿರ್ದಿಷ್ಟತೆಯಲ್ಲಿ ಪರಿಮಿತಿಗೊಳಿಸಿ ನಡೆಸಿದ ಅಧ್ಯಯನವೂ ಇದೆ. ಇದರ ಜೊತೆಗೆ ಕರ್ನಾಟಕದ ವ್ಯಾಪ್ತಿಯನ್ನು ಪೂರ್ಣ ಘಟಕವಾಗಿ ಪರಿಗಣಿಸಿ, ಅಧ್ಯಯನ ನಡೆಸಲಾಗಿದೆ. ಇನ್ನೂ ಮುಂದುವರಿದು ಈ ಎಲ್ಲ ವಿವರಗಳಿಗೆ ಪೂರಕವಾಗುವಂತೆ ಅನ್ಯ ಪ್ರಾಂತಗಳ ಅಂಕಿ ಅಂಶಗಳನ್ನು ಅಧ್ಯಯನ ಸಾಮಗ್ರಿಯಾಗಿ ಬಳಸಿಕೊಳ್ಳಲಾಗಿದೆ. ಇಲ್ಲಿ ಶ್ರದ್ಧೆ ತತ್ಪರತೆ ಸಂಕಲ್ಪಬದ್ಧ ವಸ್ತುನಿಷ್ಠಭಾವ ಇವು ಮೂಲ ಪ್ರಮಾಣುಗಳಾಗಿ ಕಾರ್ಯ ನಿರ್ವಹಿಸಿವೆ. ಇಲ್ಲಿನ ಲೇಖಕರಲ್ಲಿ ಬಹಳಷ್ಟು ಜನ ಬರವಣಿಗೆಯ ರೂಢಿಗೆ ಬೀಳದವರು. ಬರವಣಿಗೆ ಎಂಬುದನ್ನು ಕಲಾತ್ಮಕತೆಯ ಹಂಗಿನಲ್ಲಿ ನೋಡಿ ಕೀಳರಿಮೆಯ ಭಾವದಲ್ಲಿ ನರಳಲಾರದ ಆತ್ಮವಿಶ್ವಾಸಿಗಳು. ಏಕೆಂದರೆ, ಇವರಿಗೆ ನಿವೇದಿಸಿಕೊಳ್ಳಲು ನೋವುಗಳಿವೆ. ಬಂದ ಮೂಲದ ಬಗೆಗೆ ನಿಷ್ಠೆತುಂಬಿದ ನೈತಿಕ ಹೊಣೆಗಾರಿಕೆ ಇದೆ. ಹೀಗಾಗಿ ಒಲಿದಂತೆ ಹಾಡಿದ ಸಮುದಾಯದ ಒಟ್ಟುದನಿಗೆ ಕೊರಳಾಗಿದ್ದಾರೆ. ಈ ಎಲ್ಲ ಕೊರಳುಗಳ ಹಾಡನ್ನು ದೇಸಿ ಸಹಜ ಶ್ರುತಿಲಯಗಳಲ್ಲಿ ಸಂಯೋಜಿಸುವ ಹೊಣೆಯನ್ನು ಪ್ರೊ ಕೆ ಎಂ ಮೇತ್ರಿಯವರು ಯಶಸ್ವಿಯಾಗಿ ನಿರ್ವಹಿಸಿದ್ದಾರೆ. ಈ ಅಧ್ಯಯನ ಮಾಲಿಕೆ ಪ್ರಾಧಿಕಾರದ ಪ್ರಮುಖ ಕಾರ್ಯಕ್ರಮವಾಗಲು ಸಹಕರಿಸಿದ ಎಲ್ಲ ಸದಸ್ಯ ಸಂಗಾತಿಗಳಿಗೆ ಹಾಗೂ ಕರ್ನಾಟಕ ಸರಕಾರಕ್ಕೆ ಮತ್ತು ಸರ್ಕಾರದಿಂದ ಈ ಯೋಜನೆಯನ್ನು ಮಂಜೂರು ಮಾಡಿಸಲು ಕಾರಣಕರ್ತರಾದ ಕೆ ಭಾಸ್ಕರದಾಸ್ ಎಕ್ಕಾರು, ಶೇಷಪ್ಪ ಅಂದೊಳ್ಳು ಅವರಿಗೆ ಹಾಗೂ ಕನ್ನಡ ಸಂಸ್ಕೃತಿ ಇಲಾಖೆಯ ಎಲ್ಲ ಅಧಿಕಾರಿ ಮಿತ್ರರಿಗೆ ಅಲೆಮಾರಿ ಸಮುದಾಯಗಳ ಸಂವೇದನೆಯ ಪರವಾಗಿ ಕೃತಜ್ಞತೆಗಳು.

ಈ ಹಿಂದೆ ಪ್ರೊ ಬರಗೂರು ರಾಮಚಂದ್ರಪ್ಪ ಅವರು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿದ್ದ ಸಂದರ್ಭದಲ್ಲಿ ಉಪಸಂಸ್ಕೃತಿ ಅಧ್ಯಯನ ಮಾಲೆ ಪ್ರಕಟವಾಯಿತು. ಅಕಾಡೆಮಿಗಳ ಕಾರ್ಯಸ್ವರೂಪಕ್ಕೆ ಒಂದು ದೊಡ್ಡ ವಿಸ್ತರಣೆಯನ್ನ ಒದಗಿಸಿದ ಪ್ರಕಟಣೆ ಅದು. ಇದರ ಜೊತೆಗೆ ಪ್ರೊ ಎಚ್ ಜೆ ಲಕ್ಕಪ್ಪಗೌಡ ಅವರು ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ ಅಧ್ಯಕ್ಷರಾಗಿದ್ದ ಸಂದರ್ಭದಲ್ಲಿ ಹೊರತಂದ ಕರ್ನಾಟಕ ಬುಡಕಟ್ಟುಗಳ ಸಂಪುಟಗಳು ಇದರ ಮುಂದುವರಿದ ಅಧ್ಯಯನ ರೂಪಗಳು. ಇವುಗಳನ್ನು ಇಲ್ಲಿ ಪ್ರೀತಿಯಿಂದ ನೆನೆಯುತ್ತೇನೆ.

ಪ್ರೊ ಎಸ್ ಜಿ ಸಿದ್ಧರಾಮಯ್ಯ

# ಪ್ರಸ್ತಾವನೆ

## ಅಲೆಮಾರಿ ಮತ್ತು ವಿಮುಕ್ತ ಬುಡಕಟ್ಟು ಸಮುದಾಯಗಳು

ವಿಶ್ವದ ಮೂಲಿಗರೇ ಅಲೆಮಾರಿ ಆದಿವಾಸಿಗಳು. ಇವರಲ್ಲಿ ಹಲವು ವಿಧ. ಪ್ರಕೃತಿ ಮಡಿಲಿನ ಪಾರಂಪರಿಕ ಪಶುಪಾಲಕ ಅಲೆಮಾರಿ ಆದಿವಾಸಿಗಳು, ಪಾರಂಪರಿಕ ಧಾರ್ಮಿಕ ಭಿಕ್ಷಾವೃತ್ತಿಯ ಅಲೆಮಾರಿ ಆದಿವಾಸಿಗಳು. ಮತ್ತು ಆಧುನಿಕ ವೈಪರಿತ್ಯಗಳ ಹಿನ್ನೆಲೆಯಲ್ಲಿ ಉಗಮಗೊಂಡ ಅಲೆಮಾರಿ ಜನಸಮೂಹಗಳು. ವಿಶ್ವಸಂಸ್ಥೆಯ ಇತ್ತೀಚಿನ ಒಂದು ಅಂದಾಜಿನ ಪ್ರಕಾರ ವಿಶ್ವದಲ್ಲಿ ಶೇಕಡ ೨೦ ರಷ್ಟು ಜನ ಅಲೆಮಾರಿಗಳಿರುವರು. ದೇಶದ ಜನಸಂಖ್ಯೆಯನ್ನು ಗುರುತಿಸಲು ಜನಗಣತಿಯನ್ನು ೧೮೮೧ರಲ್ಲಿ ಆರಂಭಿಸಲಾಯಿತು. ೧೮೮೧ರ ಜನಗಣತಿಯಲ್ಲಿ ಭಾರತದ ೨೬೩೮ ಜಾತಿಗಳನ್ನು ೧೪೦೦೦ ರೀತಿಯಲ್ಲಿ ಇಂಗ್ಲೀಷ್ ಭಾಷೆಯ ಕಾಗುಣಿತ(Spelling)ಗಳಲ್ಲಿ ಬರೆಯಲಾಗಿದೆ (Singh, K S: 1996:3). ಭಾರತದ ೧೮೮೧ ರ ಜನಗಣತಿಯಲ್ಲಿ ಒಟ್ಟು ೧೯೨೪ ಜಾತಿ ಮತ್ತು ಬುಡಕಟ್ಟು ಸಮುದಾಯಗಳು ದಾಖಲಾಗಿವೆ. ಇದರಲ್ಲಿ ೮೫೫ ಮಹತ್ವದ ಜಾತಿ ಮತ್ತು ಬುಡಕಟ್ಟು ಸಮುದಾಯಗಳು ಹಾಗೂ ಸಾವಿರ ಜನರೊಳಗಿರುವ ೧೦೭೪ ಅಲ್ಪಸಂಖ್ಯಾತ ಜಾತಿ ಮತ್ತು ಬುಡಕಟ್ಟುಗಳು ದಾಖಲಾಗಿರುವುದನ್ನು ಕಾಣಬಹುದು (Eustace, J Kitts: 1982). ೧೯೪೫ ರಲ್ಲಿ ಸ್ಥಾಪನೆಯಾದ ಭಾರತೀಯ ಮಾನವ ಸರ್ವೇಕ್ಷಣಾ ಸಂಸ್ಥೆಯು ೨ ನೇ ಅಕ್ಟೋಬರ್ ೧೯೮೫ ರಿಂದ ೩೧ ನೇ ಮಾರ್ಚ್ ೧೯೯೨ರವರೆಗೆ ಭಾರತೀಯ ಜನ (People of India) ಯೋಜನೆಯನ್ನು ಹಮ್ಮಿಕೊಂಡು ಪೂರ್ಣಗೊಳಿಸಿತು. ಭಾರತೀಯ ಆಡಳಿತ ಸೇವೆಯಲ್ಲಿದ್ದ ಕೆ ಎಸ್ ಸಿಂಗ್ ಅವರು ಭಾರತೀಯ ಮಾನವ ಸರ್ವೇಕ್ಷಣಾ ಸಂಸ್ಥೆಯ ಡಿರೆಕ್ಟರ್ ಜನರಲ್ ಆಗಿ ಸೇವೆಸಲ್ಲಿಸಿ ಭಾರತೀಯ ಜನ ಹಾಗೂ ಬುಡಕಟ್ಟುಗಳ ಕುರಿತು ಅಪಾರ ಅನುಭವ ಹೊಂದಿದ್ದರು. ಅವರು ಭಾರತೀಯ ಜನ ಯೋಜನೆಯನ್ನು ಪೂರ್ಣಗೊಳಿಸಿದರು. ಈ ಯೋಜನೆಯ ಆರಂಭದಲ್ಲಿ ಭಾರತದಲ್ಲಿ ೬೭೪೮ ಸಮುದಾಯಗಳನ್ನು ಗುರುತಿಸಲಾಗಿತ್ತು. ಅಂತಿಮದಲ್ಲಿ ೪೬೩೫ ಸಮುದಾಯಗಳ ಅಧ್ಯಯನ ಸಾಧ್ಯವಾಯಿತು (Singh, K S: 1996:Vol.VIII:ix-x). ಇದರಿಂದ ಭಾರತೀಯ ಸಮುದಾಯಗಳ ಗುರುತಿಸುವಿಕೆಯು ಸರಳವಾಯಿತೆನ್ನಬಹುದು. ನವದೆಹಲಿಯ ರಾಷ್ಟ್ರೀಯ ವಿಮುಕ್ತ, ಅಲೆಮಾರಿ ಮತ್ತು ಅರೆ ಅಲೆಮಾರಿ ಬುಡಕಟ್ಟುಗಳ ಆಯೋಗದ ಅಂದಾಜು

ಪಟ್ಟಿಯ ಪ್ರಕಾರ ಭಾರತದ ೨೩ ರಾಜ್ಯಗಳಲ್ಲಿ ಮತ್ತು ೫ ಕೇಂದ್ರಾಡಳಿತ ಪ್ರದೇಶಗಳಲ್ಲಿ ಒಟ್ಟು ೭೪೯ ವಿಮುಕ್ತ ಮತ್ತು ಅಲೆಮಾರಿ ಸಮುದಾಯಗಳು ಅಸ್ತಿತ್ವದಲ್ಲಿರುವುದನ್ನು ಅರಿಯಬಹುದು (ಭಾರತೀಯ ವಿಮುಕ್ತ ಮತ್ತು ಅಲೆಮಾರಿ ಬುಡಕಟ್ಟುಗಳ ರಾಜ್ಯವಾರು ಇಳಿಮುಖಿ ಸಂಖ್ಯೆಯ ಕೋಷ್ಟಕ ಗಮನಿಸಿ). ಪ್ರಸ್ತುತ ಭಾರತದಲ್ಲಿ ಇವುಗಳ ಒಟ್ಟು ಜನಸಂಖ್ಯೆ ಸುಮಾರು ೧೦ ಕೋಟಿಯನ್ನು ಮೀರಿದೆ. ಅಂದರೆ ಭಾರತದ ಒಟ್ಟು ಜನಸಂಖ್ಯೆಯ ಸುಮಾರು ಶೇಕಡ ೧೦ರಷ್ಟು ಜನ ಈ ಹಿನ್ನೆಲೆಯವರಿರುವರು. ಈ ಪಟ್ಟಿಯಲ್ಲಿಯ ಹಲವು ಸಮುದಾಯಗಳು ಬೇರೆ ಬೇರೆ ರಾಜ್ಯಗಳಲ್ಲಿ ಮತ್ತು ಕೇಂದ್ರಾಡಳಿತ ಪ್ರದೇಶಗಳಲ್ಲಿಯೂ ಕಾಣಸಿಗುವವು. ಮಹಾರಾಷ್ಟ್ರ ರಾಜ್ಯದಲ್ಲಿ ಅತ್ಯಧಿಕ ಅಂದರೆ ೭೩ ಅಲೆಮಾರಿ ಸಮುದಾಯಗಳು ಅಸ್ತಿತ್ವದಲ್ಲಿದ್ದರೆ ಎರಡನೆಯ ಸ್ಥಾನ ೫೬ ಅಲೆಮಾರಿ ಸಮುದಾಯಗಳನ್ನು ಹೊಂದಿದ್ದ ಕರ್ನಾಟಕ ರಾಜ್ಯಕ್ಕೆ ಸಲ್ಲುತ್ತದೆ. ಆದರೆ, ಭಾರತ ಸಂವಿಧಾನದ ಮೀಸಲಾತಿಯಲ್ಲಿ ಈ ಸಮುದಾಯಗಳು ಪರಿಶಿಷ್ಟರ ಮತ್ತು ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಹಲವೆಡೆ ಹಂಚಿಹೋಗಿವೆ.

ಅಲೆಮಾರಿ ಎಂಬ ಪದಕ್ಕೆ ತಮಿಳಿನಲ್ಲಿ ಪೊಕ್ಕನ್, ತುಳುವಿನಲ್ಲಿ ತೆಂಡುಳಿ, ತೆಲುಗಿನಲ್ಲಿ ತಿರುಗುಬೋತು, ಮಲೆಯಾಳಂನಲ್ಲಿ ತೆಂಟಿ, ಮರಾಠಿಯಲ್ಲಿ ಭಟಕ್ಯಾ, ಹಿಂದಿಯಲ್ಲಿ ಸಂಚಾರಿ, ಘುಮಂತು, ಗ್ರೀಕಿನಲ್ಲಿ ನೆಮಿನ್ (nemein), ಲ್ಯಾಟಿನಿನಲ್ಲಿ ನೋಮಾಸ್ (nomas), ಇಂಗ್ಲಿಷಿನಲ್ಲಿ ನೊಮ್ಯಾಡ್ (nomad), ಜೊತೆಗೆ ಪರದೇಶಿ, ನೆಲೆಯಿಲ್ಲದವರು, ದೇಶ ಸಂಚಾರಿಗಳು, ಪರಸ್ಥಳದವರು, ಹೊರಗಡೆಯವರು, ಉಚಲ್ಯಾ, ಜಿಪ್ಸಿ, ಬೀಡು ಬಿಡುವವರು, ಗುಳೆ ಹೋಗುವವರು, ವಲಸಿಗರು, ಗಿರಿಜನರು ಸನ್ಯಾಸಿಗಳು ಎಂಬ ಇತ್ಯಾದಿ ಹೆಸರುಗಳಿಂದಲೂ ಕರೆಯಲಾಗುತ್ತದೆ. ಭಿಕ್ಷಾ ವೃತ್ತಿಯ ಹಿನ್ನೆಲೆಯಲ್ಲಿ ಇವರನ್ನು ತಮಿಳಿನಲ್ಲಿ ಪಿಚ್ಚೈಕರಾ, ಹಿಂದಿಯಲ್ಲಿ ಭಿಕಾರಿ, ಕನ್ನಡದಲ್ಲಿ ಭಿಕ್ಷುಕರೆಂತಲೂ ಗುರುತಿಸಲಾಗುವುದು. ಜನಪದರು ಇವರನ್ನು ಗೋಸಾಯಿ, ಜಂಗಾಲಿ, ಜಂಗಮ, ಜೋಗಿ, ದಾಸಯ್ಯ ಎಂತಲೂ ಕರೆಯುವರು. ಮಾನವಶಾಸ್ತ್ರಜ್ಞರು ಆರಂಭದಲ್ಲಿ ಪಶುಪಾಲನೆಯ ಹಿನ್ನೆಲೆಯವರನ್ನು ಮಾತ್ರ ಅಲೆಮಾರಿ ಸಮುದಾಯದವರೆಂದು ಗುರುತಿಸಿದ್ದಾರೆ. ಎನ್ಸೈಕ್ಲೋಪೆಡಿಯ ಬ್ರಿಟಾನಿಕಾದ ಪ್ರಕಾರ ಅಲೆಮಾರಿತನವು ಒಂದು ಜೀವನ ವಿಧಾನ. ಬೇಟೆ ಮತ್ತು ಆಹಾರ ಸಂಗ್ರಹಣೆ, ಪಶುಪಾಲನೆ ಅಥವಾ ವ್ಯಾಪಾರಕ್ಕಾಗಿ ಮಾನವ ಒಂದೆಡೆ ನೆಲೆಯೂರದೇ, ದಿಕ್ಕುದೆಸೆಯಿಲ್ಲದ ಅಥವಾ ಕಾಲಕ್ರಮಾನುಸಾರದ ಅಲೆಯುವಿಕೆಯನ್ನು ಅಲೆಮಾರಿತನ ಎನ್ನಲಾಗುತ್ತದೆ ಎಂದು ಅರ್ಥೈಸಿದೆ. ಇದು ವಲಸೆ ಪ್ರಕ್ರಿಯೆಗೂ ಭಿನ್ನ.

ನಿರಂತರ ಅಥವಾ ನಿಯಮಿತ ಅಲೆಮಾರಿ ಮತ್ತು ಅರೆ ಅಲೆಮಾರಿ ಸಮುದಾಯಗಳ ಅಥವಾ ಗುಂಪುಗಳ ಲಕ್ಷಣಗಳನ್ನು ಹೀಗೆ ಪಟ್ಟಿ ಮಾಡಬಹುದು.

೧. ಪಾರಂಪರಿಕ ವನ್ಯಜೀವಿಗಳ ಬೇಟೆ, ಪಳಗಿಸುವಿಕೆ ಮತ್ತು ಪ್ರದರ್ಶನ; ಪಶುಪಾಲನೆ; ನಾಟಿವೈದ್ಯ; ಕಲಾ ಪ್ರದರ್ಶನ; ದೈವಾರಾಧನೆ, ಪ್ರದರ್ಶನ ಮತ್ತು ಭಿಕ್ಷಾಟನೆ ಇತ್ಯಾದಿಗಳಿಗಾಗಿ

ಅಲೆತ. ಉದಾಹರಣೆ ಕರಡಿ, ಕೋತಿ, ಹಾವು, ನಂದಿಗಳ ಪ್ರದರ್ಶನ: ಕುರಿ, ಮೇಕೆ, ಕತ್ತೆ, ಹಂದಿ, ಒಂಟೆಗಳ ಪಾಲನೆ: ಹಗಲುವೇಷ, ಬುರ‍್ರಕಥೆ, ಗೋಂಧಳ, ದಾಸರ ಪದ, ಯಕ್ಷಗಾನ, ಬಯಲಾಟ, ತೊಗಲು ಗೊಂಬೆಯಾಟ,ದೊಂಬರಾಟ, ಮಾರಮ್ಮ ದೈವ ಇತ್ಯಾದಿಗಳ ಪ್ರದರ್ಶನ. ನಾಟಿವೈದ್ಯ, ಸಣ್ಣಪುಟ್ಟ ವಸ್ತುಗಳ ಮಾರಾಟ ಮತ್ತು ರಿಪೇರಿ, ಹಾಳಾದ ಪ್ಲಾಸ್ಟಿಕ್ ವಸ್ತುಗಳನ್ನು ಆರಿಸಿ ಮಾರಲು ನಡೆಸುವ ಅಲೆಮಾರಿ ಜೀವನ.

೨. ನಿರಾಡಂಬರ, ನಿಷ್ಕಪಟ, ಸಹಜ ಸರಳ ನಿರಕ್ಷರಿಗಳು. ಬಂಡವಾಳ ಶೂನ್ಯ ಅಥವಾ ಅಲ್ಪ ಬಂಡವಾಳದ ಕಾಯಕ ಜೀವಿಗಳು.

೩. ಸರ್ವಚೇತನವಾದಿಗಳು, ಪ್ರಕೃತಿಯ ಅಗೋಚರ ಶಕ್ತಿಗಳ ಸಿದ್ಧಹಸ್ತರು.

೪. ಮರಗು ಭಾಷೆ ಅವಲಂಬಿತ ಮಾತೃಭಾಷಿಗಳು.

೫. ಹಾಳು ಗುಡಿ ಗುಂಡಾರಗಳಲ್ಲಿ, ಬಯಲಿನ ಮರಗಿಡಗಳ ಕೆಳಗೆ ಅಥವಾ ನಗರಗಳ ಕೊಳಚೆ ಪ್ರದೇಶಗಳಲ್ಲಿ ಪ್ರತ್ಯೇಕ ಮತ್ತು ತಾತ್ಕಾಲಿಕ ವಾಸ.

ಈ ಲಕ್ಷಣಗಳೆಲ್ಲವೂ ಪಶುಪಾಲಕ, ಪ್ರದರ್ಶನ ಹಿನ್ನೆಲೆಯ ಪಾರಂಪರಿಕ ಭಿಕ್ಷುಕ ಮತ್ತು ಬಂಡವಾಳ ಶೂನ್ಯ ಅಥವಾ ಅಲ್ಪ ಬಂಡವಾಳದ ವೃತ್ತಿ ಅವಲಂಬಿತ ಅಲೆಮಾರಿಗಳಿಗೆ ಸಮಾನವಾಗಿ ಪೂರ್ಣಪ್ರಮಾಣದಲ್ಲಿ ಅನ್ವಯಿಸುವುದು ಕಷ್ಟಸಾಧ್ಯ.

ಇತ್ತೀಚೆಗೆ ಹಲವೆಡೆ ಕೆಲವು ಅಲೆಮಾರಿ ಸಮುದಾಯಗಳು ಸರಕಾರದ ಯೋಜನೆಗಳಿಂದ ಮತ್ತು ಸಮುದಾಯಗಳ ಸಹಕಾರದಿಂದ ನೆಲೆಕಂಡಿವೆ. ಆದರೂ, ಬದುಕಿಗಾಗಿ ತಿಂಗಳುಗಟ್ಟಲೇ ಸಹಸ್ರಾರು ಕಿಲೋಮೀಟರ ಅಂತರದ ಅಲೆಮಾರಿತನ ಮುಂದುವರೆಸಿವೆ. ಇವುಗಳನ್ನು ಅರೆ ಅಲೆಮಾರಿಗಳೆಂದು ಕರೆಯಬಹುದಾಗಿದೆ. ಸಮುದಾಯಗಳ ಆರ್ಥಿಕ, ಶೈಕ್ಷಣಿಕ, ರಾಜಕೀಯ ಮತ್ತು ಸಾಮಾಜಿಕ ಭದ್ರತೆಯ ಹಿನ್ನೆಲೆಯಲ್ಲಿ ಅಲೆಮಾರಿ ಮತ್ತು ಅರೆ ಅಲೆಮಾರಿತನದ ಸ್ಥಿತಿಯನ್ನು ನಿರ್ಧರಿಸಬಹುದಾಗಿದೆ.

ಬ್ರಿಟಿಶ್ ಸರಕಾರ ಉತ್ತರ ಭಾರತದಲ್ಲಿ ೧೮೭೧ರಲ್ಲಿ ಪ್ರಕೃತಿ ಅವಲಂಬಿತ ಮತ್ತು ತನ್ನ ಆಡಳಿತದ ಪರಿಧಿಗೆ ಬರದೇ ಇರುವ ಸಮುದಾಯಗಳನ್ನು ಗುರುತಿಸಿ ಅವುಗಳನ್ನು ಅಪರಾಧಿ ಬುಡಕಟ್ಟುಗಳೆಂದು ಅಧಿಸೂಚಿಸಿತು. ಈ ಅಧಿನಿಯಮವನ್ನು ೧೯೧೧ರಲ್ಲಿ ಬ್ರಿಟಿಷರು ಆಳುವ ಭಾರತದಲ್ಲಿ ಪರಿಷ್ಕರಿಸಿ ವಿಸ್ತರಿಸಲಾಯಿತು. ಮುಂದುವರಿದು ೧೮೯೭, ೧೯೧೧, ೧೯೨೩, ೧೯೨೪ ಮತ್ತು ೧೯೪೭ ಈ ವರ್ಷಗಳಲ್ಲಿ ಈ ಅಧಿನಿಯಮಕ್ಕೆ ತಿದ್ದುಪಡಿ ಮಾಡಿ ಪರಿಷ್ಕರಿಸಲಾಯಿತು. ಇದರಿಂದ ಪೋಲೀಸರಿಗೆ ಈ ಗುಂಪುಗಳನ್ನು ಹಿಡಿತದಲ್ಲಿರಿಸಲು ಮತ್ತು ದಂಡಿಸಲು ಹೆಚ್ಚಿನ ಅಧಿಕಾರ ಪ್ರಾಪ್ತವಾಯಿತು. ಈ ಗುಂಪುಗಳನ್ನು ವಸಾಹತುಗಳಲ್ಲಿ ಬೇಲಿಹಾಕಿ ಇಡಲಾಗುತ್ತಿತ್ತು. ಇವರು ದಿನಾಲು ಅಲ್ಲಿಯ ಅಧಿಕಾರಿಗಳಿಗೆ ಹಾಜರಿಯನ್ನು ನೀಡುವುದು ಕಡ್ಡಾಯವಾಗಿತ್ತು. ಇವರ ವಸಾಹತುಗಳು ಇವರಿಗೆ ಜೇಲುಗಳಾಗಿದ್ದವು. ಇವರ

ಮಕ್ಕಳಿಗಾಗಿ ಶಾಲೆಗಳನ್ನು ಹಾಗೂ ಇವರಿಗೆ ತರಬೇತಿ ನೀಡಲು ತರಬೇತಿ ಕೇಂದ್ರಗಳನ್ನು ಆರಂಭಿಸಲಾದವು. ಇವರನ್ನು ನೋಡಿಕೊಳ್ಳಲು ಒಬ್ಬ ಸಮಾಜ ಕಲ್ಯಾಣ ಅಧಿಕಾರಿಯೂ ಇರುತ್ತಿದ್ದರು. ಈ ತರಹದ ಅಪರಾಧಿ ಬುಡಕಟ್ಟುಗಳ ವಸಾಹತುಗಳು ಕರ್ನಾಟಕದ ಗದಗ, ಹುಬ್ಬಳ್ಳಿ, ಧಾರವಾಡ, ಬಾಗಲಕೋಟೆ, ಬಿಜಾಪುರ, ಇಂಡಿ ಇತ್ಯಾದಿಗಳಲ್ಲಿ ಸ್ಥಾಪನೆಗೊಂಡವು. ಆದರೆ, ವ್ಯಕ್ತಿಗತ ಮಾಡುವ ತಪ್ಪುಗಳನ್ನು ಅಥವಾ ಅಪರಾಧಗಳನ್ನು ಸಮುದಾಯಕ್ಕೆ ಸಮೀಕರಿಸುವುದು ತಪ್ಪೆಂದು ೧೯೪೭ ರಲ್ಲಿ ಮದ್ರಾಸ್ ಮತ್ತು ೧೯೪೯ ರಲ್ಲಿ ಮುಂಬೈ ಅಧಿಪತ್ಯಗಳಲ್ಲಿಯ ಅಪರಾಧಿ ಬುಡಕಟ್ಟು ಅಧಿನಿಯಮವನ್ನು ಹಿಂದಕ್ಕೆ ತೆಗೆದುಕೊಳ್ಳಲಾಯಿತು. ಮುಂದೆ ಭಾರತೀಯ ಅಪರಾಧಿ ಬುಡಕಟ್ಟುಗಳ ತನಿಖಾ ಸಮಿತಿಯ ಮೌಲ್ಯಮಾಪನದ ವರದಿಯ ಮೇರೆಗೆ ೧೯೫೨ ರಲ್ಲಿ ಅಪರಾಧಿ ಬುಡಕಟ್ಟುಗಳನ್ನು ವಿಮುಕ್ತಗೊಳಿಸಲು ಈ ಸಂಬಂಧದ ಅಧಿನಿಯಮವನ್ನು ರದ್ದುಪಡಿಸಲಾಯಿತು. ಅಂದಿನಿಂದ ಈ ಗುಂಪುಗಳನ್ನು ವಿಮುಕ್ತ ಬುಡಕಟ್ಟುಗಳು ಇಲ್ಲವೆ ಡಿ ನೋಟಿಫೈಡ್ ಟ್ರೈಬ್ಸ್ (DNT) ಎಂದು ಕರೆಯಲಾಗುವುದು. ಹೀಗಾಗಿ ಸ್ವತಂತ್ರ ಪೂರ್ವದ ಬ್ರಿಟಿಷ್ ಸರಕಾರದಲ್ಲಿಯೇ ಈ ಗುಂಪುಗಳ ಗುರುತಿಸುವಿಕೆಯ ಕಾರ್ಯ ನಡೆದಿರುವುದಲ್ಲದೇ ಇವರಿಗೆ ಪ್ರತ್ಯೇಕ ಮೀಸಲಾತಿ ವ್ಯವಸ್ಥೆಯನ್ನು ಕಲ್ಪಿಸಲಾಗಿತ್ತು ಎಂಬುವುದು ಸ್ಪಷ್ಟವಾಗುತ್ತದೆ. ೧೯೬೧ರ ಜನಗಣತಿಯ ಪ್ರಕಾರ ಭಾರತದಲ್ಲಿ ೨,೭೧,೦೨,೧೮೦ ಜನರು ಈ ಹಿನ್ನೆಲೆಯನ್ನು ಹೊಂದಿದ್ದರೆಂದು ದಾಖಲಿಸಲಾಗಿದೆ.

ಅಲೆಮಾರಿ ಮತ್ತು ವಿಮುಕ್ತ ಬುಡಕಟ್ಟುಗಳ ಅಗಾಧವಾದ ಪ್ರಾಕೃತಿಕ ಜ್ಞಾನ, ಕಲೆ ಮತ್ತು ಶ್ರಮವನ್ನು ಸರಕಾರ ಮತ್ತು ಸಮಾಜಗಳು ಕಾಲಾಂತರದಲ್ಲಿ ಗೌರವಪೂರ್ಣವಾಗಿ ಗೌರವಿಸಲಿಲ್ಲ. ಜಾಗತೀಕರಣ ಮತ್ತು ಆಧುನಿಕರಣದ ಗುಂಗಿನಲ್ಲಿ ಜನರು ಪರ್ಯಾಯ ವ್ಯವಸ್ಥೆಗಳತ್ತ ಮುಖ ಮಾಡಿದರು. ಅಲೆಮಾರಿಗಳ ಮೌಖಿಕ ಕಾವ್ಯ ಕಲೆ, ನೃತ್ಯಗಳು ನೆಲಕಚ್ಚಿದವು. ಕಲೆಗಳು ಕಳೆಗುಂದಿ ಭಿಕ್ಷಾಟನೆಗೆ ಎಡೆಯಾದವು. ಸಾಮಾಜಿಕ, ಆರ್ಥಿಕ ಶೈಕ್ಷಣಿಕ ಮತ್ತು ರಾಜಕೀಯ ಸ್ಥಾನಮಾನಗಳು ಇಲ್ಲವಾಗಿ ಶೋಷಣೆಗೆ ಒಳಗಾಗಿ ಬದುಕಿನ ಅತಂತ್ರತೆಗೆ ಗುರಿಯಾದವು. ಇವುಗಳ ವಿಮೋಚನೆಯು ಸಮುದಾಯಗಳ ಮತ್ತು ಸರಕಾರದ ಇಚ್ಛಾಶಕ್ತಿಯ ಕೊರತೆಯಿಂದ ವಿಳಂಬವಾಗುತ್ತಿದೆ. ಸಮಾಜ ಪಾರಂಪರಿಕ ಜ್ಞಾನ ಶಾಖೆಯನ್ನೇ ಕಳೆದುಕೊಳ್ಳುತ್ತಿದೆ.

ಸ್ವತಂತ್ರ ಭಾರತದಲ್ಲಿ ಡಾ ಬಿ ಆರ್ ಅಂಬೇಡ್ಕರ್ ಅವರ ಸಾಮಾಜಿಕ ಕಳಕಳಿಯ ಚಿಂತನೆಯ ಹಿನ್ನೆಲೆಯಲ್ಲಿ ವಿಮುಕ್ತ, ಅಲೆಮಾರಿ, ಅರೆ ಅಲೆಮಾರಿ ಬುಡಕಟ್ಟುಗಳನ್ನು ಮತ್ತು ದಲಿತ ಸಮುದಾಯಗಳನ್ನು ಸಂವಿಧಾನಬದ್ಧವಾಗಿ ಪರಿಶಿಷ್ಟ ಜಾತಿ, ಪಂಗಡ ಮತ್ತು ಹಿಂದುಳಿದ ವರ್ಗಗಳ ಪಟ್ಟಿಗಳಲ್ಲಿ ಇರಿಸಲಾಗಿದೆ. ಇವುಗಳ ರಾಜ್ಯವಾರು ವಿಮುಕ್ತ ಮತ್ತು ಅಲೆಮಾರಿ ಬುಡಕಟ್ಟುಗಳ ಪಟ್ಟಿ ಹೀಗಿದೆ.

## ಭಾರತೀಯ ವಿಮುಕ್ತ ಮತ್ತು ಅಲೆಮಾರಿ ಬುಡಕಟ್ಟುಗಳ ಸಂಖ್ಯೆ

| ಕ್ರಮ ಸಂಖ್ಯೆ | ರಾಷ್ಟ್ರ/ರಾಜ್ಯ/ ಕೇಂದ್ರಾಡಳಿತ ಪ್ರದೇಶ ಬುಡಕಟ್ಟು ಸಮುದಾಯಗಳು | ಸಮುದಾಯಗಳ ಸಂಖ್ಯೆ ಪಜಾ | ಪಪಂ | ಹಿಂವ | ಒಟ್ಟು | ಅ+ಆ ಒಟ್ಟು |
|---|---|---|---|---|---|---|
| | ಭಾರತ | | | | | |
| | ಅ. ವಿಮುಕ್ತ | ೨೩೫ | ೪೭ | ೨೦೭ | ೪೮೯ | |
| | ಆ. ಅಲೆಮಾರಿ | ೬೫ | ೩೦ | ೧೬೫ | ೨೬೦ | ೭೪೯ |
| ೦೧ | ಮಹಾರಾಷ್ಟ್ರ | | | | | |
| | ಅ. ವಿಮುಕ್ತ | ೧೨ | ೫ | ೧೯ | ೩೬ | |
| | ಆ. ಅಲೆಮಾರಿ | ೧ | ೦ | ೩೬ | ೩೭ | ೭೩ |
| ೦೨ | ಕರ್ನಾಟಕ | | | | | |
| | ಅ. ವಿಮುಕ್ತ | ೯ | ೨ | ೧೩ | ೨೪ | |
| | ಆ. ಅಲೆಮಾರಿ | ೫ | ೩ | ೨೪ | ೩೨ | ೫೬ |
| ೦೩ | ಉತ್ತರ ಪ್ರದೇಶ | | | | | |
| | ಅ. ವಿಮುಕ್ತ | ೧೯ | ೦ | ೧೩ | ೩೨ | |
| | ಆ. ಅಲೆಮಾರಿ | ೬ | ೦ | ೯ | ೧೫ | ೪೭ |
| ೦೪ | ಗುಜರಾತ | | | | | |
| | ಅ. ವಿಮುಕ್ತ | ೪ | ೩ | ೧೦ | ೧೭ | |
| | ಆ. ಅಲೆಮಾರಿ | ೪ | ೩ | ೧೫ | ೨೨ | ೩೯ |
| ೦೫ | ರಾಜಸ್ಥಾನ | | | | | |
| | ಅ. ವಿಮುಕ್ತ | ೧೬ | ೫ | ೬ | ೨೭ | |
| | ಆ. ಅಲೆಮಾರಿ | ೫ | ೦ | ೭ | ೧೨ | ೩೯ |
| ೦೬ | ಮಧ್ಯ ಪ್ರದೇಶ | | | | | |
| | ಅ. ವಿಮುಕ್ತ | ೧೪ | ೫ | ೭ | ೨೬ | |
| | ಆ. ಅಲೆಮಾರಿ | ೧ | ೦ | ೧೧ | ೧೨ | ೩೮ |
| ೦೭ | ಒರಿಸ್ಸಾ | | | | | |
| | ಅ. ವಿಮುಕ್ತ | ೧೪ | ೫ | ೮ | ೨೭ | |
| | ಆ. ಅಲೆಮಾರಿ | ೭ | ೩ | ೦ | ೧೦ | ೩೭ |
| ೦೮ | ಚಂಡಿಗಢ* | | | | | |
| | ಅ. ವಿಮುಕ್ತ | ೧೧ | ೦ | ೧೪ | ೨೫ | |
| | ಆ. ಅಲೆಮಾರಿ | ೪ | ೦ | ೭ | ೧೧ | ೩೬ |

| | | | | | | |
|---|---|---|---|---|---|---|
| ೦೯ | ಹರಿಯಾಣ | | | | | |
| | ಅ. ವಿಮುಕ್ತ | ೧೧ | ೦ | ೧೩ | ೨೪ | |
| | ಆ. ಅಲೆಮಾರಿ | ೩ | ೦ | ೮ | ೧೧ | ೩೫ |
| ೧೦ | ಪಂಜಾಬ | | | | | |
| | ಅ. ವಿಮುಕ್ತ | ೯ | ೦ | ೧೦ | ೧೯ | |
| | ಆ. ಅಲೆಮಾರಿ | ೬ | ೦ | ೯ | ೧೫ | ೩೪ |
| ೧೧ | ಹಿಮಾಚಲ ಪ್ರದೇಶ | | | | | |
| | ಅ. ವಿಮುಕ್ತ | ೧೩ | ೦ | ೫ | ೧೮ | |
| | ಆ. ಅಲೆಮಾರಿ | ೩ | ೩ | ೯ | ೧೫ | ೩೩ |
| ೧೨ | ತಮಿಳುನಾಡು | | | | | |
| | ಅ. ವಿಮುಕ್ತ | ೬ | ೨ | ೧೮ | ೨೬ | |
| | ಆ. ಅಲೆಮಾರಿ | ೩ | ೧ | ೩ | ೭ | ೩೩ |
| ೧೩ | ಆಂಧ್ರ ಪ್ರದೇಶ | | | | | |
| | ಅ. ವಿಮುಕ್ತ | ೯ | ೫ | ೧೫ | ೨೯ | |
| | ಆ. ಅಲೆಮಾರಿ | ೦ | ೦ | ೩ | ೩ | ೩೨ |
| ೧೪ | ದೆಹಲಿ* | | | | | |
| | ಅ. ವಿಮುಕ್ತ | ೧೪ | ೦ | ೧೦ | ೨೪ | |
| | ಆ. ಅಲೆಮಾರಿ | ೪ | ೦ | ೧ | ೫ | ೨೯ |
| ೧೫ | ಉತ್ತರಾಂಚಲ | | | | | |
| | ಅ. ವಿಮುಕ್ತ | ೧೮ | ೦ | ೦ | ೧೮ | |
| | ಆ. ಅಲೆಮಾರಿ | ೬ | ೧ | ೦ | ೭ | ೨೫ |
| ೧೬ | ಪಶ್ಚಿಮ ಬಂಗಾಳ | | | | | |
| | ಅ. ವಿಮುಕ್ತ | ೧೧ | ೩ | ೩ | ೧೭ | |
| | ಆ. ಅಲೆಮಾರಿ | ೦ | ೨ | ೨ | ೪ | ೨೧ |
| ೧೭ | ತ್ರಿಪುರ | | | | | |
| | ಅ. ವಿಮುಕ್ತ | ೫ | ೧ | ೬ | ೧೨ | |
| | ಆ. ಅಲೆಮಾರಿ | ೪ | ೧ | ೩ | ೮ | ೨೦ |
| ೧೮ | ಪಾಂಡಿಚೇರಿ* | | | | | |
| | ಅ. ವಿಮುಕ್ತ | ೩ | ೦ | ೧೬ | ೧೯ | |
| | ಆ. ಅಲೆಮಾರಿ | ೧ | ೦ | ೦ | ೧ | ೨೦ |
| ೧೯ | ಛತ್ತೀಸಗಢ | | | | | |
| | ಅ. ವಿಮುಕ್ತ | ೧೩ | ೪ | ೦ | ೧೭ | |
| | ಆ. ಅಲೆಮಾರಿ | ೧ | ೧ | ೦ | ೨ | ೧೯ |

| | | | | | | |
|---|---|---|---|---|---|---|
| ೨೦ | ಬಿಹಾರ | | | | | |
| | ಅ. ವಿಮುಕ್ತ | ೯ | ೨ | ೪ | ೧೫ | |
| | ಆ. ಅಲೆಮಾರಿ | ೦ | ೧ | ೧ | ೨ | ೧೭ |
| ೨೧ | ಅಸ್ಸಾಂ | | | | | |
| | ಅ. ವಿಮುಕ್ತ | ೦ | ೦ | ೯ | ೯ | |
| | ಆ. ಅಲೆಮಾರಿ | ೦ | ೦ | ೬ | ೬ | ೧೫ |
| ೨೨ | ಜಾರ್ಖಂಡ | | | | | |
| | ಅ. ವಿಮುಕ್ತ | ೯ | ೩ | ೦ | ೧೨ | |
| | ಆ. ಅಲೆಮಾರಿ | ೦ | ೧ | ೦ | ೧ | ೧೩ |
| ೨೩ | ಜಮ್ಮು ಮತ್ತು ಕಾಶ್ಮೀರ | | | | | |
| | ಅ. ವಿಮುಕ್ತ | ೨ | ೧ | ೧ | ೪ | |
| | ಆ. ಅಲೆಮಾರಿ | ೦ | ೪ | ೩ | ೭ | ೧೧ |
| ೨೪ | ಕೇರಳ | | | | | |
| | ಅ. ವಿಮುಕ್ತ | ೨ | ೧ | ೩ | ೬ | |
| | ಆ. ಅಲೆಮಾರಿ | ೧ | ೪ | ೦ | ೫ | ೧೧ |
| ೨೫ | ದಮನ್ ಮತ್ತು ದಿವ್* | | | | | |
| | ಅ. ವಿಮುಕ್ತ | ೧ | ೦ | ೨ | ೩ | |
| | ಆ. ಅಲೆಮಾರಿ | ೦ | ೦ | ೩ | ೩ | ೬ |
| ೨೬ | ಸಿಕ್ಕಿಮ್ | | | | | |
| | ಅ. ವಿಮುಕ್ತ | ೦ | ೦ | ೨ | ೨ | |
| | ಆ. ಅಲೆಮಾರಿ | ೦ | ೨ | ೦ | ೨ | ೪ |
| ೨೭ | ಗೋವ | | | | | |
| | ಅ. ವಿಮುಕ್ತ | ೦ | ೦ | ೦ | ೦ | |
| | ಆ. ಅಲೆಮಾರಿ | ೦ | ೦ | ೩ | ೩ | ೩ |
| ೨೮ | ದಾದ್ರ ಮತ್ತು ನಗರ ಹವೇಲಿ* | | | | | |
| | ಅ. ವಿಮುಕ್ತ | ೧ | ೦ | ೦ | ೧ | |
| | ಆ. ಅಲೆಮಾರಿ | ೦ | ೦ | ೨ | ೨ | ೩ |

*ಕೇಂದ್ರಾಡಳಿತ ಪ್ರದೇಶಗಳು

ಸಂಕ್ಷಿಪ್ತ ಪದ ವಿವರ: ಪಜಾ: ಪರಿಶಿಷ್ಟ ಜಾತಿ, ಪಪಂ:ಪರಿಶಿಷ್ಟ ಪಂಗಡ, ಹಿಂವ: ಹಿಂದುಳಿದ ವರ್ಗ, ಅ. ವಿಮುಕ್ತ: ವಿಮುಕ್ತ ಬುಡಕಟ್ಟುಗಳು, ಆ. ಅಲೆಮಾರಿ: ಅಲೆಮಾರಿ ಬುಡಕಟ್ಟುಗಳು,

ಆಧಾರ: ನವದೆಹಲಿಯ ರಾಷ್ಟ್ರೀಯ ವಿಮುಕ್ತ, ಅಲೆಮಾರಿ ಮತ್ತು ಅರೆ ಅಲೆಮಾರಿ ಬುಡಕಟ್ಟುಗಳ ಆಯೋಗದ ಮಾಹಿತಿ ೨೦೦೭.

ವಿಮುಕ್ತಗೊಳಿಸಿದ ೪೮೯ ಸಮುದಾಯಗಳಲ್ಲಿ ೨೯೫ ಪರಿಶಿಷ್ಟ ಜಾತಿ, ೪೭ ಪರಿಶಿಷ್ಟ ಪಂಗಡ ಮತ್ತು ೨೦೭ ಸಮುದಾಯಗಳಿಗೆ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಸ್ಥಾನ ಕಲ್ಪಿಸಲಾಗಿದೆ. ೨೬೦ ಅಲೆಮಾರಿ ಸಮುದಾಯಗಳಲ್ಲಿ ೬೫ ಪರಿಶಿಷ್ಟ ಜಾತಿ, ೩೦ ಪರಿಶಿಷ್ಟ ಪಂಗಡ ಮತ್ತು ೧೬೫ ಸಮುದಾಯಗಳಿಗೆ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಮೀಸಲಾತಿ ಪಡೆಯಲು ಅವಕಾಶ ಕಲ್ಪಿಸಲಾಗಿದೆ.

### ಕರ್ನಾಟಕದ ವಿಮುಕ್ತ ಮತ್ತು ಅಲೆಮಾರಿ ಸಮುದಾಯಗಳು

ಕರ್ನಾಟಕಕ್ಕೆ ಸಂಬಂಧಿಸಿದಂತೆಯೂ ೫೬ ವಿಮುಕ್ತ, ಅಲೆಮಾರಿ ಮತ್ತು ಅರೆ ಅಲೆಮಾರಿ ಬುಡಕಟ್ಟುಗಳಿರುವವು. ಇವುಗಳನ್ನು ಅನಂತರದ ಅವಧಿಗಳಲ್ಲಿ ಸಂವಿಧಾನಬದ್ಧವಾಗಿ ಪರಿಶಿಷ್ಟ ಜಾತಿ, ಪಂಗಡ ಮತ್ತು ಹಿಂದುಳಿದ ವರ್ಗಗಳ ಪಟ್ಟಿಗಳಲ್ಲಿ ಇರಿಸಲಾಗಿದೆ. ವಿಮುಕ್ತಗೊಳಿಸಿದ ೨೪ ಸಮುದಾಯಗಳಲ್ಲಿ ೯ ಪರಿಶಿಷ್ಟ ಜಾತಿ, ೨ ಪರಿಶಿಷ್ಟ ಪಂಗಡ ಮತ್ತು ೧೩ ಸಮುದಾಯಗಳಿಗೆ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಇದುವರೆಗೆ ಸ್ಥಾನ ಕಲ್ಪಿಸಲಾಗಿದೆ. ೩೨ ಅಲೆಮಾರಿ ಸಮುದಾಯಗಳಲ್ಲಿ ೫ ಪರಿಶಿಷ್ಟ ಜಾತಿ, ೩ ಪರಿಶಿಷ್ಟ ಪಂಗಡ ಮತ್ತು ೨೪ ಸಮುದಾಯಗಳನ್ನು ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಸ್ಥಾನ ಕಲ್ಪಿಸಲಾಗಿದೆ. ಈ ಸಮುದಾಯಗಳ ವಿವರ ಹೀಗಿದೆ.

**ವಿಮುಕ್ತ ಬುಡಕಟ್ಟುಗಳು (ಅಯ್ಯಂಗಾರ ಸಮಿತಿಯ ವರದಿ ಪ್ರಕಾರ): ಪರಿಶಿಷ್ಟ ಜಾತಿಯ** ೧. ಆದಿ ದ್ರಾವಿಡ, ೨. ಬಂಜಾರ, ಲಂಬಾಣಿ, ಲಂಬಾಡಾ, ಲಮಾನಿ, ಸುಗಾಲಿ, ಸುಕಾಲಿ, ೩. ದೋಮ್, ದೊಂಬರ, ಪೈದಿ, ಪಾನೊ, ೪. ಗಂಟಿ ಚೋರ್ಸ್, ೫. ಪಂಡಿ ಜೋಗೀಸ್, ೬. ಕೇಪ್‌ಮಾರಿಸ್, ೭. ಕೊರಚ, ಕೊರಚರ, ೮. ಮಾಲ, ೯. ಮಾಂಗ ಗಾರೂಡಿ; **ಪರಿಶಿಷ್ಟ ಪಂಗಡದ** ೧. ಭಿಲ್, ೨. ಪಾರ್ಧಿ,ಅಡ್ವಿಚಿಂಚೇರ್, ಫಾನ್ಸೆ ಪಾರ್ಧಿ,ಹರಣಶಿಕಾರಿ ಹಾಗೂ **ಹಿಂದುಳಿದ ವರ್ಗದ** ೧. ಬೈರಾಗಿ, ಬವಾನಿ, ಬಾವಾ, ೨. ಬೇಡರು, ೩. ಬೆರಿಯ, ೪. ಭಾಮ್ಟಾ, ೫. ಚಾರಾ, ಛಾರ, ಛಾರಾ, ೬. ಘಿಸಾಡಿ, ೭. ಜೋಗಿ, ಜೋಗೆರ, ಸನಜೋಗಿ, ೮. ಕಂಜರ ಭಾಟ, ೯. ಕಂಜರಿ, ಕಂಜರ್, ೧೦. ಮಸಣಜೋಗಿ, ೧೧. ನಟ್, ೧೨. ಗುಜರ್, ೧೩. ಮರವರ್.

**ಅಲೆಮಾರಿ ಬುಡಕಟ್ಟುಗಳು (ಬ್ರಿಟಿಷ್ ಕುಲಶಾಸ್ತ್ರೀಯ ಅಧ್ಯಯನಕಾರರ ಪ್ರಕಾರ): ಪರಿಶಿಷ್ಟ ಜಾತಿಯ** ೧. ಬೇಡ ಜಂಗಮ್, ಬುಡ್ಗ ಜಂಗಮ್, ೨. ಭೋವಿ, ಓಡ್, ಒಡ್ಡೆ, ವಡ್ಡರ್, ಒಡ್ಡರ್, ೩. ಕೊರಮ, ಕೊರವ, ಕೊರವರ್, ೪. ಮದಾರಿ, ೫. ಶಿಳ್ಳೇಕ್ಯಾತಾಸ್; ಪರಿಶಿಷ್ಟ ಪಂಗಡದ ೧. ಹಕ್ಕಿಪಿಕ್ಕಿ, ೨. ಮೇದ, ಮೇದಾರಿ, ಗೌರಿಗ, ಬುರುಡ, ೩. ತೋಡ. ಮತ್ತು ಹಿಂದುಳಿದ ವರ್ಗದ ೧. ಬಾಳಸಂತೋಷಿ, ೨. ಬಾಝಿಗರ, ೩. ಬೆಸ್ತರ್, ೪. ಬುಡಬುಡಕಿ, ದೇವಾರಿ, ಜೋಶಿ, ೫. ಛಪ್ಪರಬಂದ್, ೬. ಚಿತ್ರಕಥಿ ಜೋಶಿ, ೭. ದರವೇಸು, ೮. ದೊಂಬಿದಾಸ, ೯. ದುರ್ಗಮುರ್ಗಾ, ೧೦. ಗೋಂಧಳಿ, ೧೧. ಹೆಳವ, ೧೨. ಕಾಶಿಕಾಪ್ಡಿ, ತಿರುಮಾಲಿ, ೧೩. ಕೋಲ್ಹಾಟಿ, ೧೪. ಕೊರವರ್,

ಯರಕಲ, ಯರುಕಲ, ೧೫. ನಂದಿವಾಲಾ, ೧೬. ನಾಥಪಂಥಿ, ೧೭. ಪಿಚಿಗುಂಟಿಲಾ, ೧೮. ಸರಾನಿಯ, ೧೯. ಸಿಕ್ಕಲಿಗಾರ, ೨೦. ವಡಿ, ೨೧. ವೈದು, ೨೨. ವಾಸುದೇವ, ೨೩. ಮದಾರಿ, ೨೪. ಗೋಸಾವಿ, ಗೋಸಾಯಿ ಮತ್ತು ಅತೀತ್.

೧೯೫೨ ರಲ್ಲಿ ವಿಮುಕ್ತಗೊಂಡ ಅಲೆಮಾರಿ ಬುಡಕಟ್ಟುಗಳು ೧೯೫೦ ರಲ್ಲಿಯೇ ಪ್ರಕಟಗೊಂಡ ಪರಿಶಿಷ್ಟರ ಮೀಸಲಾತಿ ಪಟ್ಟಿಯಿಂದ ಹೊರಗುಳಿದು ೧.೨.೧೯೬೬ ರವರೆಗೆ ಸಂವಿಧಾನಬದ್ಧವಾಗಿ ಅನಾಥವಾಗಿದ್ದವು. ಈ ಸಮುದಾಯಗಳು ೧೯೬೬ ರಿಂದ ೪.೩.೧೯೭೭ರವರೆಗೆ ಕರ್ನಾಟಕ ರಾಜ್ಯದ ಅಲೆಮಾರಿ ಮತ್ತು ಅರೆ ಅಲೆಮಾರಿ ಸಮುದಾಯಗಳ ಪ್ರತ್ಯೇಕ ಪಟ್ಟಿಯಲ್ಲಿ ನೆಲೆ ಕಂಡವು. ಆ ದಿನದ ನಂತರ ಈ ಸಮುದಾಯಗಳನ್ನು ಹಿಂದುಳಿದ ಬುಡಕಟ್ಟು ಎಂಬೀ ಪಟ್ಟಿಯಲ್ಲಿ ಕರ್ನಾಟಕ ರಾಜ್ಯದಾದ್ಯಂತ ೪೯ ಅಲೆಮಾರಿ ಮತ್ತು ಅರೆ ಅಲೆಮಾರಿ ಸಮುದಾಯಗಳನ್ನು ಹಾಗೂ ಬೀದರ, ಗುಲಬರ್ಗಾ ಮತ್ತು ರಾಯಚೂರು ಜಿಲ್ಲೆಗಳಿಗೆ ಸೀಮಿತಗೊಂಡ ೬, ಬಿಜಾಪುರ, ಬೆಳಗಾವಿ, ಧಾರವಾಡ ಹಾಗೂ ಉತ್ತರ ಕನ್ನಡ ಜಿಲ್ಲೆಗಳಿಗೆ ಸೀಮಿತಗೊಂಡ ೪೨ ಮತ್ತು ಬಳ್ಳಾರಿ ಜಿಲ್ಲೆಗೆ ಸೀಮಿತಗೊಂಡ ೧ ವಿಮುಕ್ತ ಬುಡಕಟ್ಟುಗಳನ್ನು ಹಾಗೂ ಕೊಡಗು, ಬೆಳಗಾವಿ, ಬಿಜಾಪುರ, ಧಾರವಾಡ, ಉತ್ತರ ಕನ್ನಡ, ದಕ್ಷಿಣ ಕನ್ನಡ, ಬೀದರ, ಗುಲಬರ್ಗಾ ಮತ್ತು ರಾಯಚೂರು ಜಿಲ್ಲೆಗಳಿಗೆ ಹಾಗೂ ಕೊಳ್ಳೇಗಾಲ ತಾಲೂಕಿಗೆ ಸೀಮಿತಗೊಂಡ ೯ ಇತರೆ ಬುಡಕಟ್ಟುಗಳನ್ನು ಆ ಪಟ್ಟಿಗೆ ಸೇರಿ ಸಂವಿಧಾನಬದ್ಧವಾಗಿ ಶಿಕ್ಷಣ ಮತ್ತು ಸೇವಾ ಸೌಲಭ್ಯ ಪಡೆಯಲು ಅರ್ಹವಾದವು. ಇವುಗಳಿಗೆ ೩ ಪ್ರತಿಶತ ಮೀಸಲಾತಿಯನ್ನು ಕಲ್ಪಿಸಲಾಗಿತ್ತು. ಆ ಸಮುದಾಯಗಳ ಪಟ್ಟಿ ಹೀಗಿತ್ತು.

**ಕರ್ನಾಟಕ ರಾಜ್ಯದ ಅಲೆಮಾರಿ ಮತ್ತು ಅರೆ ಅಲೆಮಾರಿ ಬುಡಕಟ್ಟುಗಳ ಪಟ್ಟಿ**

೧. ಬೈರಾಗಿ, ಬಾವಾ, ೨. ಬಾಳಸಂತೋಷಿ ಜೋಶಿ, ೩. ಬಾಜಿಗರ್, ೪. ಭರಾಡಿ, ೫. ಬುಡಬುಡಕಿ, ಜೋಶಿ, ಗೊಂಧಳಿ, ೬. ಭಾರಾ, ೭. ಚಿತ್ರಕಥಿ ಜೋಶಿ, ಥೋಲಿ, ೯. ಡವೇರಿ, ೧೦. ದೊಂಬಾರಿ, ೧೧. ಘಿಸಾಡಿ, ೧೨. ಗಾರುಡಿ, ೧೩. ಗೋಪಾಲ, ೧೪. ಗೊಂಧಳಿ, ೧೫. ಹೆಳವ, ೧೬. ಜೋಗಿ, ೧೭. ಪೇಲಕಾರಿ, ೧೮. ಕೋಲ್ಹಾಟಿ, ೧೯. ನಂದಿವಾಲಾ, ಜೋಶಿ, ಘೋಂದಳಿ, ಫೂಲಮಾಲಿ, ೨೦. ನಾಥಪಂಥಿ, ದೌರಿ, ಗೋಸಾವಿ, ೨೧. ನೀರಶಿಕಾರಿ, ೨೨. ಪಾಂಗುವಲ್, ೨೩. ಜೋಶಿ, ಸಾದಾ ಜೋಶಿ, ೨೪. ಸಾಂಸಿಯ, ೨೫. ಸರಾನಿಯ, ೨೬. ಸುಡುಗಾಡುಸಿದ್ಧ, ೨೭. ತಿರುಮಾಲಿ, ೨೮. ವೈದು, ೨೯. ವಾಸುದೇವ, ೩೦. ವಡಿ, ೩೧. ವಾಗ್ರಿ, ೩೨. ವೀರ, ೩೩. ಬಜಾನಿಯ, ೩೪. ಗೊಲ್ಲ, ೩೫. ಶಿಕ್ಕಲಿಗಾರ, ೩೬. ಕಿಳ್ಳೇ ಕ್ಯಾತಾಸ್, ೩೭. ಸರೋಡಿ, ೩೮. ದುರ್ಗಾಮುರ್ಗಾ, ಬುರಬುರಚಾ, ೩೯. ಹಾವಗಾರ, ಹಾವಾಡಿಗ, ೪೦. ಪಿಚಗುಂಟ್ಲ, ೪೧. ಮಸಣಿಯ ಜೋಗಿ, ೪೨. ಬೆಸ್ತರ್, ಬುಂಡೆ ಬೆಸ್ತ, ೪೩. ಕಟಬು, ೪೪. ದರವೇಶ, ೪೫. ಕಾಶಿಕಾಪ್ಡಿ, ೪೬. ಮದಾರಿ, ೪೭. ಹಂಡಿ ಜೋಗಿ, ೪೮. ದೊಂಬಿದಾಸ, ೪೯. ಬೈಲಪತ್ತಾರ

ವಿಮುಕ್ತ ಬುಡಕಟ್ಟುಗಳ ಪಟ್ಟಿ

I. ೧. ಲಂಬಾಣಿ ಅಥವಾ ಲಂಬಾಡಾ, ೨. ವಡ್ಡರ, ೩. ಪಾರಧಿಸ್, ೪. ಯರಕುಲ, ೫. ಕೈಕಾಡಿ, ೬. ಕೊರವರ್ (ಬೀದರ, ಗುಲಬರ್ಗಾ ಮತ್ತು ರಾಯಚೂರು ಜಿಲ್ಲೆಗಳಲ್ಲಿ ಮಾತ್ರ).

II. ೧. ಬೇರಡ, ೨. ಬೇಡರ, ೩. ತಳವಾರ, ೪. ವಾಲ್ಮೀಕಿ, ೫. ನೈಕಮಕ್ಕಳು, ೬. ನೈಕವಾಡಿ, ೭. ಭಾಂಮ್ಟಾ ರಾಜಪುತ, ೮. ಪರದೇಶಿ ಭಾಂಮ್ಟಾ, ೯. ಭಾಂಮ್ಟಾ, ೧೦. ಟಿಕಾರಿ, ೧೧. ಘಂಟಿಚೋರ, ೧೨. ಉಚ್ಲಿಯ, ೧೩. ತುಡುಗ್ ಒಡ್ಡರ್, ೧೪. ಗಿರಣಿ ಒಡ್ಡರ್, ೧೫. ಬೆಸ್ತರ್, ೧೬. ದಂಗ ದಾಸರ್, ೧೭. ಕಮಾತಿ, ೧೮. ಕೈಕಾಡಿ, ೧೯. ಕೊರ್ಚಾ, ೨೦. ಕೊರವರ್, ೨೧. ಪಾಮಲೋರ್, ೨೨. ಜಾವೇರಿ, ೨೩. ಜೋಹಾರಿ, ೨೪. ಲಮಾಣಿ, ೨೫. ಲಂಬಾಡಾ, ೨೬. ಟಾಕಣಕರ್, ೨೭. ಹರಣಶಿಕಾರಿ, ೨೮. ಚಿಗರಿ ಬೇಟೆಗಾರ, ೨೯. ನೀರಶಿಕಾರಿ, ೩೦. ಫಾಸೇಚಾರಿ, ೩೧. ಸಾಂಸಿಯ, ೩೨. ಭಾರಾ, ೩೩. ನಟ್, ೩೪. ಕಂಜರ್ ಭಾಟ್, ೩೫. ಕಂಜರಿ, ೩೬. ಕಂಜರ್, ೩೭. ಬೇರಿಯ, ೩೮. ವಡ್ಡರ್, ೩೯. ಛಪ್ಪರಬಂಧ, ೪೦. ಬಂಡಿ ಒಡ್ಡರ್, ೪೧. ಮಣ್ಣು ಒಡ್ಡರ್, ೪೨. ಕಲ್ಲು ಒಡ್ಡರ್ (ಬಿಜಾಪುರ, ಬೆಳಗಾವಿ, ಧಾರವಾಡ ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ ಮಾತ್ರ).

III. ಬಳ್ಳಾರಿ ಜಿಲ್ಲೆಯಲ್ಲಿ ವಾಲ್ಮೀಕಿ.

IV. ಇತರ ಬುಡಕಟ್ಟುಗಳ ಪಟ್ಟಿ

೧. ಗೌಡಲು, ೨. ಹಕ್ಕಿಪಿಕ್ಕಿ, ೩. ಹಸಲರು, ೪. ಇರುಳಿಗ, ೫. ಜೇನು ಕುರುಬ, ೬. ಕಾಡು ಕುರುಬ, ೭. ಮಲೈಕುಡಿ, ೮. ಮಲೇರು, ೯. ಸೋಲಿಗರು (ಕೊಡಗು, ಬೆಳಗಾವಿ, ಬಿಜಾಪುರ, ಧಾರವಾಡ, ಉತ್ತರ ಕನ್ನಡ, ದಕ್ಷಿಣ ಕನ್ನಡ, ಬೀದರ, ಗುಲಬರ್ಗಾ ಮತ್ತು ರಾಯಚೂರು ಜಿಲ್ಲೆಗಳಲ್ಲಿ ಹಾಗೂ ಕೊಳ್ಳೇಗಾಲ ತಾಲೂಕಿನಲ್ಲಿ ಮಾತ್ರ).

ಕರ್ನಾಟಕ ರಾಜ್ಯದ ಅಲೆಮಾರಿ ಮತ್ತು ಅರೆ ಅಲೆಮಾರಿ ಪಟ್ಟಿಯಲ್ಲಿಯ ಕ್ರಮ ಸಂಖ್ಯೆ ೨೬. ಸುಡುಗಾಡುಸಿದ್ದ, ೪೬. ಮದಾರಿ ಮತ್ತು ೪೭. ಹಂಡಿಜೋಗಿ ಸಮುದಾಯಗಳು ೨೭.೭.೧೯೭೭ರಿಂದ ಪರಿಶಿಷ್ಟ ಜಾತಿಯ ಪಟ್ಟಿಗೆ ಅಧಿಕೃತವಾಗಿ ಸೇರಿದವು. ಉಳಿದವುಗಳು ಕರ್ನಾಟಕ ರಾಜ್ಯದ ಹಿಂದುಳಿದ ಬುಡಕಟ್ಟುಗಳ ಪಟ್ಟಿಯಲ್ಲಿಯೇ ಮುಂದುವರಿದವು. ಈ ಪಟ್ಟಿಯು ೧೩.೧೦.೧೯೮೬, ೧೭.೯.೧೯೯೪, ೩೦.೧೧.೨೦೦೨ ರಂದು ಅನುಕ್ರಮವಾಗಿ ಗುಂಪು ಎ, ಕ್ಯಾಟೆಗರಿ ೧, ಪ್ರವರ್ಗ ೧ ಎಂಬೀ ಹೆಸರುಗಳಿಂದ ಇತರೆ ಸಮುದಾಯಗಳು ಇದರಲ್ಲಿ ಒಳಗೊಳ್ಳುತ್ತಲೇ ಪರಿಸ್ಕರಣೆಗೆ ಒಳಪಟ್ಟಿತು. ೧೯೮೬ರಿಂದ ಅಧಿಕೃತವಾಗಿ ಕರ್ನಾಟಕ ರಾಜ್ಯದಲ್ಲಿಯ ಅಲೆಮಾರಿ ಮತ್ತು ಅರೆ ಅಲೆಮಾರಿ ಸಮುದಾಯಗಳ ಪಟ್ಟಿ ಕಣ್ಮರೆಯಾಯಿತು. ಹೀಗಾಗಿ ಅಲೆಮಾರಿಗಳಿಗಿರುವ

ಮೀಸಲಾತಿಯೂ ಮರೀಚಿಕೆಯಾಯಿತು. ೧೯೮೬ರಲ್ಲಿ ಸಲ್ಲಿಸಿದ ಕರ್ನಾಟಕ ರಾಜ್ಯದ ಎರಡನೇ ಹಿಂದುಳಿದ ವರ್ಗಗಳ ಆಯೋಗದ ವರದಿಯಲ್ಲಿ ಕರ್ನಾಟಕದ ಅಲೆಮಾರಿಗಳಲ್ಲಿಯ ಹಲವು ಅರ್ಹ ಸಮುದಾಯಗಳಿಗೆ ಪರಿಶಿಷ್ಟರ ಪಟ್ಟಿಯಲ್ಲಿ ಇಲ್ಲವೇ ಪ್ರತ್ಯೇಕ ಪಟ್ಟಿಯಲ್ಲಿ ಇರಿಸಲು ಪ್ರಯಾಸ ಪಟ್ಟವರಲ್ಲಿ ಅಲೆಮಾರಿ ಹಿನ್ನೆಲೆಯ ಸದಸ್ಯರಾದ ಎಂ ಎಸ್ ಹೆಳವರ್ ಅವರು ಒಬ್ಬರೇ ಎಂಬುದು ವರದಿಯ ಟಿಪ್ಪಣಿಯಿಂದ ವೇದ್ಯವಾಗುತ್ತದೆ. ಆದರೆ, ಇವರ ವಾದ ಆಯೋಗದ ಒಮ್ಮತಾಭಿಪ್ರಾಯವಾಗಲಿಲ್ಲ, ಅಲೆಮಾರಿಗಳೂ ಎಚ್ಚರಾಗಲಿಲ್ಲ. ಅಂದಿನಿಂದ ಅಲೆಮಾರಿಗಳ ಹೆಸರಿನಲ್ಲಿಯ ಅಭಿವೃದ್ಧಿಯ ಯೋಜನೆಗಳೂ ಸ್ಥಗಿತಗೊಂಡವು. ಆನಂತರದ ಅವಧಿಯಲ್ಲಿ ಅಲೆಮಾರಿ ಸಮುದಾಯಗಳು ಸಂವಿಧಾನಬದ್ಧವಾಗಿ ಈ ಹಿಂದೆ ಅನುಭವಿಸುತ್ತಿದ್ದ ತಮ್ಮ ಹಕ್ಕನ್ನು ಕೇಳಲು ಹೋದರೆ ಕರ್ನಾಟಕದಲ್ಲಿ ಅಲೆಮಾರಿಗಳೇ ಇರುವುದಿಲ್ಲ ಹೀಗಾಗಿ ಅವರ ಪರವಾದ ಯಾವುದೇ ಯೋಜನೆಗಳು ಯೋಜಿಸಲು ಮತ್ತು ಕಾರ್ಯಗತಗೊಳಿಸಲು ಸಾಧ್ಯವಿಲ್ಲ ಎಂಬ ಉತ್ತರಗಳು ಅಧಿಕಾರಿಗಳಿಂದ ಬರಲಾರಂಭಿಸಿದವು.

ಕೇಂದ್ರ ಸರಕಾರದ ೫.೬.೨೦೦೬ರ ಮಾರ್ಗಸೂಚಿಯನ್ವಯ ಹಾಗೂ ರಾಜ್ಯ ಮಾನವ ಹಕ್ಕುಗಳ ಆಯೋಗದ ಶಿಫಾರಸ್ಸಿನ ಅನ್ವಯ ರಾಜ್ಯದ ಅಲೆಮಾರಿಗಳಿಗೆ ಮೀಸಲಾತಿ ಸೌಲಭ್ಯ ಹಾಗೂ ಕೇಂದ್ರ ಸರಕಾರದ ಆರ್ಥಿಕ ನೆರವಿನೊಂದಿಗೆ ಕಲ್ಯಾಣ ಕಾರ್ಯಕ್ರಮಗಳನ್ನು ಜಾರಿಗೊಳಿಸಲು ೨೧.೯.೨೦೦೭ರಂದು ರಾಜ್ಯ ಸರಕಾರ ಆದೇಶ ಹೊರಡಿಸಿದೆ. ೨೦೦೭-೦೮ ನೇ ಸಾಲಿನಲ್ಲಿ ರಾಜ್ಯ ವಲಯದ ಯೋಜನೆಯಲ್ಲಿ ಇದಕ್ಕಾಗಿ ೪ ಕೋಟಿ ರೂಪಾಯಿಗಳ ಅನುದಾನ ಕಾಯ್ದಿರಿಸಿದೆ. ಈ ಯೋಜನೆ ಅಡಿಯಲ್ಲಿ ವಸತಿ, ಶಿಕ್ಷಣ, ಸಾಲ ಸೌಲಭ್ಯ ಇತ್ಯಾದಿಗಳನ್ನು ನೀಡಲು ೧.೨.೧೯೬೬ರ ಆದೇಶದಲ್ಲಿ ಜಾರಿಯಲ್ಲಿದ್ದ ಅಲೆಮಾರಿ ಮತ್ತು ಅರೆ ಅಲೆಮಾರಿ ಬುಡಕಟ್ಟುಗಳ ಪಟ್ಟಿಯನ್ನು ಅನುಸರಿಸಲಾಗುತ್ತಿದೆ. ಈ ಪಟ್ಟಿಯಲ್ಲಿಯ ಹಲವಾರು ಅಲೆಮಾರಿ ಸಮುದಾಯಗಳು ಪರಿಶಿಷ್ಟ ಜಾತಿ ಅಥವಾ ಪಂಗಡ ಪಟ್ಟಿಯಲ್ಲಿಯ ಸಮುದಾಯಗಳ ಪರ್ಯಾಯ ಪದಗಳಾಗಿರುವುದರಿಂದ ಈ ಯೋಜನೆಯಲ್ಲಿಯ ಲಾಭವನ್ನು ಪರಿಶಿಷ್ಟರಲ್ಲಿಯ ಅಲೆಮಾರಿಗಳಿಗೆ ಸಮರ್ಪಕವಾಗಿ ಪಡೆಯಲು ಸಾಧ್ಯವಾಗುತಿಲ್ಲ. ೧೯೬೬ರ ಅಲೆಮಾರಿ ಸಮುದಾಯಗಳ ಪಟ್ಟಿಯಲ್ಲಿಯ ಬಲಿತ ಸಮುದಾಯಗಳು ಇಲ್ಲವೇ ಸ್ಥಾಯಿಯಾಗಿ ನೆಲೆನಿಂತ ಕುಟುಂಬಗಳು ಈ ಲಾಭವನ್ನು ಅಲ್ಲಲ್ಲಿ ಕಬಳಿಸಲು ಆರಂಭಿಸಿವೆ. ಅಂತಹ ಸಮುದಾಯಗಳಿಗೆ ಅಲೆಮಾರಿಗಳಿಗಾಗಿ ಜಾರಿಗೊಳಿಸಿದ ಪಟ್ಟಿಯಿಂದ ಹೊರಗಿಡುವುದು ಸೂಕ್ತ. ಇದಕ್ಕಾಗಿ ಅಲೆಮಾರಿಗಳ ಪಟ್ಟಿಯ ವೈಜ್ಞಾನಿಕ ಪರಿಸ್ಕರಣೆಯ ಅಗತ್ಯವಿರುವುದು.

ಇನ್ನೂ ಸಂಪೂರ್ಣ ನೆಲೆ ನಿಲ್ಲದ ಮತ್ತು ಅತಂತ್ರ ಸ್ಥಿತಿಯಲ್ಲಿರುವ ಕರ್ನಾಟಕ ರಾಜ್ಯದಲ್ಲಿಯ ಸಮುದಾಯಗಳೆಂದರೆ; ಪರಿಶಿಷ್ಟ ಜಾತಿಯ ಬುಡ್ಗ ಜಂಗಮ್, ಚೆನ್ನ ದಾಸರ್, ದಕ್ಕಲಿಗ, ದೊಂಬರ, ಗೋಸಂಗಿ, ಹಂಡಿ ಜೋಗೀಸ್, ಕೊರಮ, ಮದಾರಿ,

ಮಾಂಗ ಗಾರೂಡಿ, ಸಿಂಧೊಳ್ಳು , ಸುಡುಗಾಡು ಸಿದ್ಧ ಅಥವಾ ಮಸಣಜ್ಕೋಗಿ, ಶಿಳ್ಳೇಕ್ಯಾತಾಸ್ ಮತ್ತು ಇವುಗಳ ಪರ್ಯಾಯ ಪದಗಳು; ಪರಿಶಿಷ್ಟ ಪಂಗಡದ ಅಡ್ವಿಚಿಂಚೇರ್,ಪಾರ್ಧಿ, ಡುಂಗ್ರಿ ಗರಾಸಿಯ, ಹಕ್ಕಿಪಿಕ್ಕಿ, ನಾಯಕ (ಮಂಡ್ರು) ಮತ್ತು ರಾಜಗೊಂಡ ಹಾಗೂ ಹಿಂದುಳಿದ ವರ್ಗದ ಅಲೆಮಾರಿ ಕುರುಬ, ಬೈಲಪತ್ತಾರ, ಕಂಜಿರಭಾಟ್, ಕಾಡುಗೊಲ್ಲ, ಗೋಂಧಳಿ, ಘಿಸಾಡಿ, ಹೆಳವ, ಸಿಕ್ಕಿಗರ ಇತ್ಯಾದಿ.

ಕಾಡುಗೊಲ್ಲ ಮತ್ತು ಅಲೆಮಾರಿ ಕುರುಬ ಸಮುದಾಯಗಳು ಪಾರಂಪರಿಕ ಪಶು ಪಾಲನೆಯ ಹಿನ್ನೆಲೆಯನ್ನು ಹೊಂದಿರುವ ಆದಿಮ ಮತ್ತು ಅರೆ ಅಲೆಮಾರಿ ಬುಡಕಟ್ಟುಗಳು. ಆದರೆ, ಈ ಸಮುದಾಯಗಳು ಸಂವಿಧಾನಬದ್ಧವಾಗಿ ಪರಿಶಿಷ್ಟ ಪಂಗಡದಲ್ಲಿರದೆ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿವೆ. ಈ ಸಮುದಾಯಗಳಲ್ಲಿ ಸಾಕ್ಷರತೆ ತುಂಬ ಕಡಿಮೆ ಇರುವುದು. ಆದರೆ, ದೈಹಿಕ, ಸಾಮಾಜಿಕ ಮತ್ತು ಆರ್ಥಿಕವಾಗಿ ಬೇರೆ ಅಲೆಮಾರಿಗಳಿಗಿಂತ ಉತ್ತಮವಾಗಿದ್ದಾರೆ.

ಕೊರಮ, ಮಾಂಗ ಗಾರೂಡಿ, ಮಸಣಜ್ಕೋಗಿ, ಅಡ್ವಿಚಿಂಚೇರ್, ಪಾರ್ಧಿ,ಪಕ್ಕಿಪಿಕ್ಕಿ, ಕಂಜಿರಭಾಟ್, ದೊಂಬರ, ಗಂಟಿಚೋರ ಸಮುದಾಯಗಳಿಗೆ ಅಪರಾಧಿಗಳೆಂಬ ಕಳಂಕವಿರುವುದರಿಂದ ಪೊಲೀಸ್ ಇಲಾಖೆ ಮತ್ತು ಅನ್ಯ ಸಮುದಾಯಗಳು ಇವರ ಅಭಿವೃದ್ಧಿಗೆ ಸರಿಯಾಗಿ ಸ್ಪಂದಿಸುತ್ತಿಲ್ಲ. ಇವುಗಳು ಪ್ರಕೃತಿಯನ್ನು ವಿಶೇಷವಾಗಿ ಬಹು ಕಾಲದವರೆಗೆ ನಂಬಿ ಬದುಕು ಸಾಗಿಸಿದಂತಹ ಸಮುದಾಯಗಳು.

ಬುಡ್ಗ ಜಂಗಮ್, ಚೆನ್ನ ದಾಸರ್, ದಕ್ಕಲಿಗ, ದೊಂಬರ, ಗೋಸಂಗಿ, ಹಂಡಿ ಜೋಗೀಸ್, ಸಿಂಧೊಳ್ಳು, ಶಿಳ್ಳೇಕ್ಯಾತಾಸ್,ರಾಜಗೊಂಡ, ಬೈಲಪತ್ತಾರ, ಗೋಂಧಳಿ, ಘಿಸಾಡಿ, ಹೆಳವ, ಮೋಡಿಕಾರ, ಶಿಕ್ಕಲಿಗಾರ, ಸಿಕ್ಕಿಗರ ಸಮುದಾಯಗಳು ಅನ್ಯ ಸಮುದಾಯಗಳನ್ನೇ ನಂಬಿ ಬದುಕು ಸಾಗಿಸಿದಂತಹವು. ಈ ಸಮುದಾಯಗಳಲ್ಲಿರುವ ಕಲೆ ಮತ್ತು ಸಾಹಿತ್ಯ ಗ್ರಾಮೀಣ ಜನತೆಗೆ ಬಹು ಉಪಯೋಗಿಯಾಗಿರುವುದರಿಂದ ಇವುಗಳು ಗ್ರಾಮೀಣ ಪ್ರದೇಶಗಳಲ್ಲಿ ಅಲೆಯುವವು. ಕಲೆಗಳಿಂದ ಜೀವನ ನಡೆಸಲು ಸಾಧ್ಯವಾಗದೇ ಇದ್ದ ಸಂದರ್ಭಗಳಲ್ಲಿ ಭಿಕ್ಷಾಟನೆಗೆ ಮೊರೆಹೋಗುವವು. ಈ ಎಲ್ಲ ಸಮುದಾಯಗಳು ಸಾಮಾನ್ಯವಾಗಿ ಗುಡಿ ಗುಂಡಾರಗಳಲ್ಲಿ, ಶಾಲಾ ಆವರಣದಲ್ಲಿ, ಸಾರ್ವಜನಿಕ ಸ್ಥಳಗಳಲ್ಲಿ, ಕೊಳಚೆ ಪ್ರದೇಶಗಳಲ್ಲಿ ತಾತ್ಕಾಲಿಕವಾಗಿ ವಾಸವಾಗಿ ಮುಂದಿನ ಗ್ರಾಮಗಳಿಗೆ ಸಾಗುವವು. ಈ ಸಮುದಾಯಗಳು ಪರಿಶಿಷ್ಟರ ಅಥವಾ ಹಿಂದುಳಿದವರ ಪಟ್ಟಿಯಲ್ಲಿದ್ದರೂ ಈ ಸಮುದಾಯಗಳನ್ನು ಗುರುತಿಸುವಲ್ಲಿ ಸರಕಾರ ಮತ್ತು ಸಮುದಾಯಗಳು ಎಡವಿವೆ. ಉದಾಹರಣೆಗೆ ಪರಿಶಿಷ್ಟ ಜಾತಿಯ ಬುಡ್ಗ ಜಂಗಮ್ ಸಮುದಾಯವನ್ನು ಬಹುರೂಪಿ, ಬೈರಾಗಿ, ಬಾಳಸಂತು, ಬಾವಚಿ, ಕುರುಕುರುಮಾಮ, ಕೊಂಡಮಾಮ, ಬುರ್ರಕಥೆಯವರು, ಹಗಲುವೇಷದವರು, ವೇಷಗಾರರು ಇತ್ಯಾದಿ ಹೆಸರುಗಳಿಂಲೂ; ಶಿಳ್ಳೇಕ್ಯಾತಾಸ್ ಸಮುದಾಯವನ್ನು ಶಿಳ್ಳೇಕ್ಯಾತ, ಕಿಳ್ಳೇಕ್ಯಾತ, ಕಟಬು, ಗೊಂಬೆರಾಮ, ತೊಗಲುಗೊಂಬೆ

ಆಟದವರು, ಬುಡಬುಡಕಿಯವರು, ಬುಂಡೆ ಬೆಸ್ತ ಇತ್ಯಾದಿ ಹೆಸರುಗಳಿಂದಲೂ; ಚೆನ್ನ ದಾಸರ್ ಸಮುದಾಯವನ್ನು ಹೊಲಯ ದಾಸರ್, ಹೊಲೆಯ ದಾಸರಿ, ಮಾಲ ದಾಸರಿ, ದಂಡಿಗ ದಾಸರ್, ಚಕ್ರವಾದ್ಯ ದಾಸ್, ದೊಂಬಿ ದಾಸರು ಇತ್ಯಾದಿ ಹೆಸರುಗಳಿಂದಲೂ; ಕೊರಮರನ್ನು ಕೊರವ, ಕೈಕಾಡಿ, ಬಜಂತ್ರಿ, ಮೋಡಿಕಾರ, ಕುಂಚಿ ಕೊರವ, ಕೇಪ್‌ಮಾರಿಸ್, ಕುರುವನ್, ಯರಕುಲ ಇತ್ಯಾದಿ ಹೆಸರುಗಳಿಂದಲೂ; ಸಿಂಧೊಳ್ಳು ಸಮುದಾಯವನ್ನು ಚಿಂಧೊಳ್ಳು, ಪೋತರಾಜ, ಸುಂಕಲಮ್ಮನವರು, ಪೂಜಾರಿಗಳು, ಮಾರಮ್ಮನವರು, ದುರ್ಗಮುರ್ಗಿಯವರು ಇತ್ಯಾದಿ ಹೆಸರುಗಳಿಂದಲೂ: ಪರಿಶಿಷ್ಟ ಪಂಗಡದ ಭಿಲ್ ಗುಂಪಿನ ಡುಂಗ್ರಿ ಗರಾಸಿಯ ಬುಡಕಟ್ಟನ್ನು ಜೋಗಿ, ಗೋಸಾವಿ, ಗೊಸಂಗಿ, ಹಕ್ಕಿಪಿಕ್ಕಿ, ಶಿಳ್ಳೇಕ್ಯಾತ, ಮರಾಟಿ ಇತ್ಯಾದಿ ಹೆಸರುಗಳಿಂದಲೂ; ಪಾರ್ಧಿ ಬುಡಕಟ್ಟನ್ನು ಹಕ್ಕಿಪಿಕ್ಕಿ, ಹರಣಶಿಕಾರಿ, ಅಡ್ವಿಚಿಂಚೇರ್, ಚೆಂಚು, ನೀರಶಿಕಾರಿ, ಮೇಲಶಿಕಾರಿ, ಫಾನ್ಸಿ ಪಾರ್ಧಿ ಇತ್ಯಾದಿ ಹೆಸರುಗಳಿಂದಲೂ ಸ್ಥಳೀಯರು ಕರೆದಿರುವರು. ಸ್ಥಳೀಯರು ಕರೆದಿರುವ ಹೆಸರುಗಳೇ ಕಾಲಾಂತರದಲ್ಲಿ ಜಾತಿಗಳಂತೆ ಕಂಡು ದಾಖಲಾಗಲಾರಂಭಿಸಿದವು. ಸ್ಥಳೀಯರು ಇವರ ಕಾಯಕಗಳ ಹಿನ್ನೆಲೆಯಲ್ಲಿ ಸ್ಥಳೀಯ ಭಾಷಿಕ ಹೆಸರುಗಳಿಂದ ಕರೆದರೇ ವಿನಃ ಇವರ ನಡುವೆ ಏರ್ಪಡುವ ರಕ್ತ ಸಂಬಂಧ ಮತ್ತು ಆಚಾರ ವಿಚಾರವನ್ನು ಗಮನಿಸಲಿಲ್ಲ ಎಂಬುವುದು ಸ್ಪಷ್ಟವಾಗುತ್ತದೆ. ಒಂದೇ ಸಮುದಾಯಕ್ಕೆ ಹತ್ತಾರು ಹೆಸರುಗಳು ಚಾಲ್ತಿಯಲ್ಲಿರುವುದರಿಂದ ಸರಕಾರಿ ಅಧಿಕಾರಿಗಳಿಗೆ ಮೀಸಲಾತಿ ಕಲ್ಪಿಸುವಲ್ಲಿ ಗೊಂದಲ ಉಂಟಾಗಿರುವುದು ಸಹಜ. ಮೀಸಲಾತಿಯ ಗಂಧಗಾಳಿ ಅರಿಯದ ಸಾಮಾಜಿಕ ಕಳಂಕವುಳ್ಳ ಅಲೆಮಾರಿ ಸಮುದಾಯಗಳು ತನ್ನ ಮೂಲ ಐಡೆಂಟಿಟಿ ಮರೆಸುವುದರಿಂದ ತಮಗೆ ಸಾಮಾಜಿಕ ಮನ್ನಣೆ ದೊರೆಯುವುದೆಂದು ಹೊಲೆಯ ದಾಸರು ಚೆನ್ನದಾಸರೆಂಬ, ಬುಡುಗ ಜಂಗಾಲರು ಬುಡ್ಗ ಜಂಗಮರೆಂಬ, ಹಂಡಿ ಅಥವಾ ಹಂದಿ ಜೋಗಿಯರು ಅಥವಾ ಜೋಗಿ ಎಂಬ ಇತ್ಯಾದಿ ಪದಗಳ ಹಿಂದೆ ಜೋತುಬಿದ್ದವು. ಕಾರಣ ಅಂದು ದಾಸ, ಜಂಗಮ, ಜೋಗಿ ಪದಗಳಿಗೆ ಸಮಾಜದಲ್ಲಿ ವಿಶೇಷ ಮನ್ನಣೆ ಇತ್ತು. ತಮ್ಮ ಕಳಂಕ ಮುಕ್ತಿಗಾಗಿ ಈ ಪದಗಳ ಆಶ್ರಯ ಪಡೆಯುವುದು ಅಲೆಮಾರಿಗಳಲ್ಲಿಯ ಹಲವು ಸಮುದಾಯಗಳಿಗೆ ಅನಿವಾರ್ಯವೆನಿಸಿತು. ಪೂರ್ಣ ಪ್ರಮಾಣದ ಧರ್ಮಾಶ್ರಯ ಇವರಿಗೆ ಲಭ್ಯವಾಗಲಿಲ್ಲ. ಬೇಟೆ, ಭಿಕ್ಷಾಟನೆಯಿಂದಲೂ ಮುಕ್ತಿ ಹೊಂದಲಾಗಲಿಲ್ಲ. ಹೀಗಾಗಿ ತ್ರಿಶಂಕು ಸ್ಥಿತಿ ಈ ಸಮುದಾಯಗಳದಾಯಿತು.

ಹಿಂದುಳಿದ ವರ್ಗಗಳ ಅಲೆಮಾರಿ ಸಮುದಾಯಗಳಲ್ಲಿಯೂ ಗೋಂಧಳಿ ಸಮುದಾಯವನ್ನು ಬುಡಬುಡಿಕೆ, ಜೋಷಿ, ಭೂತೇರು ಇತ್ಯಾದಿ ಹೆಸರುಗಳಿಂದಲೂ; ಹೆಳವರನ್ನು ಗಂಟಿ ಹೆಳವ, ಹಂದಿ ಹೆಳವ, ಪುಂಗಿ ಹೆಳವ, ಚಾಪೆ ಹೆಳವ ಇತ್ಯಾದಿ ಹೆಸರುಗಳಿಂದಲೂ ಸ್ಥಳೀಯರು ಕರೆಯುವುದು ಸಾಮಾನ್ಯ. ಇಂತಹ ಅಲೆಮಾರಿ ಸಮುದಾಯಗಳಿಗೆ ಸಂವಿಧಾನಬದ್ಧವಾಗಿ ಪರಿಶಿಷ್ಟರ ಪಟ್ಟಿಗೆ ಸೇರುವ ಎಲ್ಲ

ಅರ್ಹತೆಗಳಿದ್ದರೂ ಈ ಕುರಿತು ಸಮುದಾಯಗಳು ಮತ್ತು ಸರಕಾರ ದಿವ್ಯ ನಿರ್ಲಕ್ಷತೆಯನ್ನು ವಹಿಸಿವೆ. ಕಾಯಕದ ಹಿನ್ನೆಲೆಯಲ್ಲಿ ಅಲೆಮಾರಿ ಘಿಸಾಡಿ ಮತ್ತು ಬೈಲಪತ್ತಾರ ಸಮುದಾಯಗಳು ಹಲವೆಡೆ ಸ್ಥಳೀಯರ ಕಣ್ಣಿಗೆ ವಿಶ್ವಕರ್ಮರಂತೆ ಕಂಡಿರುವುದರಿಂದ ಇವರನ್ನು ತಪ್ಪಾಗಿ ಹಿಂದುಳಿದ ವರ್ಗದ ವಿಶ್ವಕರ್ಮರ ಪಟ್ಟಿಯಲ್ಲಿ ಗಣಿಸಲಾಗುತ್ತಿದೆ. ಸಿಖ್ ಧರ್ಮದ ಅನುಸರಣೆಗೆ ಮೊರೆಹೋಗಿರುವ ಅಲೆಮಾರಿ ಸಿಕ್ಲಿಗರ ಸಮುದಾಯ ಕರ್ನಾಟಕ ರಾಜ್ಯದ ಮೀಸಲಾತಿಯ ಯಾವುದೇ ಪಟ್ಟಿಗೆ ಸೇರದೇ ಇರುವುದು ದುರ್ದೈವದ ಸಂಗತಿಯೇ ಸರಿ. ಅಲೆಮಾರಿಗಳ ಐಡೆಂಟಿಟಿಯ ಕಗ್ಗಂಟನ್ನು ಬಿಡಿಸಿ ಈ ಸಮುದಾಯಗಳಿಗೆ ಸಂವಿಧಾನಬದ್ಧ ನ್ಯಾಯ ಒದಗಿಸುವ ಕಾರ್ಯ ಸರಕಾರದಿಂದ ಇದುವರೆಗೂ ನಡೆಯದೇ ಇರುವುದು ವಿಪರ್ಯಾಸವೇ ಸರಿ. ಈ ಕುರಿತು ನ್ಯಾಯ ಒದಗಿಸಬೇಕಾದ ಸರಕಾರಗಳು, ಆಯೋಗಗಳು, ಸಮುದಾಯಗಳ ಸಂಘಟನೆಗಳು, ಸಂಶೋಧನಾ ಸಂಸ್ಥೆಗಳು ಮೂಕಾಗದೆ, ಕುರುಡಾಗದೆ, ಕಿವುಡಾಗದೆ, ಜಾತಿ ಆಧಾರಿತ ಮೀಸಲಾತಿ ಅನುಸರಿಸುವ ಭಾರತ ಸರಕಾರ ಮತ್ತು ರಾಜ್ಯ ಸರಕಾರಗಳು ನಿರ್ಲಕ್ಷಿತ ಅಲೆಮಾರಿ ಸಮುದಾಯಗಳಿಗೆ ಮೊದಲು ಮೀಸಲಾತಿ ಪಟ್ಟಿಯಲ್ಲಿ ಸೂಕ್ತ ಸ್ಥಾನ ಕಲ್ಪಿಸಬೇಕು. ಇದು ಸಾಧ್ಯವಾಗದೇ ಇದ್ದಲ್ಲಿ ಇಂದಿನ ಜಾತಿ ಆಧಾರಿತ ಮೀಸಲಾತಿಯನ್ನು ತಕ್ಷಣವೆ ಕೈಬಿಟ್ಟು ಭಾರತದ ಅಲೆಮಾರಿಗಳ ಅಭಿವೃದ್ಧಿಗಾಗಿ ಬೇರೆ ಕಾರ್ಯಯೋಜನೆಗಳನ್ನು ಮತ್ತು ಮಾರ್ಗಗಳನ್ನು ಅನುಸರಿಸುವುದು ಸೂಕ್ತ. ಇಂದಿನ ಪರಿಶಿಷ್ಟರ ಮತ್ತು ಹಿಂದುಳಿದವರ ಮೀಸಲಾತಿಯ ಪಟ್ಟಿಯು ಅಸಮಾನತೆಯಿಂದ ಕೂಡಿರುವುದು. ಹೀಗಾಗಿ ಮೀಸಲಾತಿಯು ಆಯಾ ಪಟ್ಟಿಯಲ್ಲಿಯ ಬಲಿಷ್ಠರ ಪಾಲಾಗಿ ಬಲಹೀನರು ಅಂಚಿಗೆ ತಳ್ಳಲ್ಪಟ್ಟಿರುವರು. ಅಂಚಿಗೆ ತಳ್ಳಲ್ಪಟ್ಟವರಲ್ಲಿ ಪ್ರತಿನಿತ್ಯ ಸುನಾಮಿಗೂ ಮಿಗಿಲಾದ ಸಮಸ್ಯೆಗಳನ್ನು ಎದುರಿಸುತ್ತಿರುವ ಪಾರಂಪರಿಕ ಅಲೆಮಾರಿಗಳು ಮತ್ತು ವಿಮುಕ್ತ ಬುಡಕಟ್ಟಿನವರು ಪ್ರಮುಖರಾಗಿದ್ದಾರೆ.

ಈ ಹಿನ್ನೆಲೆಯ ಅಲೆಮಾರಿಗಳಲ್ಲಿ ಆರ್ಥಿಕ ಭದ್ರತೆ ನೀಡುವ ಅಕ್ಷರ ಜ್ಞಾನದ ಕೊರತೆ ಇರುವುದು. ಇವರಲ್ಲಿ ಹಲವು ಸಮುದಾಯಗಳು ನಗರಗಳ ಕೊಳಗೇರಿಗಳಲ್ಲಿದ್ದರೂ ನಾಗರಿಕರಿಂದ ಬಹುದೂರವಿದ್ದು ತಮ್ಮದೇಯಾದ ಭಾಷೆ, ರೂಢಿ, ಸಂಪ್ರದಾಯ,ನ್ಯಾಯ ಪದ್ಧತಿ ಇತ್ಯಾದಿಗಳನ್ನು ಪ್ರಯಾಸಪಟ್ಟು ಮುಂದುವರಿಸಿಕೊಂಡು ಬರುತ್ತಲಿವೆ.

ಅಲೆಮಾರಿಗಳು ಕಡುಬಡವರು, ಸರಳರು, ಮೋಸದ ವ್ಯವಹಾರ ಅರಿಯರು,ಮೋಸಕ್ಕೆ ಒಳಗಾದವರು ಮತ್ತು ಆಗುತ್ತಲಿದ್ದವರು. ಮಾನವ ಜನಾಂಗದ ಮೂಲಿಗರು. ಬೇಟೆ, ಬೆಟ್ಟ ಕಳೆದುಕೊಂಡು ತನ್ನ ಮೂಲವನ್ನು ಮರೆತು ಅತಂತ್ರದಲ್ಲಿದ್ದವರು. ನಾಳೆಯ ಚಿಂತೆಯಿಲ್ಲದವರು,ಯಾರದೋ ಜಾಗದಲ್ಲಿ ಗುಡಾರ ಗುಡಿಸಿ ಹಾಕಿಕೊಂಡು ಬದುಕುತ್ತಿರುವಾಗ ಜಾಗದ ಮಾಲಿಕ ಹೆದರಿಸಿದೊಡನೆ ಮತ್ಯಾರದ್ದೋ ಜಾಗದಲ್ಲಿ ಗುಡಾರ ಹಾಕಿ ಬದುಕಲು ಗುಳೆ ಹೋಗುವರು. ಈ ಸಮುದಾಯಗಳಿಗೆ ಯಾವುದೇ ಆರ್ಥಿಕ

ಭದ್ರತೆಗಳಿಲ್ಲ. ಇವರಲ್ಲಿ ಬಹುತೇಕ ಜನರು ಗುಜರಿ ಆರಿಸಲು, ಬಕೇಟ್ ರಿಪೇರಿ ಮಾಡಲು, ಕಾಟಾ, ಪಿನ್ನು, ಸೂಜಿ, ಜಡಿಬೂಟಿ ಮಾರಲು, ಮೀನು ಹಿಡಿಯಲು, ಕೃಷಿಕೂಲಿ ಮಾಡಲು ಪ್ರಯತ್ನಿಸುವರು. ಇವ್ಯಾವುದರಿಂದಲೂ ಹೊಟ್ಟೆ ತುಂಬಿಸಿಕೊಳ್ಳಲು ಸಾಧ್ಯಆಗದಿದ್ದಾಗ ಭಿಕ್ಷೆ ಬೇಡುವರು. ಸ್ವಾಭಿಮಾನದ ಬದುಕು ಇವರಿಗೆ ಕನಸಾಗಿರುವುದು. ಸಾಮಾಜಿಕ ನ್ಯಾಯ ಕಗ್ಗಂಟಾಗಿರುವುದು.

ಗುಡಾರ ನಿವಾಸಿ ಅಲೆಮಾರಿ ಸಮುದಾಯಗಳ ಸಮಸ್ಯೆಗಳನ್ನು ಕುರಿತು ಗಂಭೀರವಾಗಿ ಚರ್ಚಿಸಲು ಬಳ್ಳಾರಿ ಜಿಲ್ಲೆಯಲ್ಲಿ ಬುಡ್ಗ ಜಂಗಮ್, ಚೆನ್ನ ದಾಸರ್, ಗೋಸಂಗಿ, ಹಂಡಿ ಜೋಗಿಸ್, ಶಿಳ್ಳೇಕ್ಯಾತಾಸ್, ಸಿಂಧೊಳ್ಳು, ಸುಡುಗಾಡು ಸಿದ್ಧ, ಹಕ್ಕಿಪಿಕ್ಕಿ, ಪಾರ್ಧಿ, ಗೋಂಧಳಿ, ಹೆಳವ, ಮೊಂಡ ಇತ್ಯಾದಿ ಸಮುದಾಯಗಳ ಸಮಾನ ಮನಸ್ಕ ಮುಖಂಡರು ಮುಂದಾದರು. ಸಮಸ್ಯೆಗಳನ್ನು ಸರಕಾರದ ಗಮನಕ್ಕೆ ತರಲು ಗುಡಾರ ಗುಡಿಸಲು ನಿವಾಸಿಗಳ ಕಲ್ಯಾಣ ಸಂಘವನ್ನು ೧೩.೨.೨೦೦೨ ರಂದು ನೋಂದಾಯಿಸಿಕೊಂಡು ವ್ಯವಸ್ಥಿತ ಚಳುವಳಿಗೆ ಅಣಿಗೊಂಡರು. ನಿಸ್ವಾರ್ಥ ಮತ್ತು ಉತ್ಕಟ ಸೇವಾಭಾವದ ಈ ಸಂಘಟಿತ ಚಳುವಳಿಯ ಫಲ ಸ್ವರೂಪವೇ ಬಳ್ಳಾರಿ ಹೊರವಲಯದ ೮ ಅಲೆಮಾರಿ ಗುಡಾರ ನಿವಾಸಿ ಸಮುದಾಯಗಳ ೨೪೮ ಕುಟುಂಬಗಳ ಸುಭದ್ರ ಅಲೆಮಾರಿಗಳ ನವನಗರ. ಅವರ ಅನನ್ಯತೆಯ ಭಾಗವಾಗಿ ಇದನ್ನು ಗುಡಾರ ನಗರ ಎಂತಲೇ ಹೆಸರಿಸಲಾಯಿತು. ಇದನ್ನು ಸಾಕಾರಗೊಳಿಸಲು ಬಳ್ಳಾರಿ ಜಿಲ್ಲಾ ಆಡಳಿತ ಮತ್ತು ಗುಡಾರ ಗುಡಿಸಲು ನಿವಾಸಿಗಳ ಕಲ್ಯಾಣ ಸಂಘ ಅಮೋಘ ಪಾತ್ರವಹಿಸಿದವು. ಈ ಗುಡಾರನಗರ ರಾಜ್ಯದ ಇತರೆಡೆ ಇರುವ ಅಲೆಮಾರಿ ಗುಡಾರ ನಿವಾಸಿಗಳ ಸಂಘಟನೆಗೆ ಪ್ರೇರಣೆಯೂ ನೀಡಿತು.

ಅಲೆಮಾರಿ ಮತ್ತು ವಿಮುಕ್ತ ಬುಡಕಟ್ಟು ಸಮಸ್ಯೆಗಳ ಕುರಿತು ಇತ್ತೀಚಿನ ದಿನಗಳಲ್ಲಿ ಭಾರತೀಯ ಮಟ್ಟದಲ್ಲಿ ಸಮಾನ ಮನಸ್ಕರ ಗಮನ ಸೆಳೆದವರಲ್ಲಿ ಜ್ಞಾನಪೀಠ ಪ್ರಶಸ್ತಿ ಪುರಸ್ಕೃತೆ ಮಹಾಶ್ವೇತಾದೇವಿಯವರು ಪ್ರಥಮರು. ಇವರ ಆಶಯಕ್ಕೆ ದನಿಗೂಡಿಸಿದವರಲ್ಲಿ ಡಾ ಗಣೇಶ ದೇವಿ, ಲಕ್ಷ್ಮಣ ಗಾಯಕ್ವಾಡ, ಲಕ್ಷ್ಮಣ ಮಾನೆ, ರಂಜೀತ್ ನಾಯಕ್, ಬಾಲಕೃಷ್ಣ ಎಸ್ ರೇಣಕೆ, ಡಾ ಅಜಯ್ ದಾಂಡೇಕರ್, ದಕ್ಷಿಣ ಬಜರಂಗೆ, ಡಾ ಮೀನಾ ರಾಧಾಕೃಷ್ಣನ್, ನ್ಯಾಯಮೂರ್ತಿ ಎಂ ಎನ್ ವೆಂಕಟಾಚಲಯ್ಯ, ಲಕ್ಷ್ಮಣಭಾಯಿ ಪತಿನಿ ಅವರುಗಳು ಪ್ರಮುಖರು. ಈ ಚಿಂತಕರ ಧ್ವನಿ ಭಾರತ ಸರಕಾರಕ್ಕೆ ಎಚ್ಚರಗೊಳಿಸುವಲ್ಲಿ ಸಹಕಾರಿ ಯಾಯಿತು. ಭಾರತ ಸರಕಾರದ ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯವು ಈ ಸಮುದಾಯಗಳ ಕುರಿತು ಅಧ್ಯಯನ ಕೈಗೊಂಡು ಇವರ ಸಬಲೀಕರಣಕ್ಕಾಗಿ ಒಂದು ವರ್ಷದ ಒಳಗಾಗಿ ಮಾರ್ಗೋಪಾಯಗಳನ್ನು ವರದಿ ರೂಪದಲ್ಲಿ ಸಲ್ಲಿಸಲು ೨೩.೧೦.೨೦೦೩ ರಂದು ಆಯೋಗ ಒಂದನ್ನು ಸಂಘಟಿಸಲು ಠರಾವು ಪಾಸು ಮಾಡಿತು. ಅಲೆಮಾರಿಗಳ ತಿಳುವಳಿಕೆಯ ಚಳುವಳಿ ದೇಶದಾದ್ಯಂತ ಚಿಗುರೊಡೆಯಲು ಆರಂಭಿಸಿತು. ಆಯೋಗಕ್ಕೆ ಪೂರಕ ಮಾಹಿತಿ ಒದಗಿಸಲು ಕರ್ನಾಟಕ

ರಾಜ್ಯದ ಅಲೆಮಾರಿಗಳು ಚಿಂತನೆಯನ್ನು ಆರಂಭಿಸಿದರು. ರಾಜ್ಯದ ಅಲೆಮಾರಿ ಸಮುದಾಯಗಳ ಸಮಾನ ಮನಸ್ಕರಿಗಾಗಿ ವೇದಿಕೆಯೊಂದನ್ನು ಕಟ್ಟಲು ಕೆ ಭಾಸ್ಕರದಾಸ್ ಎಕ್ಕಾರು ಅವರು ಕರ್ನಾಟಕ ರಾಜ್ಯ ಚೆನ್ನದಾಸರ್ ಕ್ಷೇಮಾಭಿವೃದ್ಧಿ ಸಂಘದ ಅಡಿಯಲ್ಲಿ ಮಂಗಳೂರಿನ ಕಟೀಲಿನಲ್ಲಿ ೨೫.೧೨.೨೦೦೪ ರಂದು ಮತ್ತು ಕದರಿಯಲ್ಲಿ ೨೬.೧೨.೨೦೦೪ ರಂದು ಸಭೆ ಆಯೋಜಿಸಿದರು. ರಾಜ್ಯದ ಅಲೆಮಾರಿ ಚಿಂತಕರು ಸಮುದಾಯಗಳ ಸಾಮಾನ್ಯ ಸಮಸ್ಯೆಗಳ ಪರಿಹಾರಕ್ಕಾಗಿ ಸಂಘಟಿತರಾಗಲು ಅಣಿಗೊಂಡರು. ೧೦.೩.೨೦೦೫ ರಂದು ಕರ್ನಾಟಕ ರಾಜ್ಯ ಅಲೆಮಾರಿ, ಅರೆ ಅಲೆಮಾರಿ ಸಮುದಾಯಗಳ ಒಕ್ಕೂಟ ಅಧಿಕೃತವಾಗಿ ನೋಂದಾಯಿಸ ಲಾಯಿತು. ಆನಂತರ ಒಕ್ಕೂಟದಡಿಯಲ್ಲಿ ನೂರಾರು ಸಭೆ ಸಮಾರಂಭಗಳನ್ನು ಸಂಘಟಿಸಲಾದವು. ಅಲೆಮಾರಿಗಳ ಮಾಹಿತಿ ಸಂಗ್ರಹಣೆಯ ಕಾರ್ಯವೂ ಆರಂಭವಾಯಿತು. ಆದರೆ, ಭಾರತ ಸರಕಾರ ನೇಮಿಸಿದ ಅಲೆಮಾರಿಗಳ ಆಯೋಗ ಸರಕಾರದ ಬದಲಾವಣೆ ಯಿಂದಾಗಿ ಸ್ಥಗಿತಗೊಂಡಿತು.

ಅಲೆಮಾರಿ ಸಮಸ್ಯೆಗಳ ಕುರಿತು ಭಾರತ ಸರಕಾರದ ಮತ್ತು ಸಮುದಾಯಗಳ ಗಮನ ಸೆಳೆಯಲು ಇಂದಿರಾ ಗಾಂಧಿ ರಾಷ್ಟ್ರೀಯ ಕಲಾ ಕೇಂದ್ರ, ದೆಹಲಿಯಲ್ಲಿ ಬರೋಡದ ಭಾಷಾ ಸಂಸ್ಥೆ, ಆದಿವಾಸಿ ಏಕತಾ ಪರಿಷತ್ತು ಮತ್ತು ಲೋಕಧಾರಾ ಸಂಘಟನೆಗಳು ರಾಷ್ಟ್ರೀಯ ಮಟ್ಟದ ಅಲೆಮಾರಿಗಳ ೪ ದಿನಗಳ ವಿಚಾರ ಸಂಕಿರಣವನ್ನು ೨೦೦೭ರ ಏಪ್ರಿಲ್ ೨೧ ರಿಂದ ೨೪ ರವರೆಗೆ ಹಮ್ಮಿಕೊಂಡಿದ್ದವು. ಈ ಸಮಾವೇಶದಲ್ಲಿ ಭಾರತದ ಸುಮಾರು ೧೭೦೦ ಅಲೆಮಾರಿ ಮತ್ತು ಆದಿವಾಸಿ ಕಲಾವಿದರು, ಚಿಂತಕರು ಭಾಗವಹಿಸಿದರು. ಕರ್ನಾಟಕ ರಾಜ್ಯದಿಂದಲೂ ಇದರಲ್ಲಿ ೬೦ ಜನ ವಿವಿಧ ಅಲೆಮಾರಿ ಸಮುದಾಯಗಳ ಚಿಂತಕರು ಮತ್ತು ಕಲಾವಿದರು ಭಾಗವಹಿಸಿದರು. ಅನ್ಯಾಯಕ್ಕೆ ಒಳಗಾದ ಭಾರತದ ಅಲೆಮಾರಿ ಮತ್ತು ವಿಮುಕ್ತ ಬುಡಕಟ್ಟುಗಳಿಗಾಗಿ ಭಾರತ ಸರಕಾರ ಪ್ರತ್ಯೇಕ ಮೀಸಲಾತಿ ಪಟ್ಟಿಯನ್ನು ಪ್ರಕಟಿಸುವುದು ಸೂಕ್ತವೆಂದು ಚಿಂತಕರ ಸಭೆಯು ಒಮ್ಮತಾಭಿಪ್ರಾಯ ಪಟ್ಟಿತು. ೧೪.೧.೨೦೦೮ರ ಮಹಾಶ್ವೇತಾದೇವಿ ಅವರ ಜನ್ಮದಿನದಂದು ಸಾಂಕೇತಿಕವಾಗಿ ಅಲೆಮಾರಿ ಚಿಂತಕರೆಲ್ಲರೂ ದೆಹಲಿಯ ಇಂಡಿಯಾ ಇಂಟರನ್ಯಾಷನಲ್ ಸೆಂಟರ್‌ನಲ್ಲಿ ಸೇರಿ ಭಾರತದ ಪ್ರಧಾನಿ ಡಾ ಮನಮೋಹನ್ ಸಿಂಗ್ ಅವರಿಗೆ ಅಲೆಮಾರಿಗಳ ಆಯೋಗವನ್ನು ಪುನರ್ ರಚಿಸುವಂತೆ ಮನವಿ ಮಾಡಲು ನಿರ್ಧರಿಸಲಾಯಿತು. ಈ ಹಿನ್ನೆಲೆಯಲ್ಲಿ ಭಾರತ ಸರಕಾರದ ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯವು ಈ ಸಮುದಾಯಗಳ ಕುರಿತು ಅಧ್ಯಯನ ಕೈಗೊಂಡು ಒಂದು ವರ್ಷದ ಒಳಗಾಗಿ ವರದಿ ಸಲ್ಲಿಸಲು ೧೪.೩.೨೦೦೫ ರಂದು ಆಯೋಗ ಒಂದನ್ನು ಪುನರ್ ಸಂಘಟಿಸಲು ಠರಾವು ಪಾಸು ಮಾಡಿ ನಂತರದಲ್ಲಿ ಅಧ್ಯಕ್ಷ ಮತ್ತು ಸದಸ್ಯರನ್ನು ನೇಮಕ ಮಾಡಿತು. ರಾಷ್ಟ್ರೀಯ ವಿಮುಕ್ತ, ಅಲೆಮಾರಿ ಮತ್ತು ಅರೆ ಅಲೆಮಾರಿ ಬುಡಕಟ್ಟುಗಳ ಆಯೋಗದ ಅಧ್ಯಕ್ಷರಾಗಿ ಬಾಲಕೃಷ್ಣ ಎಸ್ ರೇಣಕೆ ಮತ್ತು ಸದಸ್ಯರಾಗಿ ಲಕ್ಷ್ಮಣಭಾಯಿ ಪಠಿನಿ ಅವರು ೬.೨.೨೦೦೬

ರಂದು ಕಾರ್ಯಾರಂಭ ಮಾಡಿದರು. ಆಯೋಗಕ್ಕೆ ಪೂರಕವಾಗಿ ಮಾಹಿತಿ ಒದಗಿಸಲು ಡಾ ಗಣೇಶ ದೇವಿ ಅವರ ಅಧ್ಯಕ್ಷತೆಯಲ್ಲಿ ೭ ಜನ ಸದಸ್ಯರ ತಾಂತ್ರಿಕ ಸಲಹಾ ಸಮಿತಿಯೊಂದನ್ನು ಮೂರು ತಿಂಗಳ ಅವಧಿಯಲ್ಲಿ ವರದಿ ಸಲ್ಲಿಸಲು ೮.೯.೨೦೦೬ ರಂದು ಭಾರತ ಸರಕಾರದ ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವಾಲಯವು ನೇಮಿಸಿತು. ಸಮಿತಿಯು ತನ್ನ ವರದಿಯನ್ನು ಸಕಾಲದಲ್ಲಿ ಆಯೋಗಕ್ಕೆ ಸಲ್ಲಿಸಿತು. ಆದರೆ, ಆಯೋಗ ತನ್ನ ಕಾಲಮಿತಿಯಲ್ಲಿ ವರದಿ ಸಲ್ಲಿಸಲು ಸಾಧ್ಯವಾಗದಿದ್ದಾಗ ಸಕಾರಣಗಳೊಂದಿಗೆ ಮತ್ತೊಂದು ವರ್ಷದ ಕಾಲಾವಧಿ ಬಯಸಿತು. ಭಾರತ ಸರಕಾರವು ಇದಕ್ಕೆ ತನ್ನ ಒಪ್ಪಿಗೆಯೂ ನೀಡಿತು. ಹೀಗಾಗಿ ಆಯೋಗವು ಈ ವರ್ಷ ತನ್ನ ವರದಿಯನ್ನು ಭಾರತ ಸರಕಾರಕ್ಕೆ ಸಲ್ಲಿಸಲಿದೆ. ವರದಿ ಸಿದ್ಧತೆಗಾಗಿ ಆಯೋಗವು ರಾಷ್ಟ್ರದಾದ್ಯಂತ ಪ್ರಯಾಣ ಬೆಳೆಸಿತು. ಕರ್ನಾಟಕದಲ್ಲಿ ಆಯೋಗಕ್ಕೆ ಮತ್ತು ಸರಕಾರಕ್ಕೆ ಸೂಕ್ತ ಮಾಹಿತಿಗಳನ್ನು ಒದಗಿಸಲು ಒಕ್ಕೂಟವು ಸಹಕರಿಸಿತು. ಹೀಗಾಗಿ ಅಲೆಮಾರಿಗಳಿಗಾಗಿ ಟೆಂಟ್ ಶಾಲೆಗಳನ್ನು ಮತ್ತು ಗ್ರಂಥಾಲಯಗಳನ್ನು ಆರಂಭಿಸಲು ಸರಕಾರ ಯೋಜಿಸಿತು. ಕರ್ನಾಟಕ ಅಲೆಮಾರಿಗಳ ವೈಜ್ಞಾನಿಕ ಅಧ್ಯಯನ ಮತ್ತು ಪುಸ್ತಕ ಪ್ರಕಟಣೆಗಾಗಿ ಕನ್ನಡ ಪುಸ್ತಕ ಪ್ರಾಧಿಕಾರಕ್ಕೆ ಮನ ಒಲಿಸಿತು. ಪ್ರಾಧಿಕಾರವು ಇದಕ್ಕಾಗಿ ತನ್ನ ಪೂರ್ಣ ಪ್ರಮಾಣದ ಸಹಕಾರ ನೀಡಿತು. ಇದಕ್ಕೆ ಈ ಕೃತಿಗಳೇ ಸಾಕ್ಷಿ.

ಕರ್ನಾಟಕ ಸಾಹಿತ್ಯ ಅಕಾಡೆಮಿ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಕನ್ನಡ ಸಾಹಿತ್ಯ ಪರಿಷತ್ತು, ಜನಗಣತಿ ನಿರ್ದೇಶನಾಲಯ, ಭಾರತೀಯ ಮಾನವಶಾಸ್ತ್ರೀಯ ಸರ್ವೇಕ್ಷಣಾ ಸಂಸ್ಥೆ, ಕರ್ನಾಟಕ ಹಿಂದುಳಿದ ವರ್ಗಗಳ ಆಯೋಗ, ಕರ್ನಾಟಕದ ಹಲವಾರು ವಿಶ್ವವಿದ್ಯಾಲಯಗಳು ಮತ್ತು ಸಂಘ ಸಂಸ್ಥೆಗಳು ಹಲವಾರು ತರಹದ ಶೋಧಕಾರ್ಯ ನಡೆಸಿ ಸಮುದಾಯಗಳ ಕುರಿತ ಮಾಹಿತಿಗಳನ್ನು ವರದಿ ಮತ್ತು ಪುಸ್ತಕ ರೂಪದಲ್ಲಿ ಹೊರತಂದಿವೆ. ಹಲವಾರು ಸಂಶೋಧಕರು ಸಮುದಾಯಗಳನ್ನು ಕುರಿತು ಎಂ ಫಿಲ್ ಪ್ರಬಂಧ ಹಾಗೂ ಪಿಎಚ್ ಡಿ ಮತ್ತು ಡಿ ಲಿಟ್ ಮಹಾಪ್ರಬಂಧಗಳನ್ನು ರಚಿಸಿದ್ದಾರೆ. ಕೆಲವು ಮಾಧ್ಯಮದವರು ಮತ್ತು ಚಿಂತಕರು ಸಮುದಾಯಗಳ ಕುಲಶಾಸ್ತ್ರೀಯ ಅಧ್ಯಯನ ಕೈಗೊಂಡು ಪುಸ್ತಕ ಮತ್ತು ಪತ್ರಿಕೆಗಳಲ್ಲಿ ಪ್ರಕಟಿಸಿ ಬಿತ್ತರಿಸಿದ್ದಾರೆ. ಆದರೂ, ಕರ್ನಾಟಕದ ಎಲ್ಲ ಸಮುದಾಯಗಳ ಅನನ್ಯತೆಯ ಸ್ಪಷ್ಟಚಿತ್ರ ಇದುವರೆಗೂ ಸಾಧ್ಯವಾಗಲಿಲ್ಲ. ಹಾಗೆಂತ ಎಲ್ಲ ಸಮುದಾಯಗಳ ಅನನ್ಯತೆಯ ಸ್ಪಷ್ಟಚಿತ್ರದ ಅಧ್ಯಯನ ಇದಾಗಿದೆ ಎಂದೂ ಹೇಳಲಾಗುತ್ತಿಲ್ಲ. ಅಲೆಮಾರಿ ಸಮುದಾಯಗಳ ಅಧ್ಯಯನದ ಈ ಮಾಲಿಕೆಯಲ್ಲಿ ಆಯ್ದ ೨೨ ಅಲೆಮಾರಿ ಸಮುದಾಯಗಳು ಮಾತ್ರ ಒಳಗೊಂಡಿವೆ.

ಅಲೆಮಾರಿ ಸಮುದಾಯಗಳ ಅಧ್ಯಯನ ಮಾಲಿಕೆಯ ಮುಖ್ಯ ಉದ್ದೇಶಗಳೇನೆಂದರೆ, ಅಲೆಮಾರಿ ಸಮುದಾಯದವರಿಂದಲೇ ಅವರ ಸಮುದಾಯದ ಮುಖವಾಣಿಯಾಗಿ ಅವರಲ್ಲಿಯೇ ಒಬ್ಬರು ಸಾಹಿತ್ಯ ಸಂಪಾದಿಸುವುದು. ಆಯಾ ಸಮುದಾಯಗಳ ಅನನ್ಯತೆ,

ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ ಇತ್ಯಾದಿ ರಂಗಗಳಲ್ಲಿಯ ನೈಜ ಸ್ಥಿತಿಗತಿಗಳನ್ನು ಗುರುತಿಸಿ ವೈಜ್ಞಾನಿಕವಾಗಿ ದಾಖಲಿಸುವುದಾಗಿದೆ. ಸಮುದಾಯಗಳಿಗಿರುವ ಕೀಳರಿಮೆಯನ್ನು ಹೋಗಲಾಡಿಸಲು ಅವರಲ್ಲಿಯ ಮಾನವೀಯ ಮೌಲ್ಯಗಳ ಮೇಲೆ ಬೆಳಕು ಚೆಲ್ಲುವುದು ಮತ್ತು ಇಂದಿನ ಜ್ವಲಂತ ಸಮಸ್ಯೆಗಳನ್ನು ಗುರುತಿಸಿ ಪರಿಹಾರೋಪಾಯಗಳನ್ನು ಹುಡುಕುವುದು ಇತ್ಯಾದಿಗಳು ಈ ಅಧ್ಯಯನದ ಉದ್ದೇಶಗಳಾಗಿವೆ.

ಅಲೆಮಾರಿ ಸಮುದಾಯದ ಒಬ್ಬರು ಅಥವಾ ಅನಿವಾರ್ಯವಿದ್ದಲ್ಲಿ ಇಬ್ಬರು ಲೇಖಕರು ಕೂಡಿ ತಮ್ಮ ಸಮುದಾಯದ ಸಾಹಿತ್ಯ ಸಂಪಾದಿಸಿ ಪುಸ್ತಕಗಳನ್ನು ರಚಿಸಿದ್ದಾರೆ. ಸಮುದಾಯದ ಲೇಖಕರ ಅಲಭ್ಯತೆಯಿದ್ದಲ್ಲಿ ಒಳಹೊರಗಿನ ಪಿಎಚ್ ಡಿ ಸಂಶೋಧಕರ ಜೊತೆಗೆ ಸಮುದಾಯದ ಲೇಖಕರನ್ನು ಸೇರಿಸಿಕೊಳ್ಳಲಾಗಿದೆ. ಪಿಎಚ್ ಡಿ ಸಂಶೋಧಕರು ತಮ್ಮ ಶೋಧನೆಯ ಅಂಶಗಳನ್ನು ಸಮುದಾಯದ ಲೇಖಕರ ಸಹಕಾರದೊಂದಿಗೆ ಮತ್ತೊಮ್ಮೆ ಆಯಾ ಸಮುದಾಯದವರೊಂದಿಗೆ ಪರಾಮರ್ಶಿಸಿ ಅಲೆಮಾರಿ ಸಮುದಾಯಗಳ ಮಾದರಿ ಪರಿಧಿಗೆ ಹೊಂದಿಸಿಕೊಳ್ಳಲಾಗಿದೆ.

ಕರ್ನಾಟಕ ರಾಜ್ಯ ಅಲೆಮಾರಿ, ಅರೆ ಅಲೆಮಾರಿ ಸಮುದಾಯಗಳ ಒಕ್ಕೂಟದ ಸಹಕಾರದೊಂದಿಗೆ ಕನ್ನಡ ಪುಸ್ತಕ ಪ್ರಾಧಿಕಾರವು ಕರ್ನಾಟಕ ರಾಜ್ಯದ ೨೨ ಅಲೆಮಾರಿ ಸಮುದಾಯಗಳ ಅಧ್ಯಯನವನ್ನು ಕೈಗೊಂಡಿತು. ೨೦೦೫-೦೬ ನೇ ಸಾಲಿನಲ್ಲಿ ಆರಂಭವಾದ ಅಲೆಮಾರಿ ಪುಸ್ತಕ ರಚನೆಯ ಚಿಂತನೆಯು ೨೦೦೬-೦೭ ನೇ ಸಾಲಿನಲ್ಲಿ ಸಾಕಾರ ರೂಪ ಪಡೆಯಲು ಆರಂಭವಾಯಿತು. ೨೦೦೭-೦೮ ನೇ ಸಾಲಿನಲ್ಲಿ ಈ ಯೋಜನೆಯು ಫಲಕಾರಿಯಾಯಿತು.

ಪರಿಶಿಷ್ಟ ಜಾತಿಯ ಬುಡ್ಗ ಜಂಗಮ್, ಚೆನ್ನ ದಾಸರ್, ದಕ್ಕಲಿಗ, ಗೋಸಂಗಿ, ಹಂದಿ ಜೋಗೀಸ್, ಕೊರಮ, ಶಿಳ್ಳೇಕ್ಯಾತಾಸ್, ಸಿಂಧೊಳ್ಳು, ಸುಡುಗಾಡು ಸಿದ್ಧ: ಪರಿಶಿಷ್ಟ ಪಂಗಡದ ಡುಂಗ್ರಿ ಗರಾಸಿಯ, ಹಕ್ಕಿಪಿಕ್ಕಿ, ಪಾರ್ಧಿ, ರಾಜಗೊಂಡ: ಹಿಂದುಳಿದ ವರ್ಗಗಳ ಬೈಲಪತ್ತಾರ್, ದೊಂಬಿದಾಸ, ಘಿಸಾಡಿ, ಗೋಂಧಳಿ, ಹೆಳವ, ಕಂಜರಭಾಟ, ಸಿಕ್ಕಿಗರ್ ಮತ್ತು ಪಶುಪಾಲನೆ ಹಿನ್ನೆಲೆಯ ಅಲೆಮಾರಿ ಕುರುಬ ಹಾಗೂ ಕಾಡುಗೊಲ್ಲ ಸಮುದಾಯಗಳು ಪ್ರಸ್ತುತ ಅಧ್ಯಯನಕ್ಕೆ ಒಳಪಟ್ಟಿರುವವು. ಇಲ್ಲಿಯ ಬುಡ್ಗ ಜಂಗಮ್, ಸುಡುಗಾಡುಸಿದ್ಧ ಮತ್ತು ಚೆನ್ನ ದಾಸರ್ ಸಮುದಾಯಗಳು ಒಂದೇ ಮೂಲದವಾಗಿದ್ದರೂ ಕಾಲಾತಂರದಲ್ಲಿ ಜಂಗಮರ ಪ್ರಭಾವಕ್ಕೆ ಬುಡ್ಗ ಜಂಗಮರು, ದಾಸರ ಪ್ರಭಾವಕ್ಕೆ ಚೆನ್ನದಾಸರು ಮತ್ತು ಸಿದ್ಧಿಸಾಧನೆಗೆ ಸುಡುಗಾಡುಸಿದ್ಧರು ಮೊರೆಹೋಗಿ ಸಮನಾಂತರದಲ್ಲಿ ಪ್ರತ್ಯೇಕ ಸಮುದಾಯಗಳಾಗಿ ಗುರುತಿಸಲ್ಪಟ್ಟವು. ದೊಂಬಿದಾಸರು ಮತ್ತು ಚೆನ್ನದಾಸರು ಸೋದರ ಸಂಬಂಧಿಗಳಾಗಿದ್ದರೂ, ಪರಿಶಿಷ್ಟ ಪಂಗಡದ ಹಕ್ಕಿಪಿಕ್ಕಿ ಹಾಗೂ ಪಾರ್ಧಿ ಬುಡಕಟ್ಟುಗಳು ಒಂದೇ ನೆಲಮೂಲದವಾ ಗಿದ್ದರೂ ಕಾರಣಾಂತರಗಳಿಂದಾಗಿ ಕಾಲಾಂತರದಲ್ಲಿ ಇವು ಪ್ರತ್ಯೇಕವಾಗಿ ಗುರುತಿಸಿಕೊಳ್ಳುತ್ತಿವೆ. ಶಿಳ್ಳೇಕ್ಯಾತ ಮತ್ತು ಗೋಂಧಳಿ

ಸಮುದಾಯಗಳಲ್ಲಿಯೂ ಕಳ್ಳುಬಳ್ಳಿಯ ಸಂಬಂಧ ಹಲವೆಡೆ ಕಂಡು ಬರುವುದು. ಈ ಕೃತಿಗಳಲ್ಲಿ ಇವುಗಳ ನಡುವಿನ ಸಾಮ್ಯತೆ ಮತ್ತು ಅಂತರಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

ಬೆಂಗಳೂರಿನ ಕನ್ನಡ ಪುಸ್ತಕ ಪ್ರಾಧಿಕಾರದಲ್ಲಿ ೧೯.೪.೨೦೦೭ ರಂದು ಈ ಕುರಿತು ಲೇಖಕರ ಕ್ಷೇತ್ರಕಾರ್ಯದ ಪೂರ್ವಭಾವಿ ಸಿದ್ಧತೆಯ ಮತ್ತು ೩.೫.೨೦೦೭ ರಂದು ಸಮುದಾಯಗಳ ಸಮೀಕ್ಷೆಯ ಪ್ರಶ್ನಾವಳಿ ಮತ್ತು ವಿಷಯ ಅಧ್ಯಯನದ ಹಂದರ ಕುರಿತು ಕಮ್ಮಟಗಳನ್ನು ಜರುಗಿಸಲಾದವು. ೧.೬.೨೦೦೭ರಂದು ಲೇಖಕರು ಸಂಗ್ರಹಿಸಿದ ಮಾಹಿತಿಗಳ ಪರಿಶೀಲನೆಯನ್ನು ಹಾಗೂ ೧.೮.೨೦೦೭ ರಂದು ಮತ್ತು ೩.೯.೨೦೦೭ ರಂದು ಲೇಖಕರು ಸಲ್ಲಿಸಿದ ಕರಡು ವರದಿಗಳನ್ನು ಪರಿಶೀಲಿಸಲಾದವು. ೬.೧೧.೨೦೦೭ ರಂದು ಲೇಖಕರು ಸಲ್ಲಿಸಿದ ಅಂತಿಮ ವರದಿ ಮತ್ತು ಸಮೀಕ್ಷೆಯ ಅಂಕಿಅಂಶಗಳನ್ನು ವೈಜ್ಞಾನಿಕವಾಗಿ ಪರಿಶೀಲಿಸಿ ಪ್ರಕಟಿಸಲು ಅಣಿಗೊಳಿಸಲಾಯಿತು.

ಲೇಖಕರು ತಮ್ಮ ಸಮುದಾಯಗಳನ್ನು ಕುರಿತು ಪ್ರತ್ಯೇಕ ಕಮ್ಮಟ, ಸಮಾವೇಶ ವಿಚಾರ ಸಂಕಿರಣಗಳನ್ನು ನಡೆಸಿ ಸಮುದಾಯದ ಕೌಟುಂಬಿಕ ಸಮೀಕ್ಷೆ ಮಾಡಿ ಅಥವಾ ಮಾಡಿಸಿ ವ್ಯಕ್ತಿ ಮತ್ತು ವಿಷಯ ಅಧ್ಯಯನ ವಿಧಾನದಿಂದ ಮಾಹಿತಿಗಳನ್ನು ವೈಜ್ಞಾನಿಕವಾಗಿ ಹಾಗೂ ಪ್ರಾಮಾಣೀಕವಾಗಿ ಸಂಗ್ರಹಿಸಿ ಈ ಪುಸ್ತಕಗಳನ್ನು ರಚಿಸಿದ್ದಾರೆ. ಅವರುಗಳ ಮತ್ತು ಈ ಕುರಿತ ಎಲ್ಲ ಸಮುದಾಯಗಳ ಸಂಘಟನೆಗಳ ಸಹಕಾರಕ್ಕೆ ಋಣಿಯಾಗಿದ್ದೇನೆ. ಈ ಯೋಜನೆಯಲ್ಲಿ ನನ್ನನ್ನು ಸಂಪಾದಕನನ್ನಾಗಿ ತೊಡಗಿಸಿಕೊಂಡು ಯೋಜನೆ ಫಲಿಸುವಲ್ಲಿ ಹೆಜ್ಜೆ ಹೆಜ್ಜೆಗೂ ಸಹಕರಿಸಿದ ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರಾದ ಪ್ರೊ ಎಸ್ ಜಿ ಸಿದ್ಧರಾಮಯ್ಯ ಅವರಿಗೆ ಆಡಳಿತಾಧಿಕಾರಿಗಳಾದ ಅಶೋಕ ಎನ್ ಚಲವಾದಿ ಅವರಿಗೆ ಮತ್ತು ಪ್ರಾಧಿಕಾರದ ಎಲ್ಲ ಉದ್ಯೋಗಿಗಳಿಗೆ ಪ್ರೀತಿಪೂರ್ವಕವಾಗಿ ನೆನೆಯುವೆ. ಕನ್ನಡ ವಿಶ್ವ ವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗದ ಸಹೋದ್ಯೋಗಿ ಸ್ನೇಹಿತರಿಗೆ ಮತ್ತು ವಿಶ್ವವಿದ್ಯಾಲಯದ ಬುಡಕಟ್ಟು, ಅಕ್ಷರ ಹಾಗೂ ಸಿರಿಗನ್ನಡ ಗ್ರಂಥಾಲಯಗಳ ಮಿತ್ರರ ಸಹಕಾರಕ್ಕೆ ಕೃತಜ್ಞನಾಗಿದ್ದೇನೆ.

ಈ ಯೋಜನೆಗೆ ತಗಲುವ ಹಣಕಾಸನ್ನು ನೀಡಲು ಕಟಿಬದ್ಧವಾದ ಕರ್ನಾಟಕ ಸರಕಾರಕ್ಕೆ ಮತ್ತು ಈ ಕುರಿತು ಸತತವಾಗಿ ಅಧಿಕಾರಿಗಳ ಗಮನ ಸೆಳೆದ ಕರ್ನಾಟಕ ರಾಜ್ಯ ಅಲೆಮಾರಿ, ಅರೆ ಅಲೆಮಾರಿ ಸಮುದಾಯಗಳ ಒಕ್ಕೂಟಕ್ಕೆ ವಿನಯಪೂರ್ವಕವಾಗಿ ನೆನೆಯುವೆ. ಸಂಪಾದಕ ಮಂಡಳಿಯ ಸದಸ್ಯರಿಗೆ, ಛಾಯಾಚಿತ್ರಗಳನ್ನು ಸಂಗ್ರಹಿಸಿ ಸುಂದರವಾಗಿ ವಿನ್ಯಾಸಗೊಳಿಸಿದ ದೇವಲಾಪುರದ ರೋಹಿತ್ ಗ್ರಾಫಿಕ್ಸ್, ಕ್ಷೇತ್ರಕಾರ್ಯದ ಮಾಹಿತಿಗಳನ್ನು ಗಣಕ ಯಂತ್ರಕ್ಕೆ ಅಳವಡಿಸಿದ ಹೊಸಪೇಟೆಯ ಎಸ್ ಎಲ್ ವಿ ಗ್ರಾಫಿಕ್ಸ್, ಗಣಕ ಯಂತ್ರದ ಅಂಕಿಅಂಶಗಳನ್ನು ಪರಿಷ್ಕರಿಸುವಲ್ಲಿ ಸಹಕರಿಸಿದ ಮಲ್ಲಿಕಾರ್ಜುನ ಬಿ ಮಾನ್ಪಡೆ ಅವರುಗಳಿಗೆ, ಅಕ್ಷರ ಸಂಯೋಜಿಸಿದ ಕಮಲಾಪುರದ ಭಾವನಾ ಗ್ರಾಫಿಕ್ಸ್, ಮುಖಪುಟ

ವಿನ್ಯಾಸ ಮತ್ತು ರೇಖಾ ಚಿತ್ರಗಳನ್ನು ಬರೆದುಕೊಟ್ಟ, ಪ್ರತಾಪ ರಾ ಬಹುರೂಪಿ, ಕರಡು ತಿದ್ದಿದ ಡಾ ಆರ್ ಬಿ ಕುಮಾರ್, ಮುದ್ರಣ ಕಾರ್ಯ ಪೂರೈಸಿದ ರಾಜಾ ಪ್ರಿಂಟರ್ಸ್ ಅವರುಗಳಿಗೆ ಮತ್ತು ಈ ಯೋಜನೆಯ ಸಾಕ್ಷಾತ್ಕಾರಕ್ಕೆ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಕರಿಸಿದ ಎಲ್ಲರಿಗೂ ನೆನೆಯುವೆ.

ಇದು ನೆಲಮೂಲ ಸಂಸ್ಕೃತಿಗಳ ಅಧ್ಯಯನ ಮಾಲೆ. ಲೇಖಕರು ತಮ್ಮ ಸಮುದಾಯಗಳ ನೈಜಚಿತ್ರ ಬಿಡಿಸಲು ಇಲ್ಲಿ ಸರ್ವಪ್ರಯತ್ನ ಮಾಡಿದ್ದಾರೆ. ಈ ಮಾಲಿಕೆಯೂ ಅಲೆಮಾರಿಗಳ ಅಭಿವೃದ್ಧಿಗೆ, ಅಧ್ಯಯನಕಾರರ ಮುಂದಿನ ಅಧ್ಯಯನಗಳಿಗೆ, ಯೋಜಕರ ಭವಿಷತ್ತಿನ ಯೋಜನೆಗಳಿಗೆ ಅಮೂಲ್ಯ ಆಕರವಾಗಬಹುದೆಂದು ನಂಬಿದ್ದೇನೆ. ಹಾಗಾದರೆ ಈ ಶ್ರಮ ಸಾರ್ಥಕವೆಂದು ಭಾವಿಸುವೆ.

೨೬.೦೧.೨೦೦೮ — ಡಾ ಕೆ ಎಂ ಮೇತ್ರಿ

ವಿದ್ಯಾರಣ್ಯ — ಸಂಪಾದಕ

# ಅರಿಕೆ

**ಕ**ರ್ನಾಟಕ ರಾಜ್ಯದ ಪಶುಪಾಲಕ ಸಮುದಾಯಗಳಲ್ಲಿ ಅಲೆಮಾರಿ ಕುರುಬ ಸಮುದಾಯವು ಒಂದು. ಈ ಸಮುದಾಯವು ತನ್ನ ಮೂಲ ವೃತ್ತಿಗೆ ಅಂಟಿಕೊಂಡು ಜೀವನ ನಿರ್ವಹಣೆಗೋಸ್ಕರ ಕುಟುಂಬ ಸಮೇತ ಕುರಿ-ಮೇಕೆಗಳಿಗೆ ಮೇವು ನೀರು ಹುಡುಕಿಕೊಂಡು ವರ್ಷವಿಡಿ ಅಲೆದಾಡುತ್ತಿದ್ದಾರೆ. ಇವರು ತಮ್ಮದೇ ಆದ ವೈಶಿಷ್ಟ್ಯತೆಯಿಂದ ಕೂಡಿದ ಆಚಾರ, ವಿಚಾರ, ಹಾಗೂ ಸಂಸ್ಕೃತಿಯನ್ನು ಹೊಂದಿದ ಆದಿಮ ಬುಡಕಟ್ಟಿನವರು.ಇವರ ಅಲೆಮಾರಿತನದ ಸಾಂಸ್ಕೃತಿಕ ಬದುಕು ಇದುವರೆಗೂ ದಾಖಲಾಗಿರುವುದಿಲ್ಲ. ಈ ಕೊರತೆಯನ್ನು ತುಂಬಿಕೊಡುವ ಪ್ರಯತ್ನವನ್ನು ಪ್ರಾಮಾಣಿಕವಾಗಿ ಇಲ್ಲಿ ಮಾಡಲಾಗಿದೆ.

ಈ ಕೃತಿಯನ್ನು ರಚಿಸಲು ಅವಕಾಶ ಮಾಡಿಕೊಟ್ಟ ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರಾದ ಪ್ರೊ ಎಸ್ ಜಿ ಸಿದ್ದರಾಮಯ್ಯನವರಿಗೆ ಹಾಗೂ ಆಡಳಿತ ಅಧಿಕಾರಿಗಳಾದ ಶ್ರೀ ಅಶೋಕ ಎನ್ ಚಲವಾದಿಯವರಿಗೆ, ಸಂಶೋಧನಾ ಗುರುಗಳಾದ ಮತ್ತು ಈ ಅಧ್ಯಯನ ಮಾಲೆಯ ಸಂಪಾದಕರಾದ ಡಾ ಕೆ ಎಂ ಮೇತ್ರಿಯವರಿಗೆ, ಕರ್ನಾಟಕ ರಾಜ್ಯ ಅಲೆಮಾರಿ ಮತ್ತು ಅರೆಅಲೆಮಾರಿ ಸಮುದಾಯಗಳ ಒಕ್ಕೂಟದ ಅಧ್ಯಕ್ಷರಾದ ಶ್ರೀ ಕೆ ಭಾಸ್ಕರದಾಸ ಎಕ್ಕಾರು ಅವರುಗಳಿಗೆಲ್ಲ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಈ ಕುರಿತು ಪಿಎಚ್ ಡಿ ಅಧ್ಯಯನ ಮಾಡಲು ಅವಕಾಶ ಕಲ್ಪಿಸಿದ ಕನ್ನಡ ವಿಶ್ವವಿದ್ಯಾಲಯಕ್ಕೂ ಮತ್ತು ಬುಡಕಟ್ಟು ಅಧ್ಯಯನ ವಿಭಾಗದ ಎಲ್ಲ ಬೋಧಕ ಮತ್ತು ಬೋಧಕೇತರರಿಗೂ, ವಿಶ್ವವಿದ್ಯಾಲಯದ ಗ್ರಂಥಪಾಲಕರಿಗೂ ನೆನೆಯುವೆ.

ಮಾಹಿತಿ ಸಂಗ್ರಹಣೆಗೆ ಹೋದಾಗಲೆಲ್ಲಾ ತಮ್ಮ ಮಗನಂತೆ ಕಂಡು ಅಡವಿಯಲ್ಲಿ ಊಟ, ವಸತಿ ನೀಡಿ ಕೃತಿ ಬರವಣಿಗೆಗೆ ಅಗತ್ಯವಾದ ಮಾಹಿತಿಗಳನ್ನು ಒದಗಿಸಿದ ಅಲೆಮಾರಿ ಕುರುಬ ಸಮುದಾಯದ ಎಲ್ಲಾ ಮಾಹಿತಿದಾರರಿಗೂ ಸಮುದಾಯದ ಸದಸ್ಯರಿಗೂ ನಾನು ಋಣಿಯಾಗಿರುವೆ.

ಸರ್ಕಾರಿ ಪದವಿ ಪೂರ್ವ ಕಾಲೇಜು ಸಿರುಗುಪ್ಪದ ಪ್ರಾಚಾರ್ಯರಾದ ಬಸವರಾಜ ಹಾಗೂ ಉಪನ್ಯಾಸಕರು ಮತ್ತು ಪ್ರೌಢಶಾಲಾ ಶಿಕ್ಷಕ ವೃಂದದವರಿಗೂ, ಸಿಬ್ಬಂದಿವರ್ಗದವರಿಗೂ, ಸ್ನೇಹಿತರಾದ ಡಾ ಎ ಚನ್ನಪ್ಪ, ಡಾ ರಾಮಕೃಷ್ಣ, ಡಾ ಸಿದ್ದಪ್ಪ, ಚಂದ್ರಪ್ಪ ಸೊಬಟಿ, ಅರುಣಕುಮಾರ, ನಿಂಗಪ್ಪ ಅವರಿಗೂ ನೆನೆಯುವೆ.

ಅಳಿಯನ ಓದಿನ ಹೆಗ್ಗಳಿಕೆಯನ್ನು ಸಾರುತ್ತ ಅನೇಕ ಕನಸುಗಳನ್ನು ಕಟ್ಟಿಕೊಂಡು ಅವು ಕೈಗೂಡುವ ಮುನ್ನವೇ ದೈವಾಧೀನರಾದ ನಾಗೇಂದ್ರಪ್ಪ ಮಾಮನವರಿಗೂ, ಅಕ್ಕಂದಿರಾದ ದ್ರಾಕ್ಷಾಯಣಿ ಕೆ ಎಂ ಮೇತ್ರಿ ಅವರಿಗೂ ನನ್ನ ಏಳ್ಗೆಯನ್ನು ಬಯಸುತ್ತಾ ಸದಾ ಮೂಕ ಪ್ರೇಕ್ಷಕನಂತೆ ಎದುರು ನೋಡುತ್ತಿರುವ ತಂದೆ ಶ್ರೀ ಕೆ ದೊಡ್ಡರುದ್ರಪ್ಪ, ತಾಯಿ ಶ್ರೀಮತಿ ಹನುಮಂತಮ್ಮ ಅವರಿಗೂ ಮತ್ತು ಹುಸೇನಪ್ಪ ಮಾಮನಿಗೂ, ಶಿವಪದ್ಮ ಅಣ್ಣನಿಗೂ, ಪ್ರಪುಲ ಅಕ್ಕನವರಿಗೂ ನನ್ನ ನಮನಗಳು. ದೀರ್ಘಕಾಲದ ಬರವಣಿಗೆಯನ್ನು ತಾಳ್ಮೆಯಿಂದ ಸಹಕರಿಸಿದ ಅಕ್ಕ ನಾಗಲಕ್ಷ್ಮಿ, ಅಣ್ಣ ಕಾಳೇಶಪ್ಪ, ವಕೀಲರಾದ ತಮ್ಮ ಸಣ್ಣ ಯರ್ರೆಪ್ಪ, ಅತ್ತಿಗೆ ಲಕ್ಷ್ಮಿ, ಸೊಸೆ ಕವಿತಾ ಹಾಗೂ ಅಣ್ಣನ ಮಕ್ಕಳು ಮತ್ತು ಅಕ್ಕನ ಮಕ್ಕಳಿಗೂ ಅಭಾರಿಯಾಗಿರುವೆ.

ಬರವಣಿಗೆಯ ಅವಧಿಯಲ್ಲಿ ಸಹನೆಯಿಂದ ಸಹಕರಿಸಿದ ಪತ್ನಿ ಸುಮ, ಮಗಳು ಐಶ್ವರ್ಯ ಹಾಗೂ ನನ್ನ ಅಧ್ಯಯನಕ್ಕೆ ಸಹಕರಿಸಿ ಪ್ರೋತ್ಸಾಹಿಸಿದ ಅತ್ತೆ ಮಾವನವರಾದ ಶ್ರೀಮತಿ ಲಕ್ಷ್ಮಿದೇವಿ, ಶ್ರೀ ಕೆಂಚಲಿಂಗಪ್ಪನವರಿಗೂ ಮತ್ತು ಅವರ ಕುಟುಂಬ ವರ್ಗದ ಸದಸ್ಯರೆಲ್ಲರಿಗೂ ನನ್ನ ಸವಿ ನೆನೆಕೆಗಳು.

ಸಮೀಕ್ಷೆಯ ಅಂಕಿಅಂಶಗಳನ್ನು ಕೋಷ್ಟಕಗಳಿಗೆ ಅಳವಡಿಸುವಲ್ಲಿ ಸಹಕರಿಸಿದ ಮಲ್ಲಿಕಾರ್ಜುನ ಮಾನ್ಪಡೆ ಅವರಿಗೆ ಅಕ್ಷರ ದೋಷಗಳನ್ನು ಸರಿಪಡಿಸಿದ ಡಾ ಆರ್ ಬಿ ಕುಮಾರ್ ಅವರಿಗೆ ಹಾಗೂ ಈ ಕೃತಿಯನ್ನು ಸುಂದರವಾಗಿ ಅಕ್ಷರ ಸಂಯೋಜನೆಗೊಳಿಸಿದ ಕಮಲಾಪುರದ ಭಾವನಾ ಗ್ರಾಫಿಕ್ಸ್‌ನ ಶ್ರೀನಿವಾಸ ಕೆ ಕಲಾಲ್ ಅವರಿಗೆ ಋಣಿಯಾಗಿದ್ದೇನೆ.

ಡಾ ಯರ್ರಪ್ಪ ಡಿ

# ಪರಿವಿಡಿ

ಕೋಷ್ಟಕಗಳು



ವೃತ್ತಚಿತ್ರ



ಭೂಪಟ

# ೧

# ಪ್ರವೇಶ

ಭೂಮಿಯ ಮೇಲೆ ಅವತರಿಸಿದ ಮಾನವ ತನ್ನ ಮೊದಲ ಕಾಲಘಟ್ಟದಲ್ಲಿ ಕಾಡು ಸ್ಥಿತಿಯಲ್ಲಿದ್ದು ಅಲೆಮಾರಿ ಬದುಕು ನಡೆಸುತ್ತಿದ್ದನೆಂಬುದು ಸರ್ವವೇದ್ಯವಾದ ಸಂಗತಿ. ಕಾಡು ಸ್ಥಿತಿಯಲ್ಲಿದ್ದಾಗ ಮಾನವನು ಆಹಾರಕ್ಕಾಗಿ ನಿಸರ್ಗದ ಮಡಿಲಲ್ಲಿ ದೊರೆಯುವ ಪ್ರಾಣಿ-ಪಕ್ಷಿ, ಗಡ್ಡೆ-ಗೆಣಸು ಹಣ್ಣು-ಹಂಪಲುಗಳನ್ನು ತಿಂದು ಜೀವಿಸುತ್ತಿದ್ದ. ಇವನ್ನು ಹುಡುಕಿಕೊಂಡು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಸಂಚರಿಸುತ್ತಿದ್ದ. ಈ ಸಂದರ್ಭದಲ್ಲಿ ಬೆಟ್ಟ-ಗುಡ್ಡ, ಗವಿಗಳು, ಕಾಡಿನಲ್ಲಿರುವ ಮರಗಳ ಪೊಟರೆಗಳು ಆತನ ವಾಸಸ್ಥಳಗಳಾಗಿದ್ದವು. ಆಹಾರ ಮತ್ತು ಆಶ್ರಯಗಳೆರಡಕ್ಕೂ ಅವನು ನಿಸರ್ಗವನ್ನೇ ಅವಲಂಬಿಸಿದ್ದ. ನಿಸರ್ಗವು ಅಂದಿನ ಮಾನವನ ಜೀವಾಳವಾಗಿತ್ತು. ನಿಸರ್ಗದೊಂದಿಗೆ ಅವಿನಾಭಾವ ಸಂಬಂಧ ಹೊಂದಿದ್ದ ಆದಿಮಾನವ ಕಾಲದ ಬದಲಾವಣೆಗಳಿಂದಾಗುವ ಏರು-ಪೇರುಗಳನ್ನು ಚೆನ್ನಾಗಿ ಅರಿತಿದ್ದ. ಪ್ರಕೃತಿಯ ವಿಕೋಪಗಳಾದ ಮಳೆ, ಗಾಳಿ, ಬಿಸಿಲು, ಚಳಿ, ಗುಡುಗು, ಮಿಂಚು, ಪ್ರವಾಹ, ಬೆಂಕಿ, ಕಾಡುಪ್ರಾಣಿಗಳ ಹಾವಳಿ ಇತ್ಯಾದಿಗಳಿಂದಾಗುವ ದುಷ್ಪರಿಣಾಮಗಳನ್ನು ಎದುರಿಸಲು ಉಪಾಯ ಕಂಡುಕೊಂಡಿದ್ದ.

ಮಾನವನು ಬೇಟೆ ಸಂಸ್ಕೃತಿಯ ಕಾಲಘಟ್ಟದಲ್ಲಿ ಮುಂದುವರೆದಾಗ ಪ್ರಾಣಿಗಳ ಮಾಂಸವೇ ಆತನ ಆಹಾರವಾಯಿತು. ಪ್ರಾಣಿಗಳ ಚರ್ಮವು ಅವನ ಹೊದಿಕೆಯಾಯಿತು. ಸಂಚಾರಿ ಜೀವನದಿಂದ ತಟಸ್ಥ ಜೀವನಕ್ಕೆ ಮುಂದುವರಿದಾಗ ಕಾಡಿನಲ್ಲಿ ಕಂಡ ಪ್ರಾಣಿಗಳನ್ನು ಬೇಟೆಯಾಡಿ ತರುವ ಬದಲು ತನ್ನ ಬುದ್ಧಿವಂತಿಕೆಯಿಂದ ಅವನ್ನು ಹಿಡಿದು ಪಳಗಿಸಿ ಸಾಕಿ ತಳಿ ಬೆಳೆಸುವ ವಿದ್ಯೆಯನ್ನು ಕಂಡುಕೊಂಡನು.

ಮಾನವನು ಭೌತಿಕವಾಗಿ ವಿಕಾಸವಾದಂತೆ ಬೌದ್ಧಿಕಮಟ್ಟದಲ್ಲಿ ಕೆಲವೊಂದು ಪರಿವರ್ತನೆಗಳು ಕಂಡುಬಂದವು. ಪರಿಣಾಮವಾಗಿ ಕಾಡಿನಲ್ಲಿರುವ ಕಾಡುಪ್ರಾಣಿಗಳನ್ನು ಪಳಗಿಸಿ ಅಲೆದಾಡಿ ಸಾಕಿ ಸಲುವುದರ ಜೊತೆಗೆ ಬದುಕಿನ ನೆಲೆ-ಬೆಲೆಯನ್ನು ಕಂಡುಕೊಂಡನು. ಕಾಲಾಂತರದಲ್ಲಿ ಬೌದ್ಧಿಕ ವಿಕಾಸವಾದಂತೆ ಕೃಷಿ ಸಂಸ್ಕೃತಿಗೆ ಬಂದನು. ಜೀವನದ ಮೂಲಭೂತ ಅನಿವಾರ್ಯತೆಗಳು ಏನೆಂಬುದನ್ನು ಕಂಡುಕೊಂಡನು. ಅಲೆಮಾರಿ ಜೀವನದ ಬದಲಾಗಿ ಒಂದು ನಿರ್ದಿಷ್ಟ

ಪ್ರದೇಶದಲ್ಲಿ ನೆಲೆಗೊಳ್ಳಲು ಆರಂಭಿಸಿದನು. ತನ್ನ ವಾಸಕ್ಕೆ ಹಾಗೂ ಆಹಾರ ಬೆಳೆಯಲು ಯೋಗ್ಯವಾದ ಸ್ಥಳಗಳನ್ನು ಆಯ್ಕೆ ಮಾಡಿಕೊಂಡು ಹಟ್ಟಿಗಳನ್ನು ನಿರ್ಮಿಸಿಕೊಂಡನು. ಪರಿಣಾಮವಾಗಿ ಕೃಷಿ ಪದ್ಧತಿಯು ಅಸ್ತಿತ್ವಕ್ಕೆ ಬಂದಿತು. ಹಟ್ಟಿಗಳು ಗ್ರಾಮಗಳ ರೂಪಾಂತರಕ್ಕೆ ನಾಂದಿಯಾಯಿತು ಹಾಗೂ ವೈವಿಧ್ಯಮಯ ಸಂಸ್ಕೃತಿಯ ಬೆಳವಣಿಗೆಗೆ ಕಾರಣವಾಯಿತು. ಮಾನವನ ಬದುಕು ಹಲವು ಶೋಧನೆಗಳಿಗೆ ಪ್ರೇರಣೆಯಾಯಿತು.

ಕೃಷಿ ಮತ್ತು ಪಶುಪಾಲನೆಯು ಮಾನವನ ಮೂಲ ವೃತ್ತಿಗಳಾಗಿದ್ದು ಪ್ರಕೃತಿಯೊಡನೆ ನೇರ ಸಂಬಂಧ ಹೊಂದಿವೆ. "ಈ ಮೂಲ ವೃತ್ತಿಗಳನ್ನು ಅವಲಂಬಿಸಿಕೊಂಡು ಇತರ ವೃತ್ತಿಗಳು ಬೆಳೆಯುತ್ತವೆ. ಮೂಲವೃತ್ತಿಯು ನಾಗರೀಕ ಮಾನವನು ಪ್ರಥಮವಾಗಿ ಕೈಗೊಂಡಂತಹ ಕೆಲಸವಾಗಿರುತ್ತದೆ. ತನ್ನ ಆಹಾರ, ವಸತಿ, ಬಟ್ಟೆ ಈ ಮೂರು ಮೂಲ ಅವಶ್ಯಕತೆಗಳನ್ನು ಪೂರೈಸುವುದಕ್ಕಾಗಿ ಮಾಡುವ ಕೆಲಸ ಮೂಲ ವೃತ್ತಿಯಾಗಿರುತ್ತದೆ. ಸಾಮಾನ್ಯವಾಗಿ ಮೂಲ ವೃತ್ತಿ ಅಥವಾ ಪ್ರಥಮ ವೃತ್ತಿಯು ಮಾನವನಿಗೂ ಪ್ರಕೃತಿಗೂ ನೇರವಾದ ಸಂಬಂಧವನ್ನು ಕಲ್ಪಿಸುತ್ತದೆ" (ದಿನೇಶ್‌ರಾವ್ ರಾ :೧೯೯೬: ೧೭೫). ಕೃಷಿಯು ಪಶುಪಾಲನೆಯನ್ನು ಒಳಗೊಂಡಿರುವುದರಿಂದ ಪಶುಪಾಲನೆಯನ್ನು ಬಿಟ್ಟು ಕೃಷಿ ಉಳಿಯಲಾರದು. ಅದೇ ರೀತಿ ಕೃಷಿಯನ್ನು ಬಿಟ್ಟು ಪಶುಪಾಲನೆಯು ಇರಲಾರದು. ಈ ಅವಿನಾಭಾವ ಸಂಬಂಧಕ್ಕೆ ಭಾರತದ ನೈಸರ್ಗಿಕ ಸಂಪನ್ಮೂಲಗಳೇ ಕಾರಣವಾಗಿವೆ. ಆದಿಕಾಲದ ಮಾನವ ಸಾಕು ಪ್ರಾಣಿಗಳಾದ ಕುರಿ-ಮೇಕೆಗಳನ್ನು ಸಂಗೋಪನೆ ಮಾಡುತ್ತ ತನ್ನ ಹೊಟ್ಟೆಯನ್ನು ತುಂಬಿಸಿಕೊಳ್ಳುತ್ತಿದ್ದ. ಪ್ರಸ್ತುತ ಕಾಲದಲ್ಲಿಯೂ ಅಲೆಮಾರಿ, ಅರೆ-ಅಲೆಮಾರಿ ಹಾಗೂ ಸ್ಥಾನಿಕ ವಿಧಾನಗಳನ್ನು ಅನುಸರಿಸಿ ಕುರಿಸಂಗೋಪನೆ ಮಾಡುತ್ತಿದ್ದಾನೆ. ನಿಸರ್ಗದ ಸಂಪನ್ಮೂಲಗಳನ್ನು ಅಭಿವೃದ್ಧಿ ಪಡಿಸುತ್ತಾ ತಾನು ಬದುಕುತ್ತಿದ್ದಾನೆ. ಈ ಅಧ್ಯಯನವು ಅಲೆಮಾರಿ ವಿಧಾನವನ್ನು ಅನುಸರಿಸಿ ಕುರಿ ಸಂಗೋಪನೆ ಮಾಡುವ ಅಲೆಮಾರಿ ಕುರುಬ ಸಮುದಾಯದ ವ್ಯಾಪ್ತಿಗೆ ಬರುತ್ತದೆ.

ಜೀವನ ನಿರ್ವಹಣೆಗೋಸ್ಕರ ಮೂಲ ವೃತ್ತಿಯನ್ನು ತೊರೆಯದೆ, ಕುಟುಂಬ ಸಮೇತ ವಲಸೆ ಬಂದು ಕುರಿಗಳಿಗೆ ಮೇವು-ನೀರು ಹುಡುಕಿಕೊಂಡು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವರ್ಷವಿಡೀ ಅಲೆದಾಡುತ್ತಾ ಕುರಿ ಸಂಗೋಪನೆ ಮಾಡುವವರೇ ಅಲೆಮಾರಿ ಕುರುಬರು. ಹೀಗೆ ಕುರಿಸಂಗೋಪನೆ ಮಾಡುವವರನ್ನು ಅಲೆಮಾರಿ ಕುರುಬ, ಸಂಚಾರಿ ಕುರುಬ, ಬೆಳಗಾವಿ ಕುರುಬರೆಂದು ಕರೆಯುತ್ತಾರೆ. ಕುರಿ ಸಂಗೋಪನೆಗೆಂದು ವಲಸೆ ಬಂದ ಇವರು ತಮಗೆ ಅನುಕೂಲವೆನಿಸಿದ ಭೂ ಪ್ರದೇಶದಲ್ಲಿ ಅಲೆದಾಡಿ ಕುರಿ ಸಂಗೋಪನೆ ಮಾಡದೆ, ತಮ್ಮ ಕುರಿ-ಮೇಕೆಗಳಿಗೆ ಮೇವು, ನೀರು ಎಲ್ಲಿ ಸಮಗ್ರವಾಗಿ ದೊರೆಯುತ್ತದೆಯೋ ಹಾಗೂ ಅವುಗಳ ಜೀವನ ಎಲ್ಲಿ ಚೆನ್ನಾಗಿರುತ್ತದೆಯೋ ಆ ಪ್ರದೇಶಗಳಲ್ಲಿ ಅಲೆದಾಡುತ್ತಾ ಜೀವನವನ್ನು ಸಾಗಿಸುತ್ತಾರೆ. ಅವರ ಬದುಕು ಕುರಿ ಸಂಗೋಪನೆಯಿಂದಲೇ ನಡೆಯುವುದು. ಅವರು ಆ ವೃತ್ತಿಯನ್ನು ಬಿಟ್ಟು ಬೇರ್ಯಾವ ವೃತ್ತಿಯನ್ನು ಅರಿಯರು.

ಅಲೆಮಾರಿ ಕುರುಬರು ಬೆಳಗಾವಿ ಜಿಲ್ಲೆಯವರಾಗಿದ್ದು, ಹೆಚ್ಚಾಗಿ ಚಿಕ್ಕೋಡಿ ತಾಲೂಕಿನ ವಿವಿಧ ಗ್ರಾಮಗಳಿಂದ ವಲಸೆ ಬಂದವರು. ಆ ಗ್ರಾಮಗಳಲ್ಲಿ ಇವರದೇ ಆದ ಸ್ವಂತ ಮನೆಗಳಿವೆ. ಆ ಮನೆಗಳಲ್ಲಿ ವಯಸ್ಸಾದ ಕುಟುಂಬದ ಹಿರಿಯರು, ಬಾಣಂತಿಯರು, ಕೆಲವೊಮ್ಮೆ ಚಿಕ್ಕ ಪುಟ್ಟ ಮಕ್ಕಳು ವಾಸಿಸುತ್ತಾರೆ. ಇವರು ಮನೆಗಳಲ್ಲಿ ಇರುವುದಿಲ್ಲವಾದರೆ ಬೀಗ ಹಾಕಿರುತ್ತಾರೆ. ಕುಟುಂಬದ ಚಿಕ್ಕ ಮಕ್ಕಳು, ಯುವಕ-ಯುವತಿಯರು ಹಾಗೂ ವಯಸ್ಕ ಸ್ತ್ರೀ-ಪುರುಷರೆಲ್ಲರು ಕುರಿ ಸಂಗೋಪನೆ ವೃತ್ತಿಯಲ್ಲಿ ಭಾಗಿಯಾಗಿರುತ್ತಾರೆ. ಹುಟ್ಟು ಮತ್ತು ಸಾವುಗಳಿಗೆ ಸಂಬಂಧಿಸಿದ ಆಚರಣೆಗಳನ್ನು ಸಾಮಾನ್ಯವಾಗಿ ಸ್ವಗ್ರಾಮಗಳಲ್ಲಿಯೇ ಆಚರಿಸಲಾಗುತ್ತದೆ. ಗರ್ಭಿಣಿ ಸ್ತ್ರೀಯರನ್ನು ಹಾಗೂ ವಯಸ್ಸಾದ ಹಿರಿಯರನ್ನು ಸ್ವಗ್ರಾಮಗಳಲ್ಲಿ ಬಿಟ್ಟು ಅವರನ್ನು ನೋಡಿಕೊಳ್ಳಲು ವ್ಯವಸ್ಥೆ ಮಾಡಿರುತ್ತಾರೆ. ಧಾರ್ಮಿಕ ಹಾಗೂ ಜೀವನಾವರ್ತಕ ಆಚರಣೆಗಳೆಲ್ಲವು ಸ್ವಗ್ರಾಮದಲ್ಲಿಯೇ ಜರುಗುತ್ತವೆ.

ಇವರಲ್ಲಿ ಕೆಲವರಿಗೆ ಅಲ್ಪ-ಸ್ವಲ್ಪ ಭೂಮಿ ಇದ್ದರೂ ಅದನ್ನು ಬೀಳು ಬಿಟ್ಟಿರುತ್ತಾರೆ. ಇಲ್ಲವೇ ಯಾರಿಗಾದರೂ ಉಳುಮೆ ಮಾಡಲು ಕೊಟ್ಟಿರುತ್ತಾರೆ. ಅವರು ಭೂಮಿಯಿಂದ ಬರುವ ಆದಾಯದಿಂದಲೇ ಜೀವನ ಸಾಗಿಸುತ್ತೇವೆಂದು ಯಾವತ್ತೂ ನಿರೀಕ್ಷಿಸಿದವರಲ್ಲ. ಜೀವನಕ್ಕೆ ಕುರಿಗಳನ್ನು ನಂಬಿ ಅವುಗಳ ಸಂಗೋಪನೆಗಾಗಿ ಬೆಟ್ಟ-ಗುಡ್ಡ, ಹೊಲ-ಗದ್ದೆಗಳಲ್ಲಿ ಅಥವಾ ಹಳ್ಳ-ಕೊಳ್ಳ ನದಿ-ತೊರೆ, ಕೆರೆ-ಕಾಲುವೆಗಳ ಅಕ್ಕಪಕ್ಕದಲ್ಲಿ ತಾತ್ಕಾಲಿಕ ಗುಡಾರ ಹೂಡುತ್ತಾರೆ. ಕುರಿಗಳಿಗೆ ಮೇವು-ನೀರು ದೊರೆಯುವವರೆಗೆ ಗುಡಾರದಲ್ಲಿದ್ದು, ಮೇವು-ನೀರಿನ ಕೊರತೆಯಾಗುತ್ತಿದ್ದಂತೆ, ಮೇವು-ನೀರು ದೊರೆಯುವ ಪ್ರದೇಶದ ಕಡೆ ಗುಡಾರ ವರ್ಗಾಯಿಸುತ್ತಾರೆ. ಗುಡಾರ ವರ್ಗಾಯಿಸಲು ಅಂದರೆ ಆಹಾರ ಧಾನ್ಯಗಳು ಹಾಗೂ ಕೌಟುಂಬಿಕ ಸರಕು ಸರಂಜಾಮುಗಳನ್ನು ಹೊತ್ತೊಯ್ಯಲು ಕುದುರೆಗಳನ್ನು ಹಾಗೂ ಕಾಡು ಪ್ರಾಣಿಗಳಿಂದ ಮತ್ತು ಕಳ್ಳರಿಂದ ಕುರಿಗಳನ್ನು ರಕ್ಷಿಸಿಕೊಳ್ಳಲು ನಾಯಿಗಳನ್ನು ಸಾಕಿರುತ್ತಾರೆ. ಕುರಿ-ಮೇಕೆ ಕುಟುಂಬ ಕಟ್ಟಿಕೊಂಡು ಬಹಳಷ್ಟು ದೂರ ವಲಸೆ ಬಂದು ಅಲೆದಾಡುತ್ತಾ ಜೀವನ ಸಾಗಿಸುವ ಈ ಅಲೆಮಾರಿ ಕುರುಬರು ಹಬ್ಬ, ಜಾತ್ರೆ, ಮದುವೆ, ದೈವಾಚರಣೆ ಇತ್ಯಾದಿ ಸಂದರ್ಭಗಳಲ್ಲಿ ಕುಟುಂಬದ ಹಿರಿಯರು ಅಥವಾ ಹೋಗಲೇ ಬೇಕಾದವರು ಮಾತ್ರ ಸ್ವಗ್ರಾಮಗಳಿಗೆ ಒಂದೆರಡು ದಿನಗಳ ಮಟ್ಟಿಗೆ ಹೋಗಿ ಬರುತ್ತಾರೆ. ಇವರು ಹೂಡಿದ ಗುಡಾರ, ಸಾಕಿದ ಕುರಿ- ಮೇಕೆಗಳನ್ನು ಯಾವ ಕಾರಣಕ್ಕೂ ಸ್ವಗ್ರಾಮಗಳಿಗೆ ವರ್ಗಾಯಿಸುವುದಿಲ್ಲ. ವಲಸೆ ಬಂದಿರುವ ಇವರು ಕುರಿಸಂಗೋಪನೆಗೋಸ್ಕರ ಹಗಲಿರುಳೆನ್ನದೆ ಚಳಿ, ಗಾಳಿ, ಮಳೆ ಬಿಸಿಲುಗಳಿಗೆ ಮೈಯೊಡ್ಡಿ ಪ್ರಕೃತಿ ವಿಕೋಪಗಳಾದ ಗುಡುಗು, ಮಿಂಚು, ನೆರೆಹಾವಳಿಗಳನ್ನು ಸಹಿಸಿಕೊಂಡು ಕಾಡುಪ್ರಾಣಿ ಹಾಗೂ ಕಳ್ಳರು ಕೊಡುವ ತೊಂದರೆಗಳನ್ನು ಅನುಭವಿಸುತ್ತಾ ಜೀವನವಿಡಿ ಪ್ರಕೃತಿಯ ಮಡಿಲಲ್ಲಿ ಜೀವನ ಸಾಗಿಸುತ್ತಾರೆ. ನಾಗರಿಕತೆಯ ಸ್ಪರ್ಶ ಕಾಣದೇ ಮತದಾನದ ಪ್ರಜ್ಞೆ ಇರದ, ಶೈಕ್ಷಣಿಕವಾಗಿ, ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ತೀರಾ ಹಿಂದುಳಿದಿರುವ ವಿಶಿಷ್ಟ ಅಲೆಮಾರಿ ಸಮುದಾಯವಾಗಿದೆ.

ಈ ಸಮುದಾಯವನ್ನು ಪ್ರಸ್ತುತ ಸಮಾಜಕ್ಕೆ ಪರಿಚಯಿಸುವುದರ ಜೊತೆಗೆ ಸರ್ಕಾರದ ಗಮನಸೆಳೆಯಬೇಕಾಗಿದೆ. ಈ ದಿಸೆಯಲ್ಲಿ ಅಲೆಮಾರಿ ಕುರುಬರ ಆರ್ಥಿಕ ಅಂಶಗಳಿಗೆ ಮಹತ್ವ ನೀಡುವುದರ ಜೊತೆಗೆ ಅವರ ಅಲೆಮಾರಿ ಬದುಕು ಹಾಗೂ ಸಾಮಾಜಿಕ ಜೀವನ ಅನಾವರಣಗೊಳಿಸುವುದು ಪ್ರಸ್ತುತ ಅಧ್ಯಯನದ ಆಶಯವಾಗಿದೆ.

### ಇದುವರೆಗಿನ ಅಧ್ಯಯನಗಳ ಸಮೀಕ್ಷೆ

ಭಾರತೀಯ ಜಾತಿ ಮತ್ತು ಬುಡುಕಟ್ಟುಗಳನ್ನು ಕುರಿತು ಬಹಳಷ್ಟು ಅಧ್ಯಯನಗಳು ನಡೆದಿದ್ದು ಹಲವಾರು ಪುಸ್ತಕಗಳು ಪ್ರಕಟವಾಗಿವೆ. ಅವುಗಳಲ್ಲಿ ಪ್ರಮುಖವಾದವು ಎಡ್ಗರ್ ಥರಸ್ಟನ್ ಅವರ Caste and Tribes of Suthern India (೧೯೦೯), ಎಲ್ ಕೆ ಅನಂತ ಕೃಷ್ಣಅಯ್ಯರ್ ಅವರ The Mysore Tribes and Caste (೧೯೩೫), ಕೆ ಎಸ್ ಸಿಂಗ್‌ರವರ People of India (Karnataka) ೨೦೦೩, ಜಿ ಡಿ ಸೊಂತೇಮೆರ್ ಅವರ Pastoral Deities of Westran India (೧೯೯೩) ಡಾ ಕೆ ಎಂ ಮೈತ್ರಿಯವರ 'ಬುಡಕಟ್ಟು ಕುಲಕಸುಬು ಗಳು' (೨೦೦೨) ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಕಟಿಸಿದ 'ಉಪಸಂಸ್ಕೃತಿ ಮಾಲೆಗಳು' (೧೯೯೩) ಇತ್ಯಾದಿ ಗ್ರಂಥಗಳು ದೇಶದ ವಿವಿಧ ಸಮುದಾಯಗಳ ವೃತ್ತಿ, ದೈವ, ಸಂಸ್ಕೃತಿ ಭಾಷೆ, ಭೌಗೋಳಿಕ ಪರಿಸರ ಇತ್ಯಾದಿ ಅಂಶಗಳನ್ನು ಕುರಿತು ಮಾಹಿತಿ ನೀಡುತ್ತವೆ.

ಎಸ್ ಎಸ್ ಶಶಿ ಅವರ Shephards of India (1978) ಮತ್ತು The Gaddi Tribe of Himachala Predesh ಪ್ರಗ್ಯಾ ಶರ್ಮ ಅವರ Tribal Society in a Flux-Rajasthan (೨೦೦೫), ವಿ ಆರ್ ಹನುಮಂತಯ್ಯನವರ 'ಕುರುಬರ ಚರಿತ್ರೆ', ಕನ್ನಡ ಪುಸ್ತಕ ಪ್ರಾಧಿಕಾರದ ಶಂಬಾ ಕೃತಿ ಸಂಪುಟ-೩, ಶ್ರೀ ಕನಕ ಗುರುಪೀಠ ಮಹಾಸಂಸ್ಥಾನ, ಕಾಗಿನೆಲೆ ಪ್ರಕಟಿಸಿದ 'ಪಾವನ' (೧೯೯೨), ಡಾ ಶಿವನಂದಾ ಗುಬ್ಬಣ್ಣ ಅವರ 'ಕರ್ನಾಟಕದ ಕುರುಬರು' (೧೯೯೩), ಡಾ ಶ್ರೀರಾಮ ಇಟ್ಟಣ್ಣವರ 'ಹಾಲಕೆನೆ' (೨೦೦೨), ಬ ಪ ನಾಯ್ಕ ರವರ 'ಹಾಲಮತಸ್ಥರು' (೨೦೦೩), ಚಂದ್ರಕಾಂತ ಬಿಜ್ಜರಗಿ ಅವರ 'ಕುರುಬರ ಹೆಜ್ಜೆಗಳು' (೨೦೦೬), ಪ್ರೊ ಒಡೆಯರ ಡಿ ಹೆಗ್ಗಡೆಯವರ 'ಹಾಲುಮತ ಕುರುಬ ಜನಾಂಗದ ಇತಿಹಾಸ' (೨೦೦೫), ವಾಯ್ ಕೆ ಗುಂಡಕರ್ಜಗಿಯವರ 'ಹಂಡೆ ಕುರುಬರು: ಒಂದು ಅಧ್ಯಯನ' ಪಿಎಚ್ ಡಿ ಮಹಾಪ್ರಬಂಧ (೨೦೦೩) ಇತ್ಯಾದಿ ಗ್ರಂಥ ಮತ್ತು ಅಧ್ಯಯನಗಳು ಕುರುಬ ಜನಾಂಗದ ಹಿನ್ನೆಲೆ, ಪಂಗಡಗಳು, ಸಂಸ್ಕೃತಿ, ಧರ್ಮ, ಸಾಮಾಜಿಕ ಜೀವನ ಇತ್ಯಾದಿ ಅಂಶಗಳನ್ನು ಕುರಿತು ಮಾಹಿತಿ ನೀಡುತ್ತವೆ.

ಸಿ. ದೇವೇಂದ್ರ ಮತ್ತು ಜಿ ಬಿ ಮ್ಯಾಲರಿ ಅವರ Goat and Sheep Production in Tropics (೧೯೮೨). ಜಿ.ಸಿ. ಬ್ಯಾನರ್ಜಿಯವರ A Text book of Animal Husbandary (೧೯೬೪) ಡಾ. ರಾಮರಾವ್ ಜೋಶಿಯವರ 'ಆಡು ಮತ್ತು ಕುರಿಸಾಕಣೆ' (೧೯೮೯) ಎಂ. ಕೃಷ್ಣ ಶಾಸ್ತ್ರೀಯವರ 'ಪಶುಪಾಲನೆ' (೧೯೪೫) ಬೆಂಗಳೂರು ಕೃಷಿ ವಿಶ್ವವಿದ್ಯಾಲಯ ಪ್ರಕಟಿಸಿದ 'ಅಧಿಕ ಉತ್ಪಾದನೆಗೆ ಸುಧಾರಿತ ಪಶುಪಾಲನಾ ಪದ್ಧತಿಗಳು'

(೧೯೯೩), ಪ್ರೊ. ಗೋವಿಂದಯ್ಯ ಮತ್ತು ಡಾ. ಆರ್. ಜನಾರ್ದನರವರ 'ಗ್ರಾಮೀಣ ಅಭಿವೃದ್ಧಿಯಲ್ಲಿ ಕುರಿಸಾಕಣೆ' (೨೦೦೪), ಮುಂತಾದ ಪುಸ್ತಕಗಳು ದೇಶದಲ್ಲಿಯ ಕುರಿ-ತಳಿಗಳು, ಭೌಗೋಳಿಕ ಪರಿಸರ ಮತ್ತು ಲಕ್ಷಣಗಳನ್ನು ಕುರಿತು ಮಾಹಿತಿ ಒದಗಿಸುತ್ತವೆ.

ಮೇಲಿನ ಜಾತಿ ಮತ್ತು ಬುಡಕಟ್ಟು ಹಾಗೂ ಸಮುದಾಯ ಕುರಿತ ಗ್ರಂಥಗಳನ್ನು ಪರಿಶೀಲಿಸಲಾಗಿ ಕುರುಬ ಸಮುದಾಯದ ಬಗ್ಗೆ ಹೆಚ್ಚಿನ ಮಾಹಿತಿ ನೀಡುತ್ತವೆ. ಆದರೆ ಅಲೆಮಾರಿ ಕುರುಬರನ್ನು ಕುರಿತು ಇಲ್ಲಿಯವರೆಗೆ ಸಮಗ್ರವಾಗಿ ಅಧ್ಯಯನ ಮಾಡದೇ ನಿರ್ಲಕ್ಷಿಸಲ್ಪಟ್ಟ ಸಮುದಾಯವಾಗಿರುವುದು ಸ್ಪಷ್ಟವಾಗುತ್ತದೆ.

## ಅಧ್ಯಯನದ ವ್ಯಾಪ್ತಿ

ಕುರುಬ ಎಂಬ ಪದದ ಮೂಲ ಅರ್ಥ ಕುರಿಕಾಯುವ ವೃತ್ತಿ. ಬಹಳಷ್ಟು ಕುರುಬ ಕುಟುಂಬಗಳು ಮೂಲ ವೃತ್ತಿಯನ್ನು ಬಿಟ್ಟು ಬೇರೆ ಬೇರೆ ವೃತ್ತಿಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಕುರುಬರ ಸಂಪತ್ತಾಗಿರುವ ಕುರಿ-ಮೇಕೆಗಳಿಗೆ ಮೇವು ನೀರು ಹುಡುಕಿಕೊಂಡು ಇಡೀ ಜೀವನವನ್ನು ಅಲೆಮಾರಿತನಕ್ಕೆ ಮುಡುಪಾಗಿಟ್ಟಿರುವ ಕುರುಬರನ್ನೆ ಅಲೆಮಾರಿ ಕುರುಬರು ಎಂದು ಗುರುತಿಸಿ ಪ್ರಸ್ತುತ ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ.

ಪ್ರಸ್ತುತ ಸನ್ನಿವೇಶದಲ್ಲಿ ಕುರಿಸಂಗೋಪನಾ ವೃತ್ತಿಯಲ್ಲಿ ತೊಡಗಿಸಿಕೊಂಡ ಕುರುಬರೆಲ್ಲರೂ ಅಲೆಮಾರಿ ಕುರುಬರಲ್ಲ. ವಿಶೇಷವಾಗಿ ಬೆಳಗಾವಿ ಜಿಲ್ಲೆಯ ಕುರುಬರು ತಮ್ಮ ಮೂಲವೃತ್ತಿಯನ್ನು ಉಳಿಸಿಕೊಂಡು ಅಲೆಮಾರಿತನದ ಬದುಕನ್ನು ಕುರಿಗಳೊಡನೆ ಗುರುತಿಸಿಕೊಂಡಿದ್ದಾರೆ. ಈ ಹಿನ್ನೆಲೆಯಲ್ಲಿ ಅಲೆಮಾರಿ ಕುರುಬರೆಂದರೆ ಬೆಳಗಾವಿ ಕುರುಬರು ಅಥವಾ ಬೆಳಗಾಂವ್ ಕುರೇರು ಎಂದು ಕರೆಯಿಸಿ ಕೊಳ್ಳುವ ಕುರುಬರನ್ನು ಅಲೆಮಾರಿ ಕುರುಬರು ಎಂದು ಪ್ರಸ್ತುತ ಅಧ್ಯಯನದಲ್ಲಿ ಗುರುತಿಸಿಕೊಳ್ಳಲಾಗಿದೆ. ಬೆಳಗಾವಿ ಜಿಲ್ಲೆಯಿಂದ ಕುರು ಸಂಗೋಪನೆಗಾಗಿ ವಲಸೆ ಬಂದ ಇವರ ಚಲನವಲನಗಳು ಕರ್ನಾಟಕ ರಾಜ್ಯದ ಬಳ್ಳಾರಿ, ರಾಯಚೂರು, ಕೊಪ್ಪಳ, ಗದಗ, ಹಾವೇರಿ, ಧಾರವಾಡ, ದಾವಣಗೆರೆ, ಶಿವಮೊಗ್ಗ ಮತ್ತು ಚಿಕ್ಕಮಗಳೂರು ಜಿಲ್ಲೆಗಳ ಭೂಪ್ರದೇಶಗಳವರೆಗೆ ಪ್ರಸರಣ ಹೊಂದಿವೆ. ಪ್ರಸ್ತುತ ಅಧ್ಯಯನವನ್ನು ಬಳ್ಳಾರಿ ಜಿಲ್ಲೆಗೆ ಸೀಮಿತವಾಗಿರಿಸಿಕೊಳ್ಳಲಾಗಿದೆ. ಬಳ್ಳಾರಿ ಜಿಲ್ಲೆಯ ಭೂಪ್ರದೇಶದಲ್ಲಿ ಅಲೆದಾಡುತ್ತಾ ಕುರಿ ಸಂಗೋಪನೆ ಮಾಡುವ ಬೆಳಗಾವಿ ಕುರುಬರನ್ನು ಸಮಗ್ರ ಸಮೀಕ್ಷೆಗೊಳಪಡಿಸಿ ವಿಷಯಗಳನ್ನು ಪ್ರಸ್ತುತ ಪಡಿಸಲಾಗಿದೆ. ಪ್ರಸ್ತುತ ಅಧ್ಯಯನದ ಅವಧಿಗೂ ಮೊದಲು ವಲಸೆ ಬಂದು ಹೋದವರು ಹಾಗೂ ನಂತರದ ಅವಧಿಯಲ್ಲಿ ವಲಸೆ ಬರುವವರು ಈ ಅಧ್ಯಯನದ ವ್ಯಾಪ್ತಿಗೆ ಬರುವುದಿಲ್ಲವೆಂದು ಸ್ಪಷ್ಟಪಡಿಸುತ್ತಿದ್ದೇನೆ.

ಪ್ರಸ್ತುತ ಅಧ್ಯಯನವು ಬಳ್ಳಾರಿ ಜಿಲ್ಲೆಯ ವ್ಯಾಪ್ತಿಗೊಳಪಟ್ಟ ಭೂಪ್ರದೇಶದಲ್ಲಿ ೨೦೦೪-೦೫ ನೇ ಸಾಲಿನಲ್ಲಿ ಅಲೆದಾಡಿರುವ ಅಲೆಮಾರಿ ಕುರುಬ ಸಮುದಾಯದವನ್ನು ಸಮಗ್ರವಾಗಿ ಅಧ್ಯಯನಕ್ಕೊಳಪಡಿಸಲಾಗಿದೆ. ಜಿಲ್ಲೆಯಲ್ಲಿ ಅಲೆದಾಡುತ್ತಾ ಕುರಿಸಂಗೋಪನೆ ಮಾಡುತ್ತಿರುವ ಒಟ್ಟು ಕುಟುಂಬಗಳ ಸಂಖ್ಯೆ ೩೮೬. ಈ ಕುಟುಂಬಗಳ ಒಟ್ಟು ಜನಸಂಖ್ಯೆ ೨೩೧೦.

ಅದರಲ್ಲಿ ೧೨೧೨ ಪುರುಷರು ಮತ್ತು ೧೯೬೮ ಮಹಿಳೆಯರು. ಚಿಕ್ಕೋಡಿ ತಾಲೂಕಿನಿಂದ ವಲಸೆ ಬಂದ ಕುಟುಂಬಗಳ ಸಂಖ್ಯೆ ೩೦೭. ವಲಸೆ ಬಂದ ತಾಲೂಕುಗಳಲ್ಲಿ ಈ ತಾಲೂಕಿನವರೇ ಹೆಚ್ಚು. ಬೆಳಗಾವಿ ೩೧, ಖಾನಾಪುರ ೧೧, ರಾಯಬಾಗ್ ೩, ಗೋಕಾಕ್ ೪, ಹುಕ್ಕೇರಿ ೪, ರಾಮದುರ್ಗ ೨ ಹಾಗೂ ಅಥಣಿ ಮತ್ತು ಸವದತ್ತಿ ತಾಲೂಕುಗಳಿಂದ ತಲಾ ಒಂದೊಂದು ಕುಟುಂಬ ಮಾತ್ರ ವಲಸೆ ಬಂದಿದೆ. ಬೈಲಹೊಂಗಲ ತಾಲೂಕಿನಿಂದ ಯಾವುದೇ ಕುಟುಂಬ ವಲಸೆ ಬಾರದಿರುವುದು ಕ್ಷೇತ್ರಕಾರ್ಯದಿಂದ ತಿಳಿದುಬಂದಿದೆ. ಬಹುಶಃ ಬಳ್ಳಾರಿ ಜಿಲ್ಲೆಗೆ ಕಡಿಮೆ ಸಂಖ್ಯೆಯಲ್ಲಿ ವಲಸೆ ಬಂದ ತಾಲೂಕುಗಳ ಹಾಗೂ ಬೈಲಹೊಂಗಲ ತಾಲೂಕಿನ ಅಲೆಮಾರಿ ಕುರುಬ ಕುಟುಂಬಗಳು ಬೇರೆ ಜಿಲ್ಲೆಗಳಿಗೆ ವಲಸೆ ಹೋಗಿರಬಹುದು.

ಭಾರತ ಹಲವಾರು ಸಮುದಾಯಗಳ ದೇಶ ಎಂಬುದು ಎಲ್ಲರಿಗೂ ಗೊತ್ತಿರುವ ಸಾಮಾನ್ಯ ಸಂಗತಿ. ಇಲ್ಲಿ ನೆಲೆಸಿರುವ ಸಮುದಾಯಗಳಲ್ಲಿ ಅಲೆಮಾರಿ ಕುರುಬ ಸಮುದಾಯವೂ ಒಂದು. ಈ ಸಮುದಾಯದವರು ಭಾರತದ ತುಂಬಾ ವ್ಯಾಪಿಸಿರುವುದರಿಂದ ಇವರಲ್ಲಿ ಪ್ರಾದೇಶಿಕ ಭಿನ್ನ ಹೆಸರು, ಭಾಷೆ, ಆಚಾರ, ವಿಚಾರ, ಸಂಸ್ಕೃತಿ ಕಂಡುಬರುತ್ತದೆ. ಮೂಲತಃ ಒಂದೇ ಕುಲಗೋತ್ರಕ್ಕೆ ಸೇರಿದ ಇವರು ಕಾಲಕ್ರಮೇಣ ಬೇರೆ ಬೇರೆ ಪ್ರದೇಶಗಳಲ್ಲಿ ಹರಿದು ಹಂಚಿ ಹೋಗಿರುವರು. ಆದರೂ ಅಲೆಮಾರಿ ಕುರುಬರು ತಮ್ಮ ಮೂಲ ವೃತ್ತಿ, ಸಂಸ್ಕೃತಿ, ಆಚಾರ, ಸಂಪ್ರದಾಯಗಳನ್ನು ಪರಂಪರಾಗತವಾಗಿ ಉಳಿಸಿಕೊಂಡು ಬಂದಿರುವರು. ಈ ಹಿನ್ನೆಲೆಯಲ್ಲಿ ಈ ಸಮುದಾಯವನ್ನು "ಒಂದು ವಂಶದಿಂದ ನಿಷ್ಪನ್ನವಾದ ಮತ್ತು ಮೂಲತಃ ಬದಲಾಯಿಸಲಾಗದ ಅಂಗವಿಕಾಸ ಮತ್ತು ಪರಿಮಾಣಗಳ ವಿಶೇಷ ರೀತಿಯ ಹೊಂದಾಣಿಕೆಯ ಆಧಾರದಿಂದಾದ ಒಂದು ಮಾನವ ಪಂಗಡವೆಂದು ವರ್ಣಿಸಬಹುದು" (ಗುಂಡಕರ್ಜಗಿ, ವೈ ಕೆ:೨೦೦೨:೧೩). ಯಾವುದೇ ಸಮುದಾಯದಲ್ಲಿ ಮೂಲಭೂತ ಸಂಸ್ಕೃತಿಯ ಕೆಲವು ಅಂಶಗಳು ಕಾಲಗತಿಸಿದರೂ ಉಳಿದುಕೊಂಡು ಬಂದಿರುತ್ತವೆ. ಭಾರತದಲ್ಲಿ ಸಂಸ್ಕೃತಿ ವಿಕಾಸವಾಗುವಲ್ಲಿ ಅಲೆಮಾರಿ ಕುರುಬರು ತಮ್ಮದೇ ಆದ ರೀತಿಯಲ್ಲಿ ವಿಶಿಷ್ಟ ಕೊಡುಗೆ ನೀಡಿದ್ದಾರೆ.

## ಕುರುಬ ಪದದ ನಿಷ್ಪತ್ತಿ

ಪುರಾತನ ಕಾಲದಲ್ಲಿ ಜನರು ಯಾವ ವೃತ್ತಿಯಲ್ಲಿ ವೈಶಿಷ್ಟ್ಯತೆಯನ್ನು ಪಡೆದಿರುತ್ತಿದ್ದರೋ ಆ ವೃತ್ತಿಯು ಆ ಸಮುದಾಯದಲ್ಲಿ ಪರಂಪರಾಗತವಾಗಿ ಮುಂದುವರೆದುಕೊಂಡು ಬರುತಿತ್ತು. ಸಾಕು ಪ್ರಾಣಿಗಳಾದ ಕುರಿ-ಮೇಕೆಗಳನ್ನು ಸಾಕಿಕೊಂಡು ಜೀವಿಸುವವರು ಕುರುಬರೆಂದು ಕರೆಯಿಸಿಕೊಂಡರು. ಶಂಬಾ ಜೋಶಿಯವರ ಪ್ರಕಾರ, 'ಕುರು' ಅಂದರೆ ಮರಡಿಗಳಲ್ಲಿರುವ ಪ್ರಾಣಿಗಳನ್ನು ತಾಸಿದ್ದ ಬೆಟ್ಟಗಳಲ್ಲಿ ಕಂಡು ಅವನ್ನು ದಿನಾಲು ಬೇಟೆಯಾಡಿ ತರುವ ಬದಲು ಅವನ್ನು ಸಾಕಿ ತಳಿ ಬೆಳೆಸುವ ಹಂಚಿಕೆಯನ್ನು ಹುಡುಕಿದ ಶ್ರೇಯಸ್ಸು ಈ ಜನಕ್ಕಿದೆ. ಪ್ರಾಣಿಗಳನ್ನು ಸಾಕಿ ಬದುಕುವ ವಿಧಾನವನ್ನು ಕಂಡುಕೊಂಡ ಜನರನ್ನು ಕುರುಬರೆಂದು ಕರೆಯಿಸಿಕೊಂಡಿರುವುದಾಗಿ ವಿದ್ವಾಂಸರ ಅಭಿಪ್ರಾಯವಾಗಿದೆ.

ಕುರುಬ ಎನ್ನುವ ಶಬ್ದಕ್ಕೆ ಹಲವಾರು ವಿದ್ವಾಂಸರು ಭಿನ್ನವಾದ ಅರ್ಥವನ್ನು ಸೂಚಿಸಿದ್ದಾರೆ. "ತಮಿಳು, ತೆಲುಗು ಮತ್ತು ಕನ್ನಡ ಭಾಷೆಗಳಲ್ಲಿ 'ಕೋ' ಎಂದರೆ 'ಪರ್ವತ'ವೆಂದು ಅರ್ಥವಿದ್ದರೆ, 'ಕುರು' ಎಂಬುದಕ್ಕೆ 'ಎತ್ತರ' ಎಂಬ ಅರ್ಥವಿದೆ. ಪರ್ವತ ಇಲ್ಲವೆ ಬೆಟ್ಟ, ಅರಣ್ಯ ಪ್ರದೇಶಗಳಲ್ಲಿ ವಾಸಿಸುವವನು ಕುರುಬ ಅಥವಾ ಕುರುಂಬ ಎಂದು ಸೂಚಿತವಾಗುತ್ತದೆ. ಗುಡ್ಡ-ಬೆಟ್ಟಗಳ ಹುಲ್ಲಿನ ಪ್ರದೇಶವನ್ನು ಅರಸಿಕೊಂಡು ಹೋಗಿ ಈ ಸಮುದಾಯ ಜೀವನ ನಡೆಸುತ್ತಿದ್ದುದರಿಂದ ಈ ಅರ್ಥ ಅಸಂಭನೀಯವೆನಿಸುವುದಿಲ್ಲ. ಪ್ರಾಚೀನ ತಮಿಳು ಕಾವ್ಯಗಳಲ್ಲಿ ಕುರುಬರನ್ನು ಮಲೆಯರು ಎಂದು ವರ್ಣಿಸಲಾಗಿದೆ" (ಲಕ್ಕಪ್ಪಗೌಡ, ಎಚ್ ಜೆ:೧೯೯೭:೨). ಹಾಗಾಗಿ ಎತ್ತರವಾದ ಪ್ರದೇಶಗಳಲ್ಲಿ, ಬೆಟ್ಟ-ಗುಡ್ಡಗಳಲ್ಲಿ ವಾಸಿಸುವವರು ಕುರುಬರಾದರು. ಅವರಿಗೆ ಪ್ರಿಯಪಾತ್ರವಾದ ಪ್ರಾಣಿ ಕುರಿ. ಅದರ ಸಾಕಣಿಕೆ ಅವರ ಪ್ರಮುಖ ಉದ್ಯೋಗವಾದುದ್ದರಿಂದ ಕುರುಬರೆಂಬ ಪದಕ್ಕೆ ಪಾತ್ರರಾದರು.

ಇದೇ ರೀತಿಯಲ್ಲಿ ಸಂಸ್ಕೃತ ಸಾಹಿತ್ಯದಲ್ಲಿ ಕುರುದೇಶ ಎನ್ನುವ ಪದ ಉಪಲಬ್ಧವಿದ್ದು, ಅದು ಮಹಾಭಾರತದಲ್ಲಿ ಸುಪ್ರಸಿದ್ಧವಾದ ಕುರುವಂಶದವರಿಂದ ಆಳಲ್ಪಟ್ಟಿತೆಂದು ಹೇಳಲಾಗಿದೆ. ಕುರುವಂಶಕ್ಕೆ ಸೇರಿದ ಕೌರವರು ಕಾಲಾಂತರದಲ್ಲಿ ಕುರುವ, ಕುರುಬ ಎಂದಾಗಿ ಮಾರ್ಪಡಾಗಿರುವ ಸಾಧ್ಯತೆಯಿದೆ. "ಕುರುದೇಶ ಕೆಲಭಾಗಗಳಲ್ಲಿ 'ಕುರು' ಎನ್ನುವುದು 'ಪ' ಎನ್ನುವ ಪದದೊಂದಿಗೆ ಸೇರಿಕೊಂಡು ಅದು ಎಲ್ಲಾ ದ್ರಾವಿಡ ಭಾಷೆಗಳಲ್ಲಿ ಒಡೆಯ, ಅರಸ, ಕುರಿಯ ಯಜಮಾನ, ಗೋಪಾಲ ಎನ್ನುವ ಅರ್ಥವನ್ನು ಸೂಚಿಸುತ್ತದೆ. ಅದು ಕಾಲಾಂತರದಲ್ಲಿ 'ಕುರಪ' ಎಂಬ ಪದ ಬಳಕೆಗೆ ಬರಲು ಕಾರಣವಾಯಿತು. 'ಕುರುಪ' ಎಂದರೆ ಬೆಟ್ಟದಲ್ಲಿ ವಾಸಿಸುವವರು. ಕುರುಪದಿಂದ ಕುರುಬ ಎನ್ನುವ ಪದ ಉತ್ಪತ್ತಿಗೊಂಡಿರಬೇಕು" (ಗುಬ್ಬಣ್ಣನವರ,ಶಿವಾನಂದ:೧೯೯೩:೩).

ಹದಿನಾರನೆಯ ಶತಮಾನದಲ್ಲಿದ್ದ ರಸ್ತಾಪುರ ಭೀಮ ಕವಿ ತನ್ನ 'ಹಾಲುಮತೋತ್ತೇಜ ಪುರಾಣ'ದಲ್ಲಿ ಕೌರುಬ ಋಷಿಯ ತಪಸ್ಸಿನ ಫಲವಾಗಿ ಕುರುಬ ಜನಾಂಗ ಸೃಷ್ಟಿಯಾಯಿತೆಂದು ಹೇಳಿದ್ದಾನೆ.

"ಕುರುಶೇ ಮೃಗವಸ್ತ್ರಾಣಿ ಕೃತ್ಸವ್ಯೆ
ಕೌರುಭ ಋಷಿ
ತಸ್ಮಾ ಸಾರ್ಥಕಂ ಚಕ್ರದೇವಾನಾಂ
ಹಿತಕಾವ್ಯ" (ನಾಯ್ಕರ್,ಬಿ ಪ:೨೦೦೩:೮).

"ಕುರಿಪಾಲನೆ ಮಾಡುವ ಕುರುಬರನ್ನು ತಮಿಳುನಲ್ಲಿ ಕುರುಂಬ ಇಡೈಯರ್ ಎಂದೂ ತೆಲುಗಿನಲ್ಲಿ ಕುರುಂಬ ಗೊಲ್ಲಲು ಎಂದು ಕರೆಯುತ್ತಾರೆ. ಇಲ್ಲಿಯ 'ಗೊಲ್ಲ' ಎಂಬ ಶಬ್ದ ಸಂಸ್ಕೃತದ 'ಗೋ' ಎಂಬುವುದರಿಂದ ಉತ್ಪನ್ನವಾದುದಲ್ಲ. ತೆಲುಗಿನಲ್ಲಿ 'ಗೊರ್ರೆ' ಎಂದರೆ 'ಕುರಿ'. ಇದರ ಬಹುವಚನ ರೂಪ 'ಗೊರ್ರೆಲು' ಅಥವಾ 'ಗೊರ್ಲು'. ಇದೆ ಮುಂದೆ ಗೊಲ್ಲು ಎಂದಾಗುತ್ತದೆ. ಆದ್ದರಿಂದ ಕುರುಂಬಗೊಲ್ಲಲು ಎಂದರೆ (ಕುರುಬ ಎಂದರೆ ಕುರಿಪಾಲಕ

ಎಂದು ಭಾವಿಸಿದಾಗ) ದ್ವಿರುಕ್ತಿ ದೋಷವಾಗುತ್ತದೆ. ಈ ದೃಷ್ಟಿಯಿಂದಲೂ ಕುರು ಅಥವಾ ಕುರುಂಬ ಎಂದರೆ ಬೆಟ್ಟ-ಗುಡ್ಡಗಳಲ್ಲಿ ವಾಸಿಸುವವರು ಎಂಬುದು ಹೆಚ್ಚು ಸಮಂಜಸವಾಗಿ ಕಾಣುತ್ತದೆ. ಆದರೆ ಈಗ ಈ ಸಮುದಾಯವು ಭಾರತದ ಎಲ್ಲಾ ಪ್ರಾಂತಗಳಲ್ಲೂ ವಾಸಿಸುತ್ತಿರುವುದರಿಂದ ಮೂಲಾರ್ಥದ ಬಗೆಗೆ ಸಂಶಯ ಬರುವುದು ಸಹಜವಾಗಿದೆ" (ಹನುಮಂತಯ್ಯ, ವಿ ಆರ್:೧೯೯೬:೧೨).

"ಮೈಮೇಲೆ ಏಳುವ ಗಡ್ಡೆಗಳಿಗೆ ನಾವು 'ಕುರು' ಎಂದು ಕರೆಯುತ್ತೇವೆ. 'ಕುರು' ಎಂದರೆ ಎತ್ತರವಾದ ಭಾಗವೆಂದು ಅರ್ಥವಾಗುತ್ತದೆ. ಪುರಾತನ ಕಾಲದಲ್ಲಿ ಗುಡ್ಡೆಗಳಿಗೆ ಕುರು ಇಲ್ಲವೆ ಕುರ್ರಿಗಳೆಂದು ಕರೆಯುತ್ತಿದ್ದರು. ಮೂಲ ಮಾನವರು ಆಹಾರ ಮತ್ತು ಬಟ್ಟೆಗಾಗಿ ಸಾಕಲಾದ ಆ ಸಣ್ಣ ಜೀವಿಗಳು ಆಹಾರಕ್ಕಾಗಿ ಕುರುಗಳನ್ನು ಇಲ್ಲವೇ ಕುರ್ರಿಗಳನ್ನು ಆಶ್ರಯಿಸಬೇಕಾಯಿತು. ಹೀಗೆ ಕುರುಗಳಲ್ಲಿ ಇಲ್ಲವೆ ಕುರ್ರಿಗಳಲ್ಲಿ ಆಶ್ರಯ ಪಡೆದವುಗಳನ್ನು ಕುರಿಗಳೆಂದು ಕರೆಯಲಾಯಿತು. ನಂತರ ಕುರಿಗಳನ್ನು ಪಾಲನೆ ಮಾಡುವವನನ್ನು ಕುರಿಪನೆಂದು ಕರೆಯಲ್ಪಟ್ಟರು. ಕಾಲಾಂತರದಲ್ಲಿ ಈ ಕುರುಪ ಶಬ್ದವೇ ಕುರುಬನಾಗಿ ಉಳಿದುಕೊಂಡಿತು. ಕುರಿಗಾರಿಕೆಯಲ್ಲಿ ಕೌರಬರದೂ ಮೂಲ ಪಾತ್ರವಿತ್ತು. ಅದಕ್ಕಾಗಿ ಶಿವನು ಕುರಿಗಳ ಪಾಲಕನನ್ನು ಕೌರಬನೆಂದು ಕರೆದನು. ಕಾಲಾಂತರದಲ್ಲಿ ಈ ಕೌರಬ ಶಬ್ದವೇ ಕುರುಬವಾಯಿತು. ಹೀಗೆ ಕುರಿಗಾರಿಕೆಗೆ ನಿಂತ ಮೂಲ ಪುರುಷನು ಕುರುಬನಾದನು" (ಬೋನಾ, ಬಸವರಾಜ:ಹಾಲುಮತದ ಹುಟ್ಟು). ಬೇಟೆಯಾಡಿ ಬದುಕುವ ಮಾನವನು ಮುಂದೆ ತಟಸ್ಥ ಬದುಕಿಗೆ ಬಂದಾಗ ದಿನಾಲು ಬೇಟೆಯಾಡಿ ತರುವ ಬದಲು ಅವನ್ನು ಸಾಕಿ, ಅವುಗಳ ಮುಖಾಂತರ ಬದುಕನ್ನು ರೂಪಿಸಿಕೊಂಡವರು ಕುರುಬರೆಂದು ಕರೆಯಿಸಿಕೊಂಡರು. ಪ್ರಾಚೀನ ಕಾಲದಲ್ಲಿ ತಮ್ಮ ಸಾಕುಪ್ರಾಣಿಗಳ ಸಂರಕ್ಷಣೆಗಾಗಿ ಶತ್ರುಗಳ ತೊಂದರೆಯಿಲ್ಲದ ಎತ್ತರವಾದ ಮತ್ತು ಭದ್ರವಾದ ಸ್ಥಳಗಳನ್ನು ಹುಡುಕಿ ಅಲ್ಲೇ ವಾಸಿಸುತ್ತಿದ್ದರು. ಅಂದು ಮಾನವನ ವಾಸಸ್ಥಳಗಳು ಬೆಟ್ಟ-ಗುಡ್ಡಗಳೇ ಆಗಿದ್ದವು. ಹೀಗೆ ಸಾಕುಪ್ರಾಣಿಗಳೊಂದಿಗೆ ಬದುಕುವ ಜನರು ಕುರುಬರಾದರು.

ಸಮುದಾಯಗಳ ಸಾಂಸ್ಕೃತಿಕ ನೆಲೆಯಲ್ಲಿ ಡಾ ಕೆ ಎಂ ಮೇತ್ರಿ ಅವರು 'ಕುರುಬ' ಪದಕ್ಕೆ ಭಿನ್ನ ರೀತಿಯ ಅರ್ಥಗಳನ್ನು ಅನಾವರಣಗೊಳಿಸಲು ಪ್ರಯತ್ನಿಸಿದ್ದಾರೆ. ಅವರ ಪ್ರಕಾರ "ಮೇಷದ ಇನ್ನೊಂದು ಹೆಸರು ಕುರಿ. ಆದರೆ ಕುರಿ ಮೇಷದ ಮೂಲ ಹೆಸರಲ್ಲ. ಹಾಗೆಯೇ ಮೇಷಪಾಲಕರ ಮೂಲ ಹೆಸರು ಕುರುಬ ಅಲ್ಲ. ಮೇಷದಿಂದ ಉತ್ಪನ್ನಗೊಂಡ ಇನ್ನೊಂದು ಹೆಸರೇ ಕುರಿ. ಇದಕ್ಕೆ ಅಧ್ಯಾತ್ಮದ ನೆಲೆಯಿರುವುದು. ಮೇಷ ಮ್ಯಾ... (ಮ+ಉ+ಅ) ಎಂದು ಜಪಿಸುವುದು. ಇದು ಮಾನವನ ಮೂಲಮಂತ್ರ. ಇಲ್ಲಿಂದಲೇ ಭಾಷೆಯ ಉಗಮವಾಗಿರುವುದು. ಮಾನವ ಅದನ್ನು ಅನುಸರಿಸುತ್ತ ಭಾಷೆ ಕಲಿತ ಮೇಷರು ಧ್ವನಿ ಮ್ಯಾ... ದಲ್ಲಿ ಮ+ಉ+ಅ ಎಂಬೀ ಮೂರು ಅಕ್ಷರಗಳಿವೆ. ಮೇಷಪಾಲಕ ಮೇಷದ ಧ್ವನಿಗೆ ಅನುಕರಿಸಲಾಗಿ ಮ+ಉ+ಅ ತಿರುಮುರುವಾಗಿ ಅ+ಉ+ಮ ಎಂದು ಉಚ್ಚರಿಸಲಾರಂಭಿಸಿದೆ. ಮೇಷದ ಧ್ವನಿ ಮ್ಯಾ.... > (ಮ+ಉ+ಅ) ಮೇಷ ಪಾಲಕನ ಅನುಕರಣೆಯಲ್ಲಿ >

(ಅ+ಉ+ಮ)ವಾಗಿ > ಓಂ ಆಗಿರುವುದು. ಓಂ ಮಾವನ ಬೀಜಮಂತ್ರ. ಅನಂತರ ಮಾನವ ಓಂಕಾರಕ್ಕೆ ಸಹಸ್ರಾರು ಅರ್ಥಗಳನ್ನು ಕಲ್ಪಿಸಿದ. ಮಾನವ ಅಧ್ಯಾತ್ಮ ಶಿಖರವೇರಲು ಮೇಷ (ಓಂ)ಕ್ಕೆ ಗುರಿಯಾಗಿಟ್ಟುಕೊಂಡನು. ಅವನ ಗುರಿಯೇ (ಮೇಷ) > ಕುರಿಯಾಯಿತೆಂದು ಗೊಂಡರ ಧರ್ಮಗುರು ಶ್ರೀ ಸಿದ್ಧಯ್ಯ ಆಧುನಿಕ ಒಡೆಯರ ಅವರ ವಾದವಾಗಿದೆ. ಓಂಕಾರ ಜಪಿಸುವ ಮೇಷ ಮಾನವನಿಗೆ ಪ್ರಕೃತಿಯ ರಹಸ್ಯದ ಅರಿವು ಮೂಡಿಸಿತು. ಅದು ಜ್ಞಾನದ ಪ್ರತೀಕವಾಯಿತು. ಅಹಿಂಸೆಯು ಅದರ ಪರಮೋಧರ್ಮವಾಯಿತು. ಹೀಗೆ ಮೇಷದ ಇನ್ನೊಂದು ಹೆಸರು ಅಧ್ಯಾತ್ಮದಲ್ಲಿ ಕುರಿಯಾಗಿ, ಅದರ ಪಾಲಕನಿಗೆ ಗು[ಕು]ರುಬ > ಕುರುಬ ಎಂಬೀ ಹೆಸರುಗಳಿಂದ ಕರೆಯಲಾರಂಭಿಸಿದರು. ಹೀಗಾಗಿ ಕುರುಬ ಎಂದರೇ ಜ್ಞಾನಿ ಎಂದರ್ಥ. ಮೂಲತಃ ಅದೊಂದು ಜಾತಿ ಸೂಚಕ ಅಥವಾ ಕುಸುಬು ಸೂಚಕ ಪದವಲ್ಲ. ಅದು ಅಧ್ಯಾತ್ಮ ವನ್ನು ಪ್ರತಿನಿಧಿಸುವ ಪದ. ಆ ಕಾರಣಕ್ಕಾಗಿಯೇ ಏಸು ಕ್ರಿಸ್ತರು ನಾನೇ ಒಳ್ಳೆಯ ಕ್ರೈಸ್ತ ಎಂದುಕೊಳ್ಳದೆ ನಾನೇ ಒಳ್ಳೆಯ ಕುರುಬ; ಒಳ್ಳೇ ಕುರುಬ ತನ್ನ ಕುರಿಗಳಿಗೋಸ್ಕರ ತನ್ನ ಪ್ರಾಣವನ್ನೇ ಕೊಡುತ್ತಾನೆ ಎಂದು ಕೊಂಡಿದ್ದಾರೆ. ಎಲ್ಲಾ ಧರ್ಮಗಳು ಜ್ಞಾನ ಮತ್ತು ಅಧ್ಯಾತ್ಮದ ಪ್ರತೀಕವಾಗಿರುವುದರಿಂದ ಅವೆಲ್ಲವು ಕುರುಬನ(ಜ್ಞಾನಿಯ) ಕೊಡುಗೆಯಾಗಿವೆ. ಎಲ್ಲಾ ವೇದಗಳಿಗೂ ಮೂಲ ವೇದ ಅಜಪವೇದ (ಕಲ್ಯಾಣ ಶ್ರೀ ಬಸವೇಶ್ವರ ಪಂಚಾಂಗ ೧೯೯೯-೨೪) ಇಂದು ಪ್ರಚಾರದಲ್ಲಿಲ್ಲ. ಅಜ ಅಂದರೂ ಆಡು, ಕುರಿ (ಜ್ಞಾನ) ಇದು 'ಅ' ಮತ್ತು 'ಜ' ಎಂಬೀ ಎರಡು ಅಕ್ಷರಗಳ ಜೋಡು ನುಡಿ. 'ಅ' ಎಂದರೆ ಇಲ್ಲ 'ಜ' ಎಂದು ಹುಟ್ಟು ಎಂದರ್ಥ. ಅಜ [ಕುರಿ (ಜ್ಞಾನ)]ಕ್ಕೆ ಸಮನವಾದ ಜ್ಞಾನ ಇನ್ನೊಂದು ಹುಟ್ಟಿಲ್ಲ ಎಂದರ್ಥ. ಇದರ ಅರ್ಥ ಪ್ರಕೃತಿಯ ಸತ್ಯಜ್ಞಾನ.

"ಕುರುಬ ಹುಟ್ಟುವ ಮುನ್ನ
ಕುಲವಿಲ್ಲ ಗೋತ್ರವಿಲ್ಲಾ
ಕುರುಬನ ಫಲ ಕಾಣೋ ಬಸವಣ್ಣ"

ಎಂಬ ಮೇಲಿನ ಅಲ್ಲಮ ಪ್ರಭುಗಳ ವಚನದಲ್ಲಿಯ ಕುರುಬ ಎಂಬ ಪದವು ಜ್ಞಾನಿ ಎಂಬ ಅರ್ಥವನ್ನು ಧ್ವನಿಸುತ್ತದೆ. ಕುರುಬ (ಜ್ಞಾನ) ಹುಟ್ಟುವ ಮುನ್ನ ಕುಲಗೋತ್ರಗಳು ಹುಟ್ಟಿಲ್ಲ. ಕುರುಬ (ಜ್ಞಾನಿಯ) ಪ್ರತಿಫಲಗಳೇ ಕುಲಗೋತ್ರಗಳು ಎಂಬುದರಲ್ಲಿ ಅರ್ಥವಿದೆ. ಬೆಳಗಾಗುತ್ತಲೆ ಕುರುಬನ ಮುಖ ನೋಡಬೇಕು, ಕುರುಬನಿಂದಲೇ ಬೋಣಿಗೆ ಮಾಡಬೇಕು. ಇದರಿಂದ ಒಳ್ಳೆಯದಾಗುತ್ತದೆಂಬ ನಂಬಿಕೆ ಇಂದಿನದೇನಲ್ಲ. ಇಲ್ಲಿಯೂ ಕುರುಬ ಜ್ಞಾನದ ಸಂಕೇತವೆ ಜ್ಞಾನಿಯಿಂದಲೆ ಒಳಿತಾಗುವುದು ಅಜ್ಞಾನಿಯಿಂದಲ್ಲ" (ಮೇತ್ರಿ, ಕೆ ಎಂ :೨೦೦೨: ೧೫೪:೧೫೫) ಎಂಬುದು ಸ್ಪಷ್ಟವಾಗುತ್ತದೆ.

ಪಶುಪಾಲಕರಾದ ಮ್ಯಾಸನಾಯಕರು, ಗೊಲ್ಲರು, ದನಗಾರರು, ಕುರುಬರು ಹಾಗೂ ಗೊಂಡ ಬಡುಕಟ್ಟಿನವರು ಸಹಸ್ರಾರು ವರ್ಷಗಳಿಂದ ತಮ್ಮ ಪಶುಗಳೊಂದಿಗೆ ಅಲೆಯುತ್ತಾ ಪ್ರಕೃತಿ ಜ್ಞಾನ ಅರ್ಜಿಸಿಕೊಂಡವರು. ಈ ಅಲೆಮಾರಿ ಪಶುಪಾಲಕ ಬುಡಕಟ್ಟುಗಳು ಭಿನ್ನ

ಭಿನ್ನ ಭೌಗೋಳಿಕ ಪ್ರದೇಶಗಳಲ್ಲಿ ಹಾಗೂ ವಿಭಿನ್ನ ಪಶುಗಳು ಪಾಲಕರಾದ್ದರಿಂದ ದನಗಳನ್ನು ಸಲುಹವವರಿಗೆ ದನಗಾರ ಹಾಗೂ ಗೊಲ್ಲರೆಂದು ಕರೆಯಲಾರಂಭಿಸಿದರು. ಬಹುದಿನಗಳ ವರೆಗೆ ಒಂದೇ ಬುಡಕಟ್ಟಿನಲ್ಲಿ ಮೇಷ [ಕುರಿ (ಜ್ಞಾನ)]ಗಳ ಪಾಲನೆ ಉಳಿದು ಕಾಲಾಂತರದಲ್ಲಿ ಮೇಷ[ಕುರಿ (ಜ್ಞಾನ)]ದ ಕಲ್ಪನೆ ಮರೆತು ಮೇಷ[ಕುರಿ (ಜ್ಞಾನ)] ಪಾಲಕರಿಗೆ ಮೇಷ ಪಾಲಕರ ಬದಲಾಗಿ ಕುರಿಪಾಲಕರನ್ನುತ್ತ ಕುರುಬರೆನ್ನ ಲಾರಂಭಿಸಿದರು. ಇಂದು ಕುರುಬರು ಸಹ ಜ್ಞಾನದ ಪ್ರತೀಕವೆಂದು ಪರಿಗಣಿಸದೆ ಅವರೊಂದು ಪಶುಪಾಲಕರ ಬುಡಕಟ್ಟೆಂದು ಪರಿಗಣಿ ಸಲ್ಪಡುವರು.

ಬಿಸೆಪ್ ಕಾಲ್ಡವಲ್ ಅವರ ಪ್ರಕಾರ "ಕುರುಂಬ ಎಂಬುದು ಕನ್ನಡ ಪದದಿಂದ ಉತ್ಪನ್ನ ಗೊಂಡಿರುವುದು. ಅದು ತಮಿಳುನದ್ದಲ್ಲ ಎಂಬುದಾಗಿ ಅಭಿಪ್ರಾಯ ಪಡುತ್ತಾರೆ. ಹೀಗಾಗಿ ಕುರುಂಬ ಪದವು ಎರಡು ಮೂಲದಿಂದ ಬಂದಿರಬಹುದೆಂದು ಶಂಕಿಸುವುದಲ್ಲದೆ ಎರಡು ವಿಭಿನ್ನ ರೀತಿಯ ಜನರ ಗುಂಪುಗಳಿಗೆ ಇದು ಅನ್ವಯಿಸುತ್ತದೆ ಎಂದಿರುವರು. ಕುರುಬರು ಗುಡ್ಡಗಾಡಿನಲ್ಲಿ ಒಂದೇ ಉದ್ಯೋಗಕ್ಕೆ ನೆಲೆಯಾಗಿ ನಿಂತು ಅದನ್ನು ಮುಂದುವರೆಸಿಕೊಂಡು ಬಂದವರು"(ಲಲಿತಾ, ಎ ಸಿ: ೧೯೯೩: ೧೧). ಯಾವುದೇ ಬದಲಾವಣೆಗೆ ಒಳಗಾಗದೆ ಕಾಡಿನಲ್ಲಿಯೇ ಕೆಲವೊಂದು ಕಷ್ಟಗಳೊಂದಿಗೆ ತಮ್ಮ ಬದುಕನ್ನು ರೂಪಿಸಿಕೊಂಡು ಕಾಡಿನಲ್ಲಿಯೇ ಉಳಿದು ಕಾಡು ಕುರುಬರಾದರು. ಅನಂತರ ಬಯಲು ಪ್ರದೇಶಕ್ಕೆ ಬಂದು ಗ್ರಾಮಕಟ್ಟಿಕೊಂಡು ಊರು ಕುರುಬರೆಂದು ಕರೆಯಿಸಿಕೊಂಡರು. ಇವರು ಕೃಷಿ ಮತ್ತು ಕುರಿಗಳ ಸಾಕಣಿಕೆಯ ಉದ್ಯೋಗದಲ್ಲಿ ಮುಂದುವರೆದರು.

"ಕುರುಬ ಪದದ ಪರ್ಯಾಯ ಹೆಸರು ಗೊಂಡ. ಗೊಂಡ ಪದವು ತೆಲುಗು ಭಾಷಿಕ ವಾಗಿದ್ದು ಅದರರ್ಥ ಕೊಂಡ ಎಂದಾಗುತ್ತದೆ. ಅಂದರೆ ಗುಡ್ಡ, ಬೆಟ್ಟ, ಪರ್ವತ ಅಥವಾ ಭೂಮಿ ಎಂದರ್ಥ. ಗೊಂಡರೆಂದರೆ ಭೂಪುತ್ರರು, ಬೆಟ್ಟದ ವಾಸಿಗಳೆಂಬ ಅರ್ಥಗಳು ಬರುತ್ತವೆ"(ಮೈತ್ರಿ, ಕೆ ಎಂ :೨೦೦೭:೬೪).

ಕುರುಬ ಎನ್ನುವ ಶಬ್ದವು ಬಹು ಪ್ರಾಚೀನ ಪದವಾಗಿದ್ದು ಇದು ಕುರುಬ ಸಮುದಾಯಕ್ಕೆ ಅನ್ವಯಿಸುತ್ತದೆ. ಉದ್ಯೋಗ ನಿಮಿತ್ತವಾಗಿ ಹಲವಾರು ಉಪಪಂಗಡಗಳು ಹುಟ್ಟಿಗೆ ಕಾರಣ ವಾಗಿವೆ. ಕುರುಬರು ಕಾಲಘಟ್ಟದಲ್ಲಿ ಕಾರಣಾಂತರಗಳಿಂದ ಬೇರೆ ಬೇರೆ ಪ್ರದೇಶಗಳಿಗೆ ಚದುರಿಹೋದ ಮೇಲೆ ದೇಶ, ಭಾಷೆ, ಉದ್ಯೋಗಗಳಿಂದಾಗಿ ಅನೇಕ ಹೆಸರುಗಳನ್ನು ಪಡೆದಿರುವರು. ಆದರೂ ಇವರೆಲ್ಲರೂ ಕುರುಬರು ಎಂಬ ಶಬ್ದವನ್ನು ಕಾಪಾಡಿಕೊಂಡು ಬಂದವರಾಗಿದ್ದಾರೆ.

### ಪೌರಾಣಿಕ ಹಿನ್ನೆಲೆ

ಯಾವುದೇ ಸಮುದಾಯದ ಹಿನ್ನೆಲೆ ಅಥವಾ ಮೂಲವನ್ನು ಹೆಚ್ಚಾಗಿ ಪುರಾಣಗಳ ಆಧಾರದಿಂದ ಹೇಳಲಾಗುತ್ತದೆ. ಋಷಿ ಮತ್ತು ನದಿ ಮೂಲವನ್ನು ನೋಡಬಾರದೆಂದು ಲೋಕ ರೂಢಿಯಾದ ಮಾತಿದೆ. ಖ್ಯಾತ ಸಂಶೋಧಕರಾದ ಶಂಬಾ ಜೋಶಿಯವರು "ನದಿಯ

ಮೂಲವೆಂಬಲ್ಲಿ ಜನಾಂಗದ ಮೂಲವೆಂದು ಸ್ವಲ್ಪ ಬದಲಾಯಿಸಿಕೊಂಡರಾಯಿತು. ಈ ಲೋಕೋಕ್ತಿಯಲ್ಲಿ ನಮ್ಮ ಪೂರ್ವಜರ ಅನುಭವವು ಬಹಳ ಚೆನ್ನಾಗಿ ಸಂಗ್ರಹಿಸಿಟ್ಟಿದೆ. ನದಿಯ ಪ್ರವಾಹವು ದೊಡ್ಡದಾಗಿರುವ ಸ್ಥಳದಲ್ಲಿರುವ ಸೌಂದರ್ಯವು ಉಗಮ ಸ್ಥಾನದಲ್ಲಿರುವುದಿಲ್ಲ"(ಜೋಶಿ,ಶಂ ಬಾ:೧೯೯೯:೮) ಎಂದಿದ್ದಾರೆ. ಇದಕ್ಕೆ ಅಲೆಮಾರಿ ಕುರುಬ ಸಮುದಾಯವು ಹೊರತಾಗಿಲ್ಲ. ಅಲೆಮಾರಿ ಕುರುಬ ಸಮುದಾಯದ ಮೂಲವನ್ನು ತಿಳಿದುಕೊಳ್ಳಲು ಹಲವಾರು ಪುರಾಣಗಳಿವೆ. ಹಾಲುಮತದ ಪುರಾಣ, ಹಾಲುಮತದ ಚರಿತ್ರೆ, ಕುರುಬರ ಚರಿತ್ರೆ, ತಗರ ಪವಾಡ ಇತ್ಯಾದಿ ಗ್ರಂಥಗಳು ಪ್ರಮುಖವಾಗಿವೆ.

ಅಲೆಮಾರಿ ಕುರುಬ ಸಮುದಾಯ ಕುರಿತು ಭೀಮ ಕವಿಯ 'ಹಾಲು ಮತೋತ್ತೇಜಕ ಪುರಾಣ' ಹೆಚ್ಚಿನ ಬೆಳಕು ಚೆಲ್ಲುತ್ತದೆ. ಭೀಮ ಕವಿ ಕುರುಬ ಸಮಾಜದ ಉಗಮ ಕುರಿತು ಹೇಳಿದ್ದು, ಸಂಸ್ಕೃತದಲ್ಲಿ ಬರೆದ ಆಗ್ನೇಯ ಪುರಾಣದ ಮೂಲಧಾರ ಕೊಡುತ್ತಾನೆ. ಇದರ ಪ್ರಕಾರ ಒಂದಾನೊಂದು ಕಾಲದಲ್ಲಿ ಕೌರುಭನು ಉಗ್ರತಪಸ್ಸು ಮಾಡಿ ಗಳಿಸಿದ ಶಕ್ತಿಯಿಂದಾಗಿ ಕುರುಬ ಸಮಾಜ ಹುಟ್ಟಿತೆಂದು ಹೇಳಲಾಗಿದೆ.

ಹಾಲುಮತದ ಚರಿತ್ರೆಯ ಪ್ರಕಾರ ಬ್ರಹ್ಮನಿಂದ ರಚಿತವಾದ ಬ್ರಹ್ಮಾಂಡವನ್ನು ನೋಡಲು ಒಮ್ಮೆ ಶಿವ ಪಾರ್ವತಿಯರು ಭೂಲೋಕದಲ್ಲಿ ಸಂಚಾರ ಮಾಡುತ್ತಾ ಸುಂದರ ತಾಣದಲ್ಲಿ ವಿಶ್ರಾಂತಿ ಪಡೆಯುತ್ತಾರೆ. ಆಗ ಈ ಬ್ರಹ್ಮಾಂಡಕ್ಕೆ ಒಬ್ಬ ಕರ್ತನನ್ನು ನೇಮಿಸಿ ಪ್ರಾಣಿಗಳ ಸಂರಕ್ಷಣೆ ಮಾಡ ಬೇಕೆಂದು ಪಾರ್ವತಿ ಶಿವನನ್ನು ಕುರಿತು ಬೇಡಿಕೊಳ್ಳುತ್ತಾಳೆ. ಹಾಲುಮತ ಉತ್ಪತ್ತಿಯಾಗಬೇಕೆಂಬ ಉದ್ದೇಶದಿಂದದು ಪಾರ್ವತಿಯ ಮೊಲೆ ಹಾಲು ನೆಲಕ್ಕೆ ಬಿದ್ದವಂತೆ. ನೆಲಕ್ಕೆ ಬಿದ್ದ ಹಾಲು ವ್ಯರ್ಥವಾಗಬಾರದೆಂದು ಬಲ ಮೊಲೆ ಹಾಲನ್ನು ಕೈಯಲ್ಲಿ ಹಿಡಿದು ಮಣ್ಣಿನಲ್ಲಿ ಬೆರೆಸಿ, ಪುರುಷ ರೂಪವನ್ನು ಮಾಡಿದಳು, ಎಡ ಮೊಲೆಯ ಹಾಲಿನಲ್ಲಿ ಮಣ್ಣನ್ನು ಬೆರೆಸಿದ ಮುದ್ದೆಯಿಂದ ಸ್ತ್ರೀ ರೂಪವನ್ನು ಮಾಡಿದಳು. ಮಣ್ಣಿನ ಎರಡು ಮೂರ್ತಿಗಳನ್ನು ಶಿವನ ಮುಂದೆ ಇಟ್ಟು, ಇವರು ಈ ಪೃಥ್ವಿಯ ಆದಿಗೆ ಕರ್ತರಾಗಬೇಕೆಂದು ಬೇಡಿಕೊಂಡಳು. "ಶಿವನು ಪಾರ್ವತಿಯ ಬೇಡಿಕೆಗೆ ಮುಗಳ್ನಗೆ ಬೀರಿ ಸಮ್ಮತಿಸಿ ಆ ಎರಡು ಮಣ್ಣಿನ ಬೊಂಬೆಗಳಿಗೆ ಜೀವ ಕಳೆಯನ್ನು ತುಂಬಿದನು. ಮಣ್ಣಿನ ಮುದ್ದೆಯಿಂದ ನಿರ್ಮಿತರಾದ್ದರಿಂದ ಪುರುಷ ಬೊಂಬೆಗೆ ಮುದ್ದಪ್ಪ ಸ್ತ್ರೀ ಬೊಂಬೆಗೆ ಮುದ್ದವ್ವ ಎಂದು ನಾಮಕರಣ ಮಾಡಿದರು"(ಅತ್ತಿಕೊಳ್ಳ, ಯಲ್ಲನಗೌಡ ಫ:೧೯೪೯:೩). ಇವರಿಗೆ ಅದಿಗೊಂಡನೆಂಬ ಮಗ ಹುಟ್ಟಿದನು. ಆದಿಗೊಂಡನಿಗೆ ಅಮರಗೊಂಡ, ಶಿವಗೊಂಡ, ಬೀರಗೊಂಡ, ಮಾರುಗೊಂಡ, ಮುದ್ದಗೊಂಡ, ಪದ್ಮಗೊಂಡ ಹೀಗೆ ಆರು ಮಂದಿ ಮಕ್ಕಳು. ಆರನೆಯ ಮಗ ಪದ್ಮಗೊಂಡ ಇಲ್ಲವೆ ಶಿವಪದ್ಮ. ಶಿವನಾಜ್ಞೆಯಂತೆ ಕುರಿಕಾಯುವ ವೃತ್ತಿ ಕೈಗೊಂಡು ಕುರುಬ ಸಮುದಾಯದ ಹುಟ್ಟಿಗೆ ಕಾರಣವಾದನು. ಹೀಗೆ ಪಾರ್ವತಿಯ ಹಾಲಿನಿಂದ ಹುಟ್ಟಿದ ಮಣ್ಣಿನ ಮುದ್ದೆಗಳಾದ ಮುದ್ದಪ್ಪ-ಮುದ್ದವ್ವ ಶಿವನಿಂದ ಜೀವಕಳೆ ಪಡೆದು ಸಂತಾನಭಾಗ್ಯ ಪಡೆದ ವಂಶಜರನ್ನು ಹಾಲುಮತದ ಸಮುದಾಯದವರೆಂದು ಕರೆಯಲಾಗಿದೆ.

ಹಾಲುಮತ ಪುರಾಣ, ಕುರುಬರ ಚರಿತ್ರೆ, ರೇಣುಕ ಕಾವ್ಯ ಮುಂತಾದ ಪುರಾಣಗಳಲ್ಲಿ ಅಲೆಮಾರಿ ಕುರುಬ ಸಮಾಜದ ಮೂಲ ಕುರಿತು ಈ ರೀತಿ ಹೇಳಲಾಗಿದೆ. ಒಮ್ಮೆ ಶಿವನ ಒಡ್ಡೋಲಗದಲ್ಲಿ ಒಂದು ಕೈಯಿಂದ ಶಿವನಿಗೆ ನಮಸ್ಕರಿಸಿದ ಭೃಂಗಿಯನ್ನು ಪಾರ್ವತಿ ತರಾಟೆಗೆ ತೆಗೆದುಕೊಳ್ಳುತ್ತಾಳೆ. ಭೃಂಗಿಯ ಪಾರ್ವತಿ ಮರಿ-ಮಾಂಸಗಳಿಗೆ ತಾನು ಕಾರಣಳೆಂದು ಹೇಳುತ್ತಾಳೆ. ಆಕೆ ಅವನ ಮಜ್ಜ-ಮಾಂಸಗಳನ್ನು ತಿರುಗಿ ಪಡೆದಾಗ ಅದರಿಂದಲೆ ಭೃಂಗಿ ಜೋತಾಡುತ್ತಾನೆ. ಭೃಂಗಿ ಶಿವನ ಸ್ತುತಿಗೈದಾಗ ತನ್ನ ತ್ರಿಶೂಲವನ್ನೇ ಅವನಿಗೆ ನೀಡುವ ಮೂಲಕ ಭಕ್ತ ರಕ್ಷಕನೆಂಬ ಬಿರುದನ್ನು ಶಿವ ಉಳಿಸಿಕೊಳ್ಳುತ್ತಾನೆ. ಪಾರ್ವತಿಗೆ ಇದರಿಂದ ಅಪಮಾನವಾಗಿ ನೆರದವರ ಹಾಸ್ಯಕ್ಕೆ ಗುರಿಯಾಗುತ್ತಾಳೆ. ಕೋಪಗೊಂಡ ಪಾರ್ವತಿಯು ಮುಂದೆ ನಕ್ಕವರು ಕುರಿಗಳಾಗಿ ಹಿಂದೆ ನಕ್ಕವರು ಮೇಕೆಗಳಾಗಿ ಭೂಲೋಕದಲ್ಲಿ ಜನಿಸಿರೆಂದು ಶಾಪ ಕೊಡುತ್ತಾಳೆ. ದೇವಾನುದೇವತೆಗಳು ಹಾಗೂ ಪಾರ್ವತಿ ಪರಮೇಶ್ವರರು ಕೆಲಕಾಲ ಕುರಿ-ಮೇಕೆಗಳನ್ನು ಕಾಯ್ದು ಬೇಸತ್ತು ಹೋಗುತ್ತಾರೆ. ಆಗ ಒಂದು ಗವಿಯಲ್ಲಿ ಅವನ್ನು ಕೂಡಿಟ್ಟು ಬಾಗಿಲು ಮುಚ್ಚಿ ಬಾಗಿಲ ಕೊಂಡಿಗೆ ಪಾರ್ವತಿಯ ಮೂಗುತಿಯನ್ನು ಸಿಕ್ಕಿಸಿ ಶಿವಪಾರ್ವತಿಯರು ಕೈಲಾಸಕ್ಕೆ ಹಿಂತಿರುಗುತ್ತಾರೆ. ಕಾಲಾಂತರದಲ್ಲಿ ಮೂಗುತಿ ಮುತ್ತಲ ಮರವಾಗಿ ಬೆಳೆಯುತ್ತದೆ. "ಈ ಜಾಗವು ಮಹಾಭಾರತದ ಕುರುಕ್ಷೇತ್ರದ ಸಮೀಪವಿರುವ ಕುರುವೇಶ್ವರ ಹತ್ತಿರವಿತ್ತು. ಹಿಂದೆ ಈ ಪ್ರದೇಶವನ್ನು ಕುರುಪತಿಪುರವೆಂದು ಕರೆಯಲಾಗುತ್ತಿತ್ತು. ಅಲ್ಲಿ ಒಕ್ಕಲಿಗ ಜಾತಿಗೆ ಸೇರಿದ ಆದಿಗೊಂಡ ನೆಲೆಸಿದ್ದು ಆತನಿಗೆ ಆರು ಮಕ್ಕಳಿದ್ದರು. ಆರು ಜನ ಮಕ್ಕಳಲ್ಲಿ ಕೊನೆಯವನು ಉಂಡಾಡಿ ಪದ್ಮಣ್ಣ. ಸಹೋದರರ ಒತ್ತಾಯಕ್ಕೆ ಮಣಿದು ಹೊಲ ಹಸನು ಮಾಡುತ್ತಿರುವಾಗ ಅರಿಯದಲೇ ಹುತ್ತದ ಮೇಲಿರುವ ಮುತ್ತಲ ಮರ ಕಡಿದೊಡನೆ ಅದರಡಿಯಿಂದ ನೂರಾರು ಕುರಿಗಳು ಹೊರಬಂದಾಗ ಆಶ್ಚರ್ಯಚಕಿತನಾಗಿ ಶಿವನನ್ನು ಪ್ರಾರ್ಥಿಸುತ್ತಾನೆ. ಶಿವ ಪ್ರತ್ಯಕ್ಷನಾಗಿ ಪದ್ಮಣ್ಣನಿಗೆ ಕುರಿ ಕಾಯುವ ವೃತ್ತಿಯನ್ನು ಕೈಗೊಳ್ಳಬೇಕೆಂದು ಹೇಳುವುದಲ್ಲದೆ ಆತನ ರಕ್ಷಣೆಗೆ ಬೀರೇಶನನ್ನು ಕಳುಹಿಸಿ ಕೊಡುತ್ತಾನೆ. ಹೀಗೆ ಪದ್ಮಣ್ಣನು ಕುರುಬ ಸಮಾಜದ ಮೂಲ ಪುರುಷನಾದರೆ ಆತನ ಕುರಿಗಳ ರಕ್ಷಣೆಗಾಗಿ ಭೂಮಿಯಲ್ಲಿ ಅವತರಿಸಿದ ಬೀರೇಶ ಬೀರದೇವರಾಗಿ ಅಲೆಮಾರಿ ಕುರುಬರಿಂದ ಪೂಜಿಸಲ್ಪಡುತ್ತಿದ್ದಾನೆ" (ಗುಬ್ಬಣ್ಣನವರ, ಶಿವಾನಂದ :೧೯೯೩:೧೨).

ಅಲೆಮಾರಿ ಕುರುಬರ ಹುಟ್ಟನ್ನು ವಿವರಿಸುವ ಇನ್ನೊಂದು ಪೌರಾಣಿಕ ಕಥೆ ಪ್ರಚಾರದಲ್ಲಿದೆ. ಶಿವನ ಆಜ್ಞೆಯಂತೆ ಪದ್ಮಣ್ಣ ಕುರಿಕಾಯುತ್ತ ಕುರಿಹಾಲು ಕಾಯಿಸಿ ಹೈನು ಮಾಡುವುದಕ್ಕೆ ಬೆಂಕಿಯ ಅವಶ್ಯಕತೆಯಿಂದ ಗುಡ್ಡದ ತುದಿಯ ಮೇಲೆ ನಿಂತು ಸುತ್ತಲು ದೃಷ್ಟಿ ಹರಿಸಿದನು. "ಆತನಿಗೆ ದೂರದಲ್ಲಿ ಹೊಗೆ ಬರುತ್ತಿರುವುದು ಕಂಡು ಅಲ್ಲಿಗೆ ಹೋಗಿ ನೋಡಲು ರಾಕ್ಷಸಿಯ ಬಂಧನದಲ್ಲಿದ್ದ ಕನ್ಯೆಯ ಪರಿಚಯವಾಗಿ ತನ್ನನ್ನು ಬಂಧಮುಕ್ತಳನ್ನಾಗಿ ಮಾಡಿದರೆ ಬೆಂಕಿ ಕೊಡುವುದಾಗಿ ಪದ್ಮಣ್ಣನಿಗೆ ಹೇಳುತ್ತಾಳೆ. ಆಕೆಯ ಬೇಡಿಕೆಯನ್ನು ಮನ್ನಿಸಿದ ಪದ್ಮಣ್ಣ ಆಕೆಯ ಅಪೇಕ್ಷೆಯಂತೆ ವಿವಾಹವಾಗುತ್ತಾನೆ. ವಿವಾಹ ಸಮಯದಲ್ಲಿ

ಕಾಡಿನಲ್ಲಿ ಹತ್ತಿಯು ದೊರೆಯಲಾರದ ಕಾರಣ ಉಣ್ಣೆಯ ಕಂಕಣ ಕಟ್ಟಿದರು. ಇವಳ ಸಂತತಿಯವರು ಉಣ್ಣೆ ಕಂಕಣದವರಾದರು. ಪದ್ಮಣ್ಣ ಈ ಮೊದಲು ಸ್ವಜಾತಿಯ ಹೆಣ್ಣಿನೊಂದಿಗೆ ಮದುವೆಯಾಗಿದ್ದ ಅವಳ ಸಂತತಿಯವರಿಗೆ ಹತ್ತಿಕಂಕಣದವರೆಂದು [illegible]"(ಬಿಜ್ಜರಗಿ, ಚಂದ್ರಕಾಂತ:೨೦೦೬:೧೬೯).

ಅಲೆಮಾರಿ ಕುರುಬರ ಮೂಲವನ್ನು ವಿವರಿಸುವ ಮತ್ತೊಂದು ಪುರಾಣ ಕಥೆಯುಂಟು. ಇವರು ಮೂಲತಃ ಕಾಪುಗಳು. ಅವರ ಪೂರ್ವಜರು ಮಾಸಿರೆಡ್ಡಿ ಮತ್ತು ನೀಲಮ್ಮ. ಇವರು ಪೂರ್ವಘಟ್ಟದಲ್ಲಿ ಕಟ್ಟಿಗೆ ಮಾರಿ ಜೀವಿಸುತ್ತಿದ್ದರು. ಅವರಿಗೆ ಐದು ಜನ ಗಂಡುಮಕ್ಕಳು. ಅವರ ಬಡತನವನ್ನು ಕಂಡು ಮರುಗಿದ ಶಿವನು ಜಂಗಮ ವೇಷಧಾರಿಯಾಗಿ ಅವರ ಮನೆಗೆ ಬಂದು "ನಿಮಗೆ ಮತ್ತೊಬ್ಬ ಗಂಡು ಮಗು ಜನನವಾಗುತ್ತಲೇ ಬಡತನ ನಿವಾರಣೆಯಾಗುವುದೆಂದು ಹೇಳಿ ಭಸ್ಮ ಕೊಟ್ಟು ಹೋದನು." ಆ ಆರನೇ ಮಗನೇ ಉಂಡಾಳ ಪದ್ಮಣ್ಣ. ಅವರ ಕುಟುಂಬ ವ್ಯವಸಾಯ ಮಾಡುತ್ತಾ ಅಭಿವೃದ್ಧಿ ಹೊಂದುತ್ತದೆ. ಆದರೆ ಪದ್ಮಣ್ಣ ಮಾತ್ರ ಕೆಲಸಕ್ಕೆ ಹೋಗದೆ ಉಂಡಾಡಿಯಾಗಿ ಕಾಲಕಳೆಯುತ್ತಿರುತ್ತಾನೆ. ತಾಯಿ ನೀಲಮ್ಮ ಪದ್ಮಣ್ಣನಿಗೆ ಬುದ್ಧಿವಾದ ಹೇಳಿ ಅಣ್ಣಂದಿರ ಜೊತೆ ಹೊಲ ಹಸನು ಮಾಡಲು ಕಳುಹಿಸುತ್ತಾಳೆ. ಪದ್ಮಣ್ಣ ಅರಿಯದಲೇ ಹುತ್ತದ ಮೇಲಿರುವ ಮುತ್ತಲ ಮರ ಕಡಿಯುತ್ತಾನೆ. ಅದರಡಿಯಿಂದ ಅಸಂಖ್ಯಾತ ಕುರಿಗಳು ಹೊರಬರುತ್ತವೆ. ಶಿವನ ಆಜ್ಞೆಯಂತೆ ಅವನು ಕುರಿಗಳನ್ನು ಕಾಪಾಡುವುದಕ್ಕಾಗಿ ಅರಣ್ಯ, ಹುಲ್ಲುಗಾವಲು, ನೀರು ಇರುವಲ್ಲಿ ಸಂಚರಿಸಲು ಪ್ರಾರಂಭಿಸುತ್ತಾನೆ. ಕುರಿಗಳ ಲಾಲನೆ ಪಾಲನೆಯಲ್ಲಿ ಮಗ್ನನಾಗುತ್ತಾನೆ. ಆತನಿಗೆ ಆಗ ಅರಣ್ಯದಲ್ಲಿ ಬದುಕುವ ರೀತಿ- ನೀತಿಯನ್ನು ಶಿವನು ಉಪದೇಶಿಸಿದನು. ಆಹಾರಕ್ಕಾಗಿ ಹಾಲುಹಿಂಡಿ ಹೈನ ಮಾಡುವುದಕ್ಕೆ ಬೇಕಾದ ಬೆಂಕಿಯನ್ನು ಅರಸುತ್ತ ಆತ ಅಡವಿಯಲ್ಲಿ ಅಲೆಯುತ್ತಿರುತ್ತಾನೆ. ಆಗ ರಾಕ್ಷಸಿಯ ಬಂಧನದಲ್ಲಿರುವ ಕನ್ಯೆಯ ಪರಿಚಯ ಪ್ರಣಯಕ್ಕೆ ತಿರುಗಿ ವಿವಾಹವಾಗುತ್ತದೆ. ರಾಕ್ಷಸಿ ಹೆಂಡತಿಯಲ್ಲಿ ಸಂತಾನ ಪಡೆಯುತ್ತಾನೆ ಮತ್ತು ಈ ಮೊದಲೇ ವಿವಾಹವಾಗಿ ಸ್ವಜಾತಿ ಹೆಂಡತಿಯಲ್ಲಿ ವಿವಾಹವಾದ ಸಂತಾನ ಪಡೆದಿರುತ್ತಾನೆ. ಹೀಗೆ ಸ್ವಜಾತಿ ಹೆಂಡತಿ ಸಂತಾನಗಳ ಮದುವೆಯಲ್ಲಿ ಹತ್ತಿಕಂಕಣ ಹಾಗೂ ಅನ್ಯಜಾತಿ (ರಾಕ್ಷಸಿಯ ಬಂಧನದ ಕನ್ಯೆ) ಹೆಂಡತಿ ಸಂತಾನಗಳ ಮದುವೆಯಲ್ಲಿ ಉಣ್ಣೆ ಕಂಕಣ ಕಟ್ಟುವ ಸಂಪ್ರದಾಯ ಬೆಳೆಯುತ್ತದೆ. ಇವು ಕಾಲಾಂತರದಲ್ಲಿ ಹತ್ತಿಕಂಕಣ ಹಾಗೂ ಉಣ್ಣೆ ಕಂಕಣ ಎಂಬ ಎರಡು ಪ್ರತ್ಯೇಕ ಉಪಜಾತಿಗಳ ಹುಟ್ಟಿಗೆ ಕಾರಣವಾಗಿದೆ. ಈ ಕುರಿತು ಯಾವ ಐತಿಹಾಸಿಕ ದಾಖಲೆ ಇರುವುದಿಲ್ಲ. ಇದೊಂದು ಕಲ್ಪಿತ ಕಥೆ ಎಂಬುದು ವಿದ್ವಾಂಸರ ತರ್ಕ ವಿಚಾರ.

### ಚಾರಿತ್ರಿಕ ಹಿನ್ನೆಲೆ

ಪರಂಪರಾಗತವಾದ ಕಥೆಯ ಪ್ರಕಾರ ಅಲೆಮಾರಿ ಕುರುಬ ಜನಾಂಗದ ಹುಟ್ಟು ಶಿವ ಮತ್ತು ಪಾರ್ವತಿಯ ಮೂಲವನ್ನು ಮುಟ್ಟುತ್ತದೆ. ಈ ಕಥೆಗಳನ್ನು ದಂತಕಥೆಗಳೆಂದು

ತಳ್ಳಿಹಾಕಿದರೂ ಇವು ಎರಡು ಅಂಶಗಳನ್ನು ಸ್ಪಷ್ಟಪಡಿಸುತ್ತವೆ. ಒಂದು : ಈ ಜನಾಂಗದ ಮುಖ್ಯ ದೇವತೆ ಶಿವ. ಎರಡು : ಇದು ಪ್ರಾಚೀನವಾದ ಜನಾಂಗ. ಮೊದಲನೆಯದಕ್ಕೆ ಸಾಕ್ಷಿಯಾಗಿ ಇಂದು ಅಲೆಮಾರಿ ಕುರುಬರಲ್ಲಿ ಪ್ರಧಾನವಾಗಿ ಪೂಜೆಗೊಳ್ಳುವ ಬೀರೇಶ್ವರ ದೇವತೆ ಈಶ್ವರನ ಬೇರೊಂದು ರೂಪನಾಗಿರುವುದೆ ಆಗಿದೆ. ಆದರೆ ಈ ಸಮುದಾಯದ ಪ್ರಾಚೀನತೆಯ ಬಗ್ಗೆ ಇತರ ಬೇರೆ ಮೂಲವನ್ನು ಹುಡುಕಬಹುದು.

ಅಲೆಮಾರಿ ಕುರುಬರು ಭಾರತದ ಮೂಲ ನಿವಾಸಿಗಳೆಂಬವುದರಲ್ಲಿ ಎರಡು ಮಾತಿಲ್ಲ. "ಪರಸ್ಪರ ಎಷ್ಟೋ ಬೇರೆ ಬೇರೆಯಾಗಿದ್ದರೂ ತಾವು ವಾಸಿಸುತ್ತಿದ್ದ ದ್ರಾವಿಡ ಪಂಗಡದಿಂದ ಎಷ್ಟೋ ಚದರಿ ಚೆಲ್ಲಾಪಿಲ್ಲಿಯಾಗಿ ಹೋಗಿದ್ದರೂ ಮತ್ತು ಈಗ ಪರಸ್ಪರ ಎಷ್ಟೋ ದೂರ ದೂರವಾಗಿ ಜೀವಿಸುತ್ತಿದ್ದರೂ ಪ್ರಾಚೀನ ಕಾಲದಲ್ಲಿ ಈ ಜನಾಂಗ ಅಸ್ತಿತ್ವದಲ್ಲಿತ್ತೆನ್ನುವುದಕ್ಕೆ ಕೆಲವು ಅವಶೇಷಗಳನ್ನಾದರೂ ಹೊಂದಿರದ ಯಾವ ಪ್ರಾಂತವೂ ಭರತ ವರ್ಷದಲ್ಲಿಲ್ಲ" (ಲಕ್ಕಪ್ಪಗೌಡ, ಎಚ್ ಜೆ:೧೯೯೭:೪). ಇದಕ್ಕೆ ಆಧಾರವೆಂಬಂತೆ Gustav Oppert ರವರು ತಮ್ಮ The original Inhabitants of India ಎಂಬ ಗ್ರಂಥದಲ್ಲಿ ಈ ರೀತಿಯಾಗಿ ಹೇಳಿದ್ದಾರೆ. "Indeed the Kurubas must be regarded as very old inhabitants of this land who contest with thier Dravidian kinsmen the priorty of accupation of the Indian soil" (Gustav oppert:1988:126)

"They (The Kurubas) are the modern representatives of the ancient Kurubas or pallavas, who were once so powerful through out south india". (Madras census report, 1891)

"...the Kurubas are the most impartant element in the early population of south india" (Enthovan,R E: 1922:126).

"ದಕ್ಷಿಣ ದೇಶದಲ್ಲಿ ಸಿಕ್ಕಿರುವ ಪ್ರಾಚೀನ ನಾಣ್ಯಗಳೆಂದರೇ ಕುರುಬರವೇ" ಎಂದು ಶಂಬಾ ಜೋಶಿಯವರಿಂದ ಉದ್ಧೃತವಾಗಿದೆ. ಮೇಲಿನ ಅಭಿಪ್ರಾಯಗಳನ್ನು ಗಮನಿಸಿದಾಗ ಅಲೆಮಾರಿ ಕುರುಬರು ಎಂದು ಇಂದು ಕರೆಸಿಕೊಳ್ಳುತ್ತಿರುವ ಒಂದು ಸಮುದಾಯ ತುಂಬಾ ಪ್ರಾಚೀನ ಕಾಲದಿಂದಲೂ ಭರತ ಖಂಡದಲ್ಲಿತ್ತು ಎಂಬ ಅಂಶ ತಿಳಿದುಬರುತ್ತದೆ.

ಇವರು ಆರ್ಯರೋ, ದ್ರಾವಿಡರೋ ಎಂಬ ಬಗ್ಗೆ ಬೇರೆ ಬೇರೆ ಅಭಿಪ್ರಾಯಗಳಿವೆ. ಈ ದೇಶಕ್ಕೆ ಬೇರೆ ಕಡೆಯಿಂದ ಬಂದು ಇಲ್ಲಿನ ಮೂಲ ನಿವಾಸಿಗಳನ್ನು ಗೆದ್ದು, ಒತ್ತರಿಸಿ ಅವರೊಡನೆ ಸಂಕರಗೊಂಡು ಸಾಮ್ರಾಜ್ಯವನ್ನು ಸ್ಥಾಪಿಸಿ ನಾಗರಿಕತೆಯನ್ನು ಹರಡಿಸಿದರು. ಆರ್ಯರ ಪ್ರಧಾನ ಕಸುಬು ಪಶುಪಾಲನೆಯಾಗಿತ್ತು. ಅಲೆಮಾರಿ ಕುರುಬರ ಮುಖ್ಯ ಕಸುಬು ಇಂದಿಗೂ ಪಶುಪಾಲನೆಯೆ ಆಗಿದೆ. ವೇದಗಳಲ್ಲಿ ಕುರುಬರನ್ನು ಸೂಚಿಸುವ ಕೆಲವು ಪದಗಳು ಕಾಣಬರುತ್ತವೆ. ಆದುದರಿಂದ ಇಂದಿನ ಅಲೆಮಾರಿ ಕುರುಬರು ಆರ್ಯರು ಎಂಬ ವಾದ ವೊಂದಿದೆ. ಆದರೆ ಇದು ಆರ್ಯಪೂರ್ವ ಜನಾಂಗವೆಂಬುದಕ್ಕೆ ಬಲವಾದ ಆಧಾರಗಳು ಕಂಡುಬರುತ್ತವೆ. "ಬೇರೆ-ಬೇರೆ ಧರ್ಮ ಮತ್ತು ಬೇರೆ-ಬೇರೆ ಜನಾಂಗಗಳ ಸಂಪರ್ಕದಿಂದಾಗಿ

ಕಾಲಕ್ರಮದಲ್ಲಿ ಇವರಲ್ಲಿ ಹಲವು ಜಾತಿಗಳು ಉದ್ಭವಿಸಿದವು. ಅನ್ನ ವ್ಯವಹಾರಗಳು ನಿಂತು ಹೋದವು. ಆದರೆ ಇತಿಹಾಸವನ್ನು ಗಮನಿಸಿದಾಗ ಇಂದು ಬೇರೆ-ಬೇರೆಯಾಗಿ ಕಾಣುವ ಹಲವು ಜಾತಿಗಳು ಮೂಲಭೂತವಾಗಿ ಕುರುಬ ಸಮುದಾಯಕ್ಕೆ ಸೇರಿದವುಗಳೆಂದೂ, ಅವರಲ್ಲಿ ಅನ್ನ ವ್ಯವಹಾರ ಸಂಬಂಧವಷ್ಟೇ ಅಲ್ಲ, ಮದುವೆಗಳೂ ನಡೆದಿವೆ ಎಂಬುದು ವಿಧಿತವಾಗುತ್ತದೆ. ರಾಷ್ಟ್ರಕೂಟರಿಗೂ, ಗಂಗರಿಗೂ ವಿವಾಹ ಸಂಬಂಧ ನಡೆದಿದೆ. ಚಾಲುಕ್ಯರ ಮನೆಯ ಹೆಣ್ಣು ರಾಷ್ಟ್ರಕೂಟರಲ್ಲಿವೆ. ಶಾತವಾಹನರಲ್ಲಿ ಅಗ್ನಿ ಕುಲದ ಹೆಣ್ಣುಗಳಿದ್ದುದು ಸಿದ್ಧವಾಗಿದೆ. ಆದಕಾರಣ ಇಂದಿನ ತಮ್ಮ ಒಡಕು ಸಮಾಜ ಸ್ಥಿತಿಯ ಮೇಲಿಂದ ಹಿಂದಿನ ಕಾಲದ ಚಿತ್ರವನ್ನು ಚಿತ್ರಿಸಿಕೊಳ್ಳಲಾಗದು"(ಲಕ್ಕಪ್ಪಗೌಡ,ಎಚ್ ಜೆ:೧೯೯೭:೪).

ದಕ್ಷಿಣ ದೇಶದಲ್ಲಿ ಸಿಕ್ಕಿರುವ ಅತಿ ಪ್ರಾಚೀನ ನಾಣ್ಯಗಳೆಂದರೆ ಕುರುಬರವೇ ಎಂಬುದಾಗಿ ಸರ್ ಇಲಿಯಟ್ ಅಭಿಪ್ರಾಯ ಪಟ್ಟಿದ್ದಾರೆ. ಇವು ಕ್ರಿ ಶ ಮೂರನೇ ಶತಮಾನದ ನಾಣ್ಯಗಳು "ಪ್ರಾಚೀನ ಶಾಸನಗಳಲ್ಲಿ ಕುರುಬರ ಹಟ್ಟಿ, ಕುರುಬರ ಹಳ್ಳಿ, 'ಕುರುಬರ ವಿಷಯ' ಇಂತಹ ವಿಷಯಗಳನ್ನು ಹೇರಳವಾಗಿ ಕಾಣಬಹುದು. ದಕ್ಷಿಣ ಭಾರತದಲ್ಲಂತೂ ಅತ್ಯಂತ ಪ್ರಾಚೀನರೆಂದರೇ ಇವರೇ. ಇವರು ಮೊದಲು ರಾಜ್ಯಸ್ಥಾಪನೆ ಮಾಡಿದ ಪಟ್ಟಣ ಪುಲಾಲ. ಆ ರಾಜನ ಹೆಸರು ಕಾಮಂದಪ್ರಭು. ಆ ರಾಜ್ಯದ ಹೆಸರು "ಕುರುಬರು ನಾಡು". ಮಲಬಾರು ಜಿಲ್ಲೆಯಲ್ಲಿ ಈಗಲೂ ಈ ಹೆಸರಿನ ಪ್ರದೇಶವಿದೆ. ರೆವರೆಂಡ್ ಎಫ್. ಮೆಟ್ಜ್ ಅವರು ಕುರುಬರು ನೀಲಗಿರಿ ಪ್ರದೇಶಗಳಲ್ಲಿ ನೆಲೆಸಿದ ಬಗ್ಗೆ ಬರೆಯುತ್ತಾ ಒಂದು ಕಾಲದಲ್ಲಿ ಇದು ಕುರುಬರು ಪ್ರಬಲ ನೆಲೆಯಾಗಿತ್ತು. ...ಮೊಟ್ಟೆ ಎಂಬ ಹೆಸರಿನ ಹಳ್ಳಿಗಳೂ, ಅವರ ಮನೆಗಳ ಅವಶೇಷಗಳೂ ಇಂದು ಕಾಣಬರುತ್ತವೆ. ಹಲವು ವರ್ಷಗಳ ಹಿಂದೆ ಹಿಂದಿನ ಕುರುಬ ಪಟ್ಟಣದ ಒಂದು ನಿವೇಶನವನ್ನು ನಾನು ಕಂಡುಹಿಡಿದೆ"(ಅದೇ:೫೪೬) ಇತ್ಯಾದಿಯಾಗಿ ಹೇಳುತ್ತಾರೆ.

"ದಕ್ಷಿಣ ಭಾರತದ ಕುರುಬರ ಇತಿಹಾಸ ಉತ್ತರ ಭಾರತದವರಿಗಿಂತ ಉಜ್ವಲವಾಗಿದೆ ಎನ್ನಬಹುದು. ಪ್ರಾಚೀನ ತೊಂಡಮಂಡಲದ ಕುರುಬರು ಪಲ್ಲವ ರಾಜರ ಮೂಲ ಪುರುಷರೆಂದು ತಿಳಿದು ಬರುತ್ತದೆ. ಇವರು ಸುಮಾರು ಕ್ರಿ ಶ ೬ನೇ ಶತಮಾನದಿಂದ ೮ನೇ ಶತಮಾನದವರೆಗೆ ದಕ್ಷಿಣ ಭಾರತದ ರಾಜಕೀಯ ಜೀವನದಲ್ಲಿ ಸಾರ್ವಭೌಮತ್ವವನ್ನು ಸ್ಥಾಪಿಸಿದ್ದರು. ತೊಂಡಮಂಡಲವು ಉತ್ತರ ಪೆನ್ನಾರ್ ಮತ್ತು ಉತ್ತರ ವೇಲಾರ್ ನದಿಗಳ ಪ್ರದೇಶದ ನಡುವೆ ಬರುತ್ತದೆ. ಇದನ್ನು 'ಕುರುಬರ ಭೂಮಿ', 'ಕುರುಬರ ನಾಡು' ಎಂದು ಕರೆಯಲಾಗಿತ್ತು. ಚೋಳರಿಂದ ಸೋಲಿಸಲ್ಪಟ್ಟ ಮೇಲೆ ಅವರು ಅವನತಿ ಹೊಂದಿದರು. ಇಂದಿನ ನೀಲಗಿರಿ, ವೈನಾಡು, ಕೇರಳದ ಗುಡ್ಡ ಪ್ರದೇಶ, ಮೈಸೂರಿನ ಗುಂಡ್ಲುಪೇಟೆ, ಹೆಗ್ಗಡದೇವನಕೋಟೆ, ಹುಣಸೂರು, ಕೊಡಗು ಪ್ರದೇಶಗಳಲ್ಲಿ 'ಗಿರಿಜನ' ರೂಪದಲ್ಲಿ ಕಾಣಸುತ್ತಿರುವವರೇ ಪ್ರಾಚೀನ ತೊಂಡಮಂಡಲದ ಕುರುಬ ಪ್ರತಿನಿಧಿಗಳೆಂದು ಜನಾಂಗದ ಶಾಸ್ತ್ರಜ್ಞರು ಗುರುತಿಸಿದ್ದಾರೆ"(ಮಾದೇಗೌಡ:೧೯೯೩:೨೫).

ದಕ್ಷಿಣ ಭಾರತದ ಪ್ರಭಾವಶಾಲಿ ರಾಜಮನೆತನಗಳಲ್ಲಿ ಪಲ್ಲವರು ಒಬ್ಬರು. ಅತ್ಯಂತ ಬಲಾಢ್ಯರಾದ ಇವರು ಮೊಟ್ಟಮೊದಲಿಗೆ ದಕ್ಷಿಣ ಭಾರತದಲ್ಲಿ ನಾಣ್ಯಗಳನ್ನು ಜಾರಿಗೆ ತಂದರು. ಶ್ರೀ ಕೃಷ್ಣಸ್ವಾಮಿ ಅಯ್ಯಂಗಾರ್ ಅವರು ಪಲ್ಲವ ಅರಸರ ಬಗ್ಗೆ ಬರೆಯುತ್ತಾ "ಪಲ್ಲವರು ತಮಿಳು ಕುರುಂಬರು ಎಂದೂ ಕೆಲವೊಮ್ಮೆ ಕುರುನೀಲ ಮನ್ನೆರ ಎಂದೂ ಕರೆಯುತ್ತಿದ್ದರು ಎಂದಿದ್ದಾರೆ. 'ಕುರುಂಬರು' ಅಥವಾ 'ಕುರುಬರು' ಪ್ರಾಚೀನ ಪಲ್ಲವರ ಆಧುನಿಕ ಪ್ರತಿನಿಧಿಗಳು ಎಂಬುದಾಗಿ ೧೮೮೧ರ ಮದ್ರಾಸ ಗ್ಯಾಜೆಟಿಯರ್‌ನಲ್ಲಿ ಉಲ್ಲೇಖಿಸಲಾಗಿದೆ"(ಲಕ್ಕಪ್ಪಗೌಡ,ಎಚ್ ಜೆ:೧೯೯೭:೯). ಈ ರಾಜ್ಯವನ್ನು ಹ್ಯೂಯನತ್ಸಾಂಗ ಮನದುಂಬಿ ವರ್ಣಿಸಿದ್ದಾನೆ. ಚೋಳರು ಈ ರಾಜ್ಯವನ್ನು ವಶಪಡಿಸಿಕೊಂಡ ನಂತರ ಕುರುಬರ ಆಸ್ತಿ-ಪಾಸ್ತಿಗೆ, ಜೀವಕ್ಕೆ ರಕ್ಷಣೆ ಇಲ್ಲದಾಯಿತು. ಹೀಗಾಗಿ ಪಲ್ಲವ ಮೂಲದ ಕುರುಬರು ಕಾಡು, ಬೆಟ್ಟ, ಗುಡ್ಡಗಳನ್ನು ಸೇರಿಕೊಂಡರು.

ಕುರುಬರೇ ಕದಂಬರೆಂಬ ಹೆಸರಿನಿಂದ ರಾಜ್ಯಭಾರ ಮಾಡಿದ್ದರೆಂದೂ, ಕುರುಂಬ ಶಬ್ದವು ಸಂಸ್ಕೃತದ ಸಂಸರ್ಗದಿಂದ ಕದಂಬ ಎಂದಾಗಿರಬಹುದೆಂದೂ ಆಂಗ್ಲ ಲೇಖಕ ಲೂಯಿಸ್ ರೈಸ್ ಅವರು ಮೈಸೂರು ಮತ್ತು ಕೊಡಗು ಜಿಲ್ಲೆಯ ಗ್ಯಾಜೆಟಿಯರ್‌ದಲ್ಲಿ ಉಲ್ಲೇಖಿಸಿದ್ದಾರೆ. "The Kurubas have a special interest in Kanara, if as seems possible, Kadambas the name of the leading dynasties of Banavasi is a brahminical form of Kurubas" ಎಂದು ಒಬ್ಬ ಚರಿತ್ರಕಾರರು ಹೇಳುತ್ತಾರೆ. "I suspect that behind the name Kadamba Irkul that of Kadamba or Kurumba" ಎಂದು Gustav Oppert ಅವರು ಹೇಳುತ್ತಾರೆ. ಅವರು ಮುಂದುವರಿದು ಕುರುಂಬರೇ ಕದಂಬರೆಂದೂ ಕುರುಂಬ ಎಂಬ ಹೆಸರಲ್ಲಿ ಸ್ವಲ್ಪ ಬದಲಾವಣೆ ಮಾಡಿಕೊಂಡು ಕದಂಬ ಎಂದು ಕರೆದುಕೊಂಡರೆಂದೂ ಕದಂಬ ವೃಕ್ಷಕ್ಕೆ ಸಂಬಂಧಿಸಿದ ಕಥೆಗಳು ಅನಂತರ ಹುಟ್ಟಿಕೊಂಡವೆಂದೂ ಹೇಳುತ್ತಾರೆ. ತಮಿಳಿನಲ್ಲಿ 'ಕುರುಂಬ' ಮತ್ತು 'ಕದಂಬ' ಎಂಬ ಪದಗಳೆರಡೂ ಸಮಾನಾರ್ಥಗಳೆಂಬ ಬಹುಮುಖ್ಯವಾದ ಅಂಶದೆಡೆಗೆ ಅವರು ಗಮನ ಸೆಳೆಯುತ್ತಾರೆ. ಗ್ರಿಗೆ ಅವರು ತಮ್ಮ "Manual of the Nilagiri District" ಎಂಬ ಕೃತಿಯಲ್ಲಿ "May not this word (Kadamba) be a compound of Katu or Katam (both meaning forest) and Kurumba and perhapes the same as Kad-Kurumba?" ಎಂದು ಪ್ರಶ್ನಿಸುತ್ತಾರೆ. ವಿಜಯನಗರದ ಸಂಸ್ಥಾಪಕರು ಕುರುಬರೆಂದು ಇತಿಹಾಸಕರರು ಒಪ್ಪುವುದಾದರೆ ಕದಂಬರನ್ನು ಕುರುಬರೆಂದು ಒಪ್ಪಲೇಬೇಕಾಗುತ್ತದೆ"(ಲಕ್ಕಪ್ಪ ಗೌಡ, ಎಚ್ ಜೆ:೧೯೯೭:೮-೯). ಕಾರಣ ವಿಜಯನಗರದ ಮೂಲ ಪುರುಷರು ಕದಂಬರೆಂದು ಈಚೆಗೆ ತಿಳಿದು ಬಂದಿದೆ.

ವಿಜಯನಗರ ಸಾಮ್ರಾಜ್ಯ ಸ್ಥಾಪಕರು ಹಾಲುಮತ ಕುರುಬ ಸಮಾಜದವರೆಂದು ಅನೇಕ ವಿದ್ವಾಂಸರು, ಇತಿಹಾಸಕಾರರು ಹಾಗೂ ಸಂಶೋಧಕರು ಏಕಕಂಠದಲ್ಲಿ ಸಾರಿದ್ದಾರೆ. ಹರಿಹರ ಮತ್ತು ಬುಕ್ಕರು ವಿಜಯನಗರ ಸಾಮ್ರಾಜ್ಯ ಸ್ಥಾಪಕರೆಂಬುದು ಎಲ್ಲಾರಿಗೂ ಗೊತ್ತಿರುವ ಸಂಗತಿ. ಆದರೂ ಅವರು ಯಾವ ಸಮುದಾಯಕ್ಕೆ ಸೇರಿದವರು ಎಂಬುದು ಚರ್ಚೆಯ

ವಿಷಯವಾಗಿದೆ. ಹರಿಹರ ಮತ್ತು ಬುಕ್ಕರು ಕುರುಬರು ಎಂಬುದಕ್ಕೆ ಹಲವಾರು ಆಧಾರಗಳಿವೆ. ಹೊರೇಸ್ ಎಚ್ ವಿಲ್ಸನ್ ಅವರು "ವಿಜಯನಗರದ ರಾಜರು ಕುರುಬ ಕುಟುಂಬದವರಾಗಿದ್ದರು" ಎಂದು ಹೇಳುತ್ತಾರೆ. ಹಕ್ಕ-ಬುಕ್ಕರು ಕುರುಂಬರೆಂದು ಕೆಳದಿ ನೃಪವಿಜಯದಲ್ಲಿ ಹೇಳಿದೆ. ವಿದ್ಯಾರಣ್ಯ ಕಾಲಜ್ಞಾನದಲ್ಲಿ ಅವರನ್ನು 'ಕುರುವಂಶ ಪ್ರಸೂತಿಜಾ' ಎಂದು ವರ್ಣಿಸಲಾಗಿದೆ. ಸಾಲೆಂ ಗೆಜೆಟಿಯರ್‌ನಲ್ಲಿ ರಾಜ ಕುಲ, ನಾಡ ಕುಲ, ಅರಸುಕುಲ, ಸಂಗಮ ಕುಲ, ಒಡೆಯರ ಕುಲ, ಸಾಮಂತ ಕುಲ ಎಂಬುದಾಗಿ ಕುರುಬರ ಒಳಪಂಗಡಗಳನ್ನು ಗುರುತಿಸಲಾಗಿದೆ. ಈಗಲೂ ಕುರುಬರಲ್ಲಿ ಈ ಒಳಪಂಗಡಗಳುಂಟೆಂಬುದನ್ನು ಮರೆಯುವಂತಿಲ್ಲ. ವಿಜಯನಗರದ ಪ್ರಸಿದ್ಧ ರಾಜರು ಸಂಗಮ ಕುಲದವರೆಂಬುದು ಅರ್ಥಪೂರ್ಣವಾಗಿದೆ.

ಎಸ್ ಕೃಷ್ಣಸ್ವಾಮಿ ಅಯ್ಯಂಗಾರ್ ಅವರು "The Sources of Vijayanagara" ಎಂಬ ಇತಿಹಾಸ ಗ್ರಂಥದಲ್ಲಿ ಮತ್ತು ತಿರುಮಲಾರ್ಯನು ಚಿಕ್ಕದೇವರಾಜ ವಂಶಾವಳಿಯಲ್ಲಿ ಹೀಗೆ ಬರೆದಿದ್ದಾರೆ. "ಅತ್ತಲುತ್ತರ ದೇಶದೊಳ್ ತುಂಗಭದ್ರಾ ತೀರದೋಳ್ ವಿದ್ಯಾನಗರಿಯನಾಳ್ದ ಹರಿಹರ ಬುಕ್ಕರ್ಮೊದಲಾದ ಕುರುಂಬರಾಯರ ಅನಂತರದೊಳ್ ಅರಸುಗೈಯ್ದು ತುಳುವ ಕುಲಾಧೀಶ್ವರ ನರಸವೀರ ನರಸಿಂಗೆ ಕೃಷ್ಣಚ್ಯುತರೆಂಬ ರಾಯರ್ದೈವರ ತರುವಾಯಂ..." (ಒಡೆಯರ್, ಡಿ ಹೆಗ್ಗಡೆ:೧೯೯೮:೭). ಈ ಪದ್ಯದಿಂದ ವಿಜಯ ನಗರ ಸಂಸ್ಥಾಪಕ ವಂಶವಾದ ಸಂಗಮ ಸಹೋದರರಾದ ಹರಿಹರ ಬುಕ್ಕರು ಕುರುಬರೆನ್ನುವುದು ಸರ್ವವಿಧಿತವಾಗುತ್ತದೆ. ಹಾಗೆಯೇ ಬಳ್ಳಾರಿಯ ಪ್ರಸಿದ್ಧ ಪಾಳೆಯಗಾರ ಹಂಡೆ ಬಾಲದ ಹನುಮಪ್ಪ ನಾಯಕ ಕುರುಬರೆಂದು ತಿಳಿದುಬಂದಿದೆ. "The first of the palegars of the Bellary was apparently a Kuruba, named Balada Hanumanthappa Naik" ಎಂಬುದಾಗಿ ೧೯೫೪ರ ಬಳ್ಳಾರಿ ಜಿಲ್ಲಾ ಗೆಜೆಟಿಯರ್ ತಿಳಿಸುತ್ತದೆ. ಈ ವಂಶದವರು ಇಂದು ಕುರುಬರಿಗೆ ಗುರುಗಳಾಗಿದ್ದಾರೆ.

**ಧಾರ್ಮಿಕ ಹಿನ್ನೆಲೆ**

ಆಲೆಮಾರಿ ಕುರುಬರ ಧಾರ್ಮಿಕ ಆಚರಣೆಗಳನ್ನು ನೋಡಿದಾಗ ಶೈವ ಪಂಥದವರೆಂಬುದು ತಿಳಿದುಬರುತ್ತದೆ. ಈ ಸಮುದಾಯದ ಮೂಲಪುರುಷರಾದ ಮುದ್ಧಪ್ಪ-ಮುದ್ದವ್ವರು ಶಿವಪಾರ್ವತಿಯರಿಂದಲೇ ಜನನವಾಗಿರುವುದನ್ನು ಕುರುಬರ ಮೂಲವನ್ನು ನಿರೂಪಿಸುವ ಪುರಾಣಗಳು ತಿಳಿಸುತ್ತವೆ. ಹಾಗೆಯೇ ಅವರ ಆರಾಧ್ಯ ದೈವರುಗಳಾದ ರೇವಣ್ಣಸಿದ್ಧ, ಬೀರೇಶ್ವರ, ಮಾಳಿಂಗರಾಯ, ಅಮೋಘಸಿದ್ಧ, ಮೈಲಾರಲಿಂಗ ಮುಂತಾದವನ್ನು ಕುರಿತು ಬರೆಯಲ್ಪಟ್ಟ ಪುಸ್ತಕಗಳಿಂದ ಆಲೆಮಾರಿ ಕುರುಬರು ಶೈವ ಮತಾವಲಂಬಿಗಳು, ಶಿವಾರಾಧಕರು ಎಂಬುದು ಗೋಚರವಾಗುತ್ತದೆ. ಶಿವ ಅಥವಾ ಲಿಂಗದ ಮೇಲೆ ಇವರಿಗಿರುವ ಭಕ್ತಿಯನ್ನು ಗಮನಿಸಿದರೆ ಕುರಿಯ ಹಿಕ್ಕೆಯನ್ನೇ ಲಿಂಗವೆಂದು ಭಾವಿಸಿಕೊಂಡು ಪೂಜೆ ಗೈಯುವ ಮುಗ್ಧ ಜನರಿವರು. ಇವರು ದೇವಾಲಯ ನಿರ್ಮಾಣ ಮಾಡುವ ಪದ್ಧತಿ ಮತ್ತು ದೇವಾಲಯದಲ್ಲಿ ಮೂರ್ತಿ ಪ್ರತಿಷ್ಠಾಪನೆ ಇವು ಶೈವ ಧರ್ಮದ ಅನುಸಾರವಾಗಿರುವುದು ಕಾಣುತ್ತದೆ.

ದೇವಾಲಯ ಸಂಪ್ರದಾಯವು ಶೈವ ಧರ್ಮಕ್ಕೆ ಸಂಬಂಧಿಸಿದ್ದು ಎಂಬುದು ವಿದ್ವಾಂಸರ ಅಭಿಮತವಾಗಿದೆ.

ಮೂಲತಃ ಶಿವರಾಧಕರಾಗಿದ್ದ ಅಲೆಮಾರಿ ಕುರುಬ ಜನಾಂಗದ ಮೇಲೆ ವೈಷ್ಣವ ಪಂಥದ ಪ್ರಭಾವವು ವಿಜಯನಗರದ ಪ್ರಖ್ಯಾತ ದೊರೆಯಾದ ಶ್ರೀಕೃಷ್ಣದೇವರಾಯನ ಕಾಲದಲ್ಲಿ ಆಗಿರುವುದು ಕಂಡಬರುತ್ತದೆ. ರಾಮಾನುಜಾಚಾರ್ಯರಂಥ ವೈಷ್ಣ ಆಚಾರ್ಯರು ಕರ್ನಾಟಕದಲ್ಲಿ ಬಹಳ ಕಾಲ ನೆಲೆಸಿದ್ದರಿಂದ ಅನೇಕರು ಅವರ ಪ್ರಭಾವಕ್ಕೆ ಒಳಗಾಗಿ ತಿರುಪತಿ ವೆಂಕಟೇಶ್ವರನನ್ನು ಪೂಜಿಸಲಾರಂಭಿ ಸಿದರು. ಹಾಗೆಯೇ ಕರ್ನಾಟಕದ ಶ್ರೇಷ್ಠ ದಾಸರೂ, ಕವಿಗಳಾಗಿ ಕೀರ್ತಿಯನ್ನು ಪಡೆದಿರುವ ಕನಕದಾಸರು ಈ ಸಮುದಾಯದಿಂದ ಬಂದವರು. ಕನಕದಾಸರು ವೈಷ್ಣವ ಧರ್ಮದ ಅನುಯಾಯಿ ಆಗಿ ಮೆರೆದಿರುವ ಪ್ರಭಾವದಿಂದ ಕೆಲವು ಕುಟುಂಬಗಳು ವೈಷ್ಣವ ಧರ್ಮದ ಅನುಯಾಯಿಗಳಾಗಿರುವ ಸಾಧ್ಯತೆಯನ್ನು ಅಲ್ಲಗಳೆಯು ವಂತಿಲ್ಲ. ಇಂಥ ವೈಷ್ಣವ ಧರ್ಮದ ಅನುಯಾಯಿಗಳನ್ನು ಕನಕಯ್ಯನ ಕುರುಬರೆಂದು ಕರೆಯುತ್ತಾರೆ. ಇವರು ಜಾತಿಯಿಂದ ಕುರುಬರಾಗಿಯೇ ಇದ್ದು ತಿರುಪತಿಯ ತಿಮ್ಮಪ್ಪನ ಅಥವಾ ಕಾಗಿನೆಲೆಯ ಆದಿಕೇಶವನನ್ನು ಆರಾಧಿಸುತ್ತಾರೆ. ಈ ಸಮುದಾಯದ ಭಕ್ತವರ್ಗವನ್ನು ದಾಸಯ್ಯಗಳೆಂದು ಕರೆಯುತ್ತಾರೆ. ಆದರೆ ಇಂತಹ ಕನಕಯ್ಯನ ಕುರುಬರ ಸಂಖ್ಯೆ ತುಂಬಾ ಕಡಿಮೆ ಪ್ರಮಾಣದಲ್ಲಿದೆ. ಇದನ್ನು ಹೊರತುಪಡಿಸಿದರೆ ಅಲೆಮಾರಿ ಕುರುಬ ಸಮುದಾಯದ ದೈವಾಚರಣೆ, ಆರಾಧನ ವಿಧಾನ, ಧಾರ್ಮಿಕ ಮಹಾಪುರುಷರಾದ ಬೀರೇಶ್ವರ, ಮಾಳಿಂಗ ರಾಯ, ರೇವಣ್ಣಸಿದ್ಧೇಶ್ವರ, ಮುಂತಾದವರನ್ನು ಶಿವನ ಅವತಾರಿಗಳೆಂದು ಭಾವಿಸಿಕೊಂಡು ಪೂಜಿಸುತ್ತಾ ಬಂದಿರುವುದು ಇವರು ಶಿವಾರಾಧಕರೆಂದು ಗುರುತಿಸಲು ಸಾಧ್ಯಮಾಡಿದೆ.

**ಪಂಗಡಗಳು**

ಭಾರತೀಯ ಸಮಾಜದಲ್ಲಿ ಪ್ರತಿಯೊಂದು ಸಮುದಾಯವು ಒಟ್ಟಿಗೆ ಇದ್ದುಕೊಂಡು ಬೆಳೆದುಬಂದಿವೆ. ತಮ್ಮದೇ ಸಾಮಾಜಿಕ ಕಟ್ಟುಪಾಡುಗಳೊಂದಿಗೆ ಜೀವಿಸುತ್ತಿವೆ. ಮಾನವನ ದೈಹಿಕ ಮತ್ತು ಬೌದ್ಧಿಕ ವಿಕಾಸವಾಗುತ್ತ ನಡೆದಂತೆಲ್ಲಾ ತನ್ನ ಮನೋಭಾವನೆಗಳಿಗೆ ಅನುಗುಣ ವಾಗಿ ಬದುಕನ್ನು ರೂಪಿಸಿಕೊಂಡ ಹಾಗೂ ತನ್ನ ಮನೋಧರ್ಮಕ್ಕೆ ಒಪ್ಪುವ ಧರ್ಮವನ್ನು ಸ್ವೀಕರಿಸಿ ಒಂದು ಪ್ರತ್ಯೇಕವಾದ ಸಮುದಾಯವನ್ನು ನಿರೂಪಿಸಿಕೊಂಡಿದೆ. ಒಂದೇ ಸಮುದಾಯದಲ್ಲಿ ಆಚಾರ-ವಿಚಾರಗಳು ಭಿನ್ನವಾಗುತ್ತಲೇ ಆ ಸಮುದಾಯದಲ್ಲಿಯೇ ಪಂಗಡ ಹಾಗೂ ಉಪಪಂಗಡಗಳು ಉದ್ಭವಿಸಲು ಕಾರಣವಾಗಿವೆ. ಭಾರತದ ಸಂದರ್ಭದಲ್ಲಿ ಅದರಲ್ಲೂ ವಿಶೇಷವಾಗಿ ಹಿಂದೂ ಧರ್ಮೀಯರಲ್ಲಿ ಸಾಮಾಜಿಕ, ಧಾರ್ಮಿಕ ರೀತಿ-ರಿವಾಜುಗಳು ಹಾಗೂ ರಕ್ತ ಸಂಬಂಧದ ಆಧಾರದಲ್ಲಿ ಒಂದೇ ಸಮುದಾಯ ಅಥವಾ ಜಾತಿಯನ್ನು ವಿವಿಧ ಪಂಗಡ ಹಾಗೂ ಉಪ-ಪಂಗಡಗಳಾಗಿ ವಿಭಜಿಸಲಾಗಿದೆ. ಇದು ಒಂದು ಬಗೆಯ ಸಾಮಾಜಿಕ ವರ್ಗೀಕರಣವಾಗಿದ್ದು, ಜನತೆಯೇ ಪಾಲಿಸುವಂತದ್ದು ಆಗಿದೆ. ಈ ಮಾನದಂಡದ ಆಧಾರದಲ್ಲಿ ಅಲೆಮಾರಿ ಕುರುಬ ಸಮುದಾಯವನ್ನು ಮೂರು ಬಗೆಯಾಗಿ

ವರ್ಗೀಕರಿಸಲಾಗುವುದು. ಅವೆಂದರೆ ಉಣ್ಣೆ ಕಂಕಣದವರು, ಹತ್ತಿಕಂಕಣದವರು ಹಾಗೂ ಹಂಡೆ(ಅಂಡೆ) ಕುರುಬರು.

೧೯೭೭ರ ಬಾಂಬೆ ಗ್ಯಾಜಿಟಿಯರ್‌ದಲ್ಲಿ ಕುರುಬ ಸಮುಹದಾಯವನ್ನು ಈ ರೀತಿ ವಿಂಗಡಿಸಲಾಗಿದೆ. "There are two main division of Kurubas, Hatti Kankana or cotton wristle weavers and Unnikanakanas or wool wristle weavers, who eat toghether but do not inter-marry. In Dharwad two more divisions are found jande and Uarasaliyava. The Hathi Kankanas are divided into Khailari, Sanagar, Hatkar and Hande. Kurubas of these the first three eat together and inter marry"(Enthoven,R E:1977:319).

ಮೂಲತಃ ಮೂರೂ ಪಂಗಡಗಳು ಒಂದೇ ಆಗಿದ್ದು ಕಾಲಾಂತರದಲ್ಲಿ ಭಿನ್ನವೆಂದು ಗುರುತಿಸ ಲಾಗಿದೆ. ಹತ್ತಿಕಂಕಣ ಮತ್ತು ಉಣ್ಣೆಕಂಕಣ ಭಿನ್ನತೆಗೆ ಆದಿಗೊಂಡನ ಕಿರಿಯ ಮಗನಾದ ಪದ್ಮಗೊಂಡನು ಸ್ವಜಾತಿ ಹಾಗೂ ಆರಣ್ಯ ಸ್ತ್ರೀಯರಿಬ್ಬರನ್ನು ವಿವಾಹವಾಗಿರುವುದನ್ನು ಆಧಾರವಾಗಿಟ್ಟುಕೊಂಡು ಭಿನ್ನತೆ ಗುರುತಿಸಲಾಗಿದೆ. ರಾಕ್ಷಸ ಸ್ತ್ರೀಯೊಡನೆ ಮದುವೆ ಅಡವಿಯಲ್ಲಾದ್ದರಿಂದ ಅಡವಿಯಲ್ಲಿ ಹತ್ತಿ ದೊರೆಯದ ಕಾರಣ ಕುರಿಯ ಉಣ್ಣೆ ಬಳಸಲಾಯಿತು. ಹಾಗಾಗಿ ಕುಲದ ಸ್ತ್ರೀಗೆ ಜನಿಸಿದ ಸಂತತಿ ಯವರನ್ನು ಹತ್ತಿಕಂಕಣ ಮತ್ತು ರಾಕ್ಷಸಿ ಸ್ತ್ರೀಗೆ ಜನಿಸಿದ ಸಂತತಿಯವರನ್ನು ಉಣ್ಣೆ ಕಂಕಣದವರೆಂದು ಕರೆಯಲಾಗಿದೆ. ಹಂಡೆಕುರುಬ ಅಥವಾ ಹಂಡೇವಜೀರರು ಇನ್ನೊಂದು ಪಂಗಡ. ಇವರು ಆಕಳು, ಎಮ್ಮೆ ಸಾಕಿಕೊಂಡು ಹಾಲು, ಮೊಸರು, ಹೈನು ಪದಾರ್ಥಗಳನ್ನು ಸಂಗ್ರಹಿಸಿ ಇಡಲು, ವ್ಯವಹಾರ ಮಾಡಲು ಪೊಳ್ಳಾದ ಬಿದರಿನ ಬೊಂಬಿನ ಹಂಡೆಗಳನ್ನು ಉಪಯೋಗಿಸುತ್ತಿದ್ದರು. ಆದ್ದರಿಂದ ಇವರಿಗೆ ಹಂಡೆಕುರುಬರೆಂದು ಹೆಸರು ಬಂದಿದೆ. ಇವರು ಮದುವೆಯಲ್ಲಿ ಹತ್ತಿಯ ನೂಲನ್ನೇ ಕಂಕಣಕ್ಕೆ ಬಳಸುತ್ತಾರಾದರೂ ಇದು ಪ್ರಮುಖವಾಗಿ ಪರಿಗಣಿತವಾಗಿಲ್ಲ. ಈ ರೀತಿ ಹತ್ತಿ ಕಂಕಣ, ಉಣ್ಣೆಕಂಕಣ ಹಾಗೂ ಹಂಡೆಕುರುಬರೆಂಬ ವರ್ಗೀಕರಣಕ್ಕೆ ಪ್ರಮುಖ ಆಕರ ಹಾಲುಮತದ ಪುರಾಣ, ತಗರ ಪವಾಡ ಮೊದಲಾದ ಪುರಾಣ ಕೃತಿಗಳು, ಗ್ರಂಥಗಳು, ಹಳೆಯ ಕಾಲದ ರಾಜ್ಯ ಗ್ಯಾಜಿಟಿಯರ್ ಗಳು, ಕಾವ್ಯ, ಶಾಸನಗಳು, ಸರ್ಕಾರಿ ಆಡಳಿತದ ದಾಖಲಾತಿಗಳು ಇತ್ಯಾದಿ. ರಾಜ್ಯದ ಗ್ಯಾಜಿಟಿಯರ್, ಕೈಫಿಯತ್ತುಗಳು ಮತ್ತು ಕುರುಬರ ಚರಿತ್ರೆಯ ಲೇಖಕರು ಮೂರು ಪಂಗಡಗಳನ್ನು ಸೂಚಿಸಿದರೆ ಹಾಲುಮತ ಪುರಾಣ, ಹಾಲುಮತ ಚರಿತ್ರೆಗಳು ಹತ್ತಿಕಂಕಣ ಮತ್ತು ಉಣ್ಣೆಕಂಕಣವೆಂದು ಮಾತ್ರ ಸೂಚಿಸುತ್ತದೆ.

ಕುರುಬರನ್ನು ಹತ್ತಿಕಂಕಣದವರು, ಉಣ್ಣೆಕಂಕಣದವರು, ಹಂಡೆ ಕುರುಬರೆಂದು ವರ್ಗೀಕರಿಸಲಾಗಿದ್ದು, ಇವರಲ್ಲಿ ಮೊದಲ ಕುರುಬರು ಹತ್ತಿಕಂಕಣದವರೇ ಅಥವಾ ಉಣ್ಣೆ ಕಂಕಣದವರೇ ಎಂಬ ಪ್ರಶ್ನೆ ಉದ್ಭವಿಸುವುದು ಸಾಮಾನ್ಯ. ಪುರಾಣ ಪುಸ್ತಕಗಳಲ್ಲಿ ಹತ್ತಿ ಕಂಕಣದ ಕುರುಬರೆ ಮೊದಲಿಗರೆಂದು ಹೇಳಲ್ಪಟ್ಟಿದೆ. ಕುಟುಂಬದ ಬದುಕಿನ ಚಿತ್ರಣದ ಆಧಾರದ ಅನುಭವದಿಂದ ಹತ್ತಿಕಂಕಣದ ಕುರುಬರೇ ಮೊದಲಿಗರೆಂದು ಹೇಳುವರು. ಆದರೆ ಇದೊಂದು ಕಲ್ಪಿತ ಕಥೆಯಾಗಿರುವುದೆಂದು ವಿದ್ವಾಂಸರು ತರ್ಕಿಸಿದ್ದಾರೆ. ಶಂಬಾ ಜೋಶಿ

ಯವರ ಪ್ರಕಾರ "ಹತ್ತಿಗಿಂತ ಮೊದಲು ಉಣ್ಣೆಯೆಂಬುದು ಗೊತ್ತಿರುವ ಸಂಗತಿ. ಒಕ್ಕಲುತನವು ಗೊತ್ತಾದ ಬಳಿಕ, ಕಾಡು ಹತ್ತಿಯ ಗಿಡಗಳು ದೊರೆತ ನಂತರ ಅದು ಮನುಷ್ಯನಿಗೆ ತಿಳಿಯಿತು. ಅಲ್ಲಿಯವರೆಗೆ ಹಟ್ಟಿಕಾರ, ದನಾಗಾರನಾಗಿದ್ದಾಗ ಸುಲಭವಾಗಿ ಸಿಕ್ಕುವ ಉಣ್ಣೆಯಿಂದ ಬಟ್ಟೆಯನ್ನು ಮಾಡಿಕೊಳ್ಳುವ ಬಗೆಯನ್ನು ಮನುಷ್ಯನು ಮೊಟ್ಟ ಮೊದಲಿಗೆ ಕಲಿತಿರಬೇಕು"(ಜೋಶಿ,ಶಂ ಬಾ:೧೯೭೬:೧೫). ಆದುದರಿಂದ ಮೊಟ್ಟಮೊದಲಿಗೆ ಉಣ್ಣೆಕಂಕಣದವರು, ನಂತರದವರು ಹತ್ತಿ ಕಂಕಣದವರು ಎಂಬುದು ಈ ವಿದ್ವಾಂಸರ ಅಭಿಪ್ರಾಯವಾಗಿದೆ.

"ಕುರುಬರು ಜೈನ, ಬೌದ್ಧ ಧರ್ಮಗಳನ್ನು ಅವಲಂಬಿಸಿ ಕದಂಬ ಪಲ್ಲವರೆಂಬ ಹೆಸರು ಪಡೆದ ಮೇಲೆ 'ಅಹಿಂಸಾ ಪರಮೋಧರ್ಮ' ಎಂಬ ತತ್ವವನ್ನು ಅನುಸರಿಸಿ ಉಣ್ಣೆಯ ಸಂಗ್ರಹದಿಂದ ಪ್ರಾಣಿ ಹಿಂಸೆಯಾಗಬಹುದೆಂಬ ಅಭಿಪ್ರಾಯದಿಂದ ಇವರು ಹತ್ತಿಯ ಕಂಕಣ ವನ್ನು ಕಟ್ಟಲಾರಂಭಿಸಿದರು. ಬೌದ್ಧ, ಜೈನ ಧರ್ಮಗಳಲ್ಲಿ ಈ ಪದ್ಧತಿ ಈಗ ರೂಢಿಯಲ್ಲಿ ರುವುದು. ಉಳಿದವರು ಹತ್ತಿಯ ಕಂಕಣ ಕಟ್ಟುತ್ತಾ ಬಂದರು. ಇದರಿಂದ ಹತ್ತಿಯ ಕಂಕಣದವರು ಮತ್ತು ಉಣ್ಣೆಯ ಕಂಕಣದವರು ಎಂಬ ಎರಡು ಭಾಗಗಳಾಗಿವೆಂದು ಹೇಳುವುದು ತುಂಬಾ ಸಮಂಜಸವಾಗಿದೆ"(ಹನುಮಂತಯ್ಯ, ಪಿಆರ್:೧೯೭೬:೧೫). ಭಾರತದಲ್ಲಿ ಕಾಲ ಕಾಲಕ್ಕೆ ಹಲವಾರು ಧರ್ಮಗಳು ಉದಯಿಸಿವೆ. ಧರ್ಮಗಳ ಸ್ಥಾಪಕರಾದ ಪುಣ್ಯಪುರುಷರು, ಮಹಾತ್ಮರು, ಜನಾಂಗದ ಮೇಲೆ ತಮ್ಮದೆ ಆದ ಪ್ರಭಾವ ಬೀರಿದ್ದಾರೆ. ಹೀಗಾಗಿ ಕುರುಬ ಸಮುದಾಯವರ ಮೇಲೆ ಕಾಲ ಕಾಲಕ್ಕೆ ಬದಲಾಯಿಸಿದ ಧರ್ಮಗಳ ಪ್ರಭಾವ, ಪ್ರೇರಣೆಯಿಂದ ಕಾಲಾಂತದಲ್ಲಿ ಸಾಂಸ್ಕೃತಿಕವಾಗಿ ಬದಲಾವಣೆಗಳಾಗಿವೆ.

ಕುರುಬ ಸಮುದಾಯದಲ್ಲಿ ಹತ್ತಿಕಂಕಣ, ಉಣ್ಣೆಕಂಕಣ ಮತ್ತು ಹಂಡೆಕುರುಬರ ಜೊತೆಗೆ ಒಡೆಯರು, ಬೆಟ್ಟ ಕುರುಬರು, ಜೇನು ಕುರುಬರು, ಒಕ್ಕೆ ಕುರುಬರು ಮೊದಲಾದ ಉಪ ಪಂಗಡಗಳಿವೆ. ಒಡೆಯರು ಕುರುಬರ ಪುರೋಹಿತ ವರ್ಗವಾಗಿದ್ದು ಧಾರ್ಮಿಕ ಹಾಗೂ ಮದುವೆ ಸಂದರ್ಭಗಲ್ಲಿ ಗುರುಗಳಾಗಿ ಕಾರ್ಯನಿರ್ವಹಿಸುತ್ತಾರೆ. ಬೆಟ್ಟ ಕುರುಬರು ಕಾಡಿನಲ್ಲಿ ದೊರೆಯುವ ಉತ್ಪನ್ನಗಳನ್ನು ಸಂಗ್ರಹಿಸುವರು. ಪ್ರಾಣಿಗಳನ್ನು ಬೇಟೆಯಾಡುವುದರ ಜೊತೆಗೆ ಅಂದಂದಿಗೆ ಅಗತ್ಯವಾದ ಆಹಾರವನ್ನು ಸಂಗ್ರಹಿಸಿ ಉಪಜೀವನ ನಡೆಸುತ್ತಾರೆ. ಇವರು ಮೈಸೂರು ಜಿಲ್ಲೆ ಮತ್ತು ಕೊಡಗು ಜಿಲ್ಲೆಯ ದಟ್ಟವಾದ ಅರಣ್ಯ ಪ್ರದೇಶದಲ್ಲಿ ವಾಸಿಸುತ್ತಿದ್ದಾರೆ. ಹೆಸರೇ ಸೂಚಿಸುವಂತೆ ಜೇನು ಸಂಗ್ರಹಣೆಯೇ ಜೇನು ಕುರುಬರ ಕಸುಬು ಆಗಿದೆ. ಅರಣ್ಯದಲ್ಲಿ ದೊರೆಯುವ ಜೇನನ್ನು ಸರ್ಕಾರದ ಅರಣ್ಯ ಇಲಾಖೆಯ ಜೇನು ಸಂಗ್ರಹಕಾರರಿಗೆ ಅಥವಾ ಖಾಸಗಿ ಜನರಿಗೆ ಮಾರಾಟ ಮಾಡಿ ಜೀವನ ನಡೆಸುತ್ತಾರೆ. ಇವರು ಮೈಸೂರು ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಬಂಡೀಪುರ, ಹುಣಸೂರು, ಪಿರಿಯಾಪಟ್ಟಣ, ನಾಗರಹೊಳೆ, ಹೆಗ್ಗಡದೇವನಕೋಟೆ ಅರಣ್ಯಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡು ಬರುತ್ತಾರೆ. ಕೊಳ್ಳೆಗಾಲದ ಕಡೆ ಎಡಗೈಗೆ ಮಾತ್ರ ಬಳೆ ಧರಿಸುವ ಒಂದು ಪಂಗಡವಿದ್ದು. ಅವರಿಗೆ ಒಕ್ಕೆ ಕುರುಬರು ಎಂದು ಕರೆಯಲಾಗುತ್ತದೆ.

## ೨

# ಮೂಲ ಮತ್ತು ಪ್ರಸಾರ

ಅಲೆಮಾರಿ ಕುರುಬ ಸಮುದಾಯದ ಮೂಲವೆಂದರೆ ಮಾನವ ಸಮುದಾಯದ ಮೂಲವೆಂದೇ ಹೇಳಬೇಕಾಗುತ್ತದೆ. ಬೇಟೆಗಾರಿಕೆಯ ಮೂಲ ಸಮುದಾಯಗಳು ಕಾಲಾಂತರ ದಲ್ಲಿ ಪಶುಪಾಲನೆಗೆ ತೊಡಗಿಕೊಂಡು ಅಲ್ಲಿಂದ ಕೃಷಿ, ಕೈಗಾರಿಕೆ ಮತ್ತು ವಾಣಿಜ್ಯ ಕ್ಷೇತ್ರ ಗಳಿಗೆ ಪಸರಿಸಿವೆ. ಮಾನವ ವಿಕಸನದ ಮೊದಲ ಘಟ್ಟವಾದ ಬೇಟೆಗಾರಿಕೆಯಲ್ಲಿಯ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಸಾಕು ಪ್ರಾಣಿಗಳನ್ನು (ಕುರಿ-ಮೇಕೆ) ಸಲಹುತ್ತ ಹಲವರು ಪಶುಪಾಲಕರಾದರು. ಪಶುಪಾಲನೆಯಲ್ಲಿಯ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ಅವರಲ್ಲಿಯೇ ಕೆಲವರು ಕೃಷಿಯತ್ತ ವಾಲಿದರು. ಹೀಗೆಯೇ ಕಾಲಾಂತರದಲ್ಲಿ ನಾನಾ ವೃತ್ತಿಯ ಮಜಲುಗಳು ಆರಂಭವಾದವು. ಅಂತೆಯೇ ಪಶುಪಾಲಕರಲ್ಲಿ ಕುರಿಗಳನ್ನು ಪೋಷಿಸಿಕೊಂಡು ಬಂದ ಕುರುಬರು ಕುರಿಗಳ ಆಹಾರಕ್ಕಾಗಿ ಅಲೆಯಲಾರಂಭಿಸಿದರು. ಹೀಗೆ ಅವರ ಮೂಲವು ಮಾನವ ಸಂಸ್ಕೃತಿಯ ಮೂಲದೊಂದಿಗೆ ಆರಂಭವಾಗುತ್ತದೆ. ಯಾವುದೇ ಒಂದು ಸಮುದಾಯದ ಮೂಲ ವೃತ್ತಿ, ಸಂಪ್ರದಾಯ, ಆಚರಣೆಗಳು ಸ್ಥಳೀಯ ಪರಿಸರ ಮತ್ತು ಜನ ಸಮುದಾಯಗಳ ಪ್ರಭಾವದಿಂದ ಬದಲಾವಣೆಯಾಗಬಹುದು. ಇಂತಹ ಸಂದರ್ಭದಲ್ಲಿ ಸಂಶೋಧಕರಿಗೆ ಸಮುದಾಯದ ಮೂಲವನ್ನು ಗುರುತಿಸುವುದು ಸಮಸ್ಯೆಯಾಗಬಹುದು. ಅಂತಹ ಪರಿಸ್ಥಿತಿಯಲ್ಲಿ ಆ ಸಮುದಾಯದ ಮೂಲಭಾಷೆ, ಕುಲ-ಬಳಿ(ಬೆಡಗು-ಗೋತ್ರ)ಗಳು, ಕುಲಚಿಹ್ನೆಗಳು, ಅಲೆಮಾರಿತನಕ್ಕೆ(ವಲಸೆಗೆ) ಕಾರಣ ಮುಂತಾದವುಗಳನ್ನು ಕುಲಂಕುಶವಾಗಿ ಶೋಧಿಸಿದಾಗ ಆ ಸಮುದಾಯದ ಮೂಲವನ್ನು ಕಂಡುಕೊಳ್ಳಬಹುದು.

ಬಳ್ಳಾರಿ ಜಿಲ್ಲೆಯ ಭೂ ಪ್ರದೇಶದಲ್ಲಿ ಅಲೆದಾಡುತ್ತಿರುವ ಅಲೆಮಾರಿ ಕುರುಬರು ಕರ್ನಾಟಕ ರಾಜ್ಯದ ಬೆಳಗಾಂ ಜಿಲ್ಲೆಯ ವಿವಿಧ ಗ್ರಾಮಗಳಿಂದ ವಲಸೆ ಬಂದವರು. ಅದರಲ್ಲೂ ವಿಶೇಷವಾಗಿ ಚಿಕ್ಕೋಡಿ ತಾಲೂಕಿನವರಾಗಿದ್ದಾರೆ. ಈ ಪ್ರದೇಶಕ್ಕೆ ವಲಸೆ ಬರುವ ಮೊದಲು ವರ್ಷದಲ್ಲಿ ನಾಲ್ಕು ಐದು ತಿಂಗಳು ಅರೆ ಅಲೆಮಾರಿಗಳಾಗಿ ಕುರಿ ಸಂಗೋಪನೆ ಮಾಡುತ್ತಿದ್ದರು. ಅರೆ ಅಲೆಮಾರಿಗಳಾಗಿದ್ದಾಗ ಮಳೆಗಾಲದ ಆರಂಭದ (ಕಾರಹುಣ್ಣಿಮೆ) ದಿನಗಳಲ್ಲಿ ಹಲವರು ಮಹಾರಾಷ್ಟ್ರದ ಸಾಂಗ್ಲಿ, ಕೊಲ್ಹಾಪುರ ಭೂಪ್ರದೇಶದ ಕಡೆ, ಇನ್ನೂ ಕೆಲವರು ಬಾಗಲಕೋಟೆ, ಬಿಜಾಪುರ ಮತ್ತು ಧಾರವಾಡ ಜಿಲ್ಲೆಯ ಭೂಪ್ರದೇಶದ ಕಡೆ

ವಲಸೆ ಹೋಗಿ ಮಳೆಗಾಲದ (ದೀಪಾವಳಿ) ನಂತರ ಸ್ವಗ್ರಾಮಗಳಿಗೆ ಹಿಂತಿರುಗುತ್ತಿದ್ದರು. ಈ ಅವಧಿಯಲ್ಲಿ ವಲಸೆ ಹೋಗಲು ಕಾರಣ ಕುರಿಸಂಗೋಪನೆಗೆ ಯೋಗ್ಯ ಎನ್ನುವುದಕ್ಕಿಂತ (ಯೋಗ್ಯ ಮಳೆ- ೫೪೫ ರಿಂದ ೭೦೦ ಮಿ.ಮೀ. ಆದರೆ ಬೆಳಗಾಂ ಜಿಲ್ಲೆಯ ವಾರ್ಷಿಕ ಮಳೆ ೮೦೮ ಮಿ.ಮೀ. ೨೦೦೫-೦೬ನೇ ಸಾಲಿನಲ್ಲಿ ೧೩೬೬ ಮಿ.ಮೀ.) ಹೆಚ್ಚು ಮಳೆ ಬೀಳುವುದನ್ನು ಕಾಣುತ್ತೇವೆ. ಮಳೆಗಾಲದ ಅವಧಿಯಲ್ಲಿ ವಲಸೆ ಹೋಗಿ ಹಿಂದಿರುಗುತ್ತಿದ್ದ ಅವರು ನಂತರದ ದಿನಗಳಲ್ಲಿ ತಮ್ಮ ಗ್ರಾಮದ ಸುತ್ತಮುತ್ತಲಿನ ಭೂಪ್ರದೇಶದಲ್ಲಿ ಕುರಿ-ಮೇಕೆಗಳನ್ನು ಮೇಯಿಸುತ್ತಿದ್ದರು. ರಾತ್ರಿ ಸಮಯದಲ್ಲಿ ಊರ ಹೊರಗೆ ಬೇಲಿ ಹಾಕಿ ನಿರ್ಮಿಸಿಕೊಂಡ ಕುರಿಹಟ್ಟಿಗಳಲ್ಲಿ ತಬ್ಬುತ್ತಿದ್ದರು. ಆ ದಿನಗಳಲ್ಲಿ ಊರಿನ ಜಮೀನ್ದಾರರು ತಮ್ಮ ಜಮೀನುಗಳಲ್ಲಿ ಕುರಿ ತಬ್ಬಿಸಲು ಅಪೇಕ್ಷಿಸಿದರೆ ರಾತ್ರಿ ವೇಳೆಯಲ್ಲಿ ಕುರಿಗಳನ್ನು ತಬ್ಬುತ್ತಿದ್ದರು. ಕುರಿ ತಬ್ಬಿದ್ದಕ್ಕಾಗಿ ಪ್ರತಿಫಲವಾಗಿ ಜಮೀನ್ದಾರರಿಂದ ಇಂತಿಷ್ಟು ಹಣ ಅಥವಾ ಆಹಾರ ಧಾನ್ಯಗಳನ್ನು ಪಡೆಯುತ್ತಿದ್ದರು. ಪ್ರಸ್ತುತ ದಿನಗಳಲ್ಲಿ ಬೆಳಗಾವಿ ಜಿಲ್ಲೆಯ ಬಹಳಷ್ಟು ಕುರುಬ ಕುಟುಂಬಗಳು ಅರೆ-ಅಲೆಮಾರಿಗಳಾಗಿ ಕುರಿ ಸಂಗೋಪನೆ ಮಾಡುತ್ತಿರುವುದು ಕ್ಷೇತ್ರಕಾರ್ಯದಿಂದ ತಿಳಿದುಬಂದಿದೆ.

ಮೊದಲು ಅರೆ-ಅಲೆಮಾರಿತನಕ್ಕೆ ಸೀಮಿತವಾಗಿದ್ದ ಇವರ ಬದುಕು ಕ್ರಿ.ಶ. ೧೯೬೦ರ ನಂತರದ ದಿನಗಳಲ್ಲಿ ಅಲೆಮಾರಿತನವಾಗಿ ಪರಿವರ್ತನೆಗೊಂಡಿತು. ವರ್ಷದಲ್ಲಿ ೪-೫ ತಿಂಗಳು ವಲಸೆ ಹೋಗಿ ಹಿಂದಿರುಗುತ್ತಿದ್ದ ಅವರ ಬದುಕು ವರ್ಷವಿಡೀ ಅಲೆಮಾರಿತನವಾಗಿ ಮಾರ್ಪಾಡಾಯಿತು. ಕ್ರಿ.ಶ. ೧೯೫೩ರಲ್ಲಿ ತುಂಗಭದ್ರ ಆಣೆಕಟ್ಟು ನಿರ್ಮಾಣ ಪೂರ್ಣಗೊಂಡಿತು. ಈ ಆಣೆಕಟ್ಟಿನಿಂದ ಕರ್ನಾಟಕದಲ್ಲಿ ಪ್ರಮುಖವಾಗಿ ಬಳ್ಳಾರಿ ಜಿಲ್ಲೆಯ ಹೊಸಪೇಟೆ, ಬಳ್ಳಾರಿ ಮತ್ತು ಸಿರುಗುಪ್ಪ ತಾಲುಕುಗಳು, ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕು ಮತ್ತು ಕಾರಟಗಿ ಪಟ್ಟಣದ ಸುತ್ತಮುತ್ತಲಿನ ಭೂಪ್ರದೇಶ. ರಾಯಚೂರು ಜಿಲ್ಲೆಯ ಸಿಂಧನೂರು, ಮಸ್ಕಿ, ಮಾನ್ವಿ ತಾಲೂಕುಗಳು ಹಾಗೂ ಆಂಧ್ರ ಪ್ರದೇಶದ ಕರ್ನೂಲು ಮತ್ತು ಅನಂತಪುರ ಜಿಲ್ಲೆಗಳು ನೀರಾವರಿ ಸೌಲಭ್ಯ ಪಡೆದವು. ಈ ಆಣೆಕಟ್ಟಿನಿಂದ ಕರ್ನಾಟಕದಲ್ಲಿ ೨೨೭ ಕಿ.ಮೀ. ಉದ್ದದ ಎಡದಂಡೆ ಕಾಲುವೆಯಿಂದ ಸುಮಾರು ೨,೪೫,೯೦೦ ಹೆಕ್ಟೇರು ಭೂಮಿ ಮತ್ತು ೩೫೧ ಕಿ.ಮೀ. ಉದ್ದದ ಬಲದಂಡೆ ಕಾಲುವೆಯಿಂದ ೩೭,೫೦೪ ಹೆಕ್ಟೇರು ಭೂಮಿ ನೀರಾವರಿಗೆ ಒಳಪಟ್ಟಿದೆ. ೧೫ ಕಿ.ಮೀ ಉದ್ದದ ಎಡ ಮೇಲ್ದಂಡೆ ಕಾಲುವೆಯಿಂದ ೪೬೯ ಹೆಕ್ಟೇರು ಹಾಗೂ ೧೦೦ ಕಿ.ಮೀ ಉದ್ದದ ಬಲ ಮೇಲ್ದಂಡೆ ಕಾಲುವೆಯಿಂದ ೮೦೯೧೦ ಹೆಕ್ಟರು ಭೂಮಿ, ನೀರಾವರಿ ಸೌಲಭ್ಯ ಪಡೆದಿದೆ. ಈ ಭೂಮಿಗಳು ನೀರಾವರಿ ಸೌಲಭ್ಯ ಪಡೆದಿದ್ದರಿಂದ ರೈತರು ವರ್ಷದಲ್ಲಿ ಒಂದು ಅಥವಾ ಎರಡು ನೀರಾವರಿ ಬೆಳೆಗಳನ್ನು ಬೆಳೆಯಲು ಆರಂಭಿಸಿದರು. ಇದರ ಪರಿಣಾಮವಾಗಿ ಈ ಭೂಮಿಗಳಲ್ಲಿ ವರ್ಷಪೂರ್ತಿ ಹಸಿರು ಮೇವು ಮತ್ತು ನೀರು ದೊರೆಯುವಂತಾಯಿತು. ಇದನ್ನರಿತ ಅಲೆಮಾರಿ ಕುರುಬರು ತಮ್ಮ ಜೀವನೋಪಾಯಕ್ಕಾಗಿ ಕುರಿ ಹಿಂಡುಗಳನ್ನು ಕಟ್ಟಿಕೊಂಡು ಕುಟುಂಬ ಸಮೇತ ಮೂಲಸ್ಥಳವನ್ನು ತೊರೆದು ಬಳ್ಳಾರಿ ಜಿಲ್ಲೆಯ ನೀರಾವರಿ ಭೂಪ್ರದೇಶಗಳ ಕಡೆ ವಲಸೆ ಬಂದರು. ಮಳೆಗಾಲದ ಅವಧಿಯಲ್ಲಿ ಗುಡ್ಡ, ಬಯಲು ಪ್ರದೇಶ ಮತ್ತು ಗಟ್ಟಿ

ಪ್ರದೇಶಗಳಲ್ಲಿ ಅಲೆದಾಡಿ ಕುರಿ ಸಂಗೋಪನೆ ಮಾಡಿದರೆ ಮಳೆಗಾಲದ ನಂತರ ದಿನಗಳಲ್ಲಿ ನೀರಾವರಿ ಮತ್ತು ಬಯಲು ಪ್ರದೇಶಗಳಲ್ಲಿ ಅಲೆದಾಡುತ್ತಾ ಜೀವನ ಸಾಗಿಸುತ್ತಾರೆ.

ಜನಸಂಖ್ಯೆ

ನೈಸರ್ಗಿಕ ಸಂಪನ್ಮೂಲಗಳ ಬಳಕೆಗೆ ಶ್ರಮ (ಜನಸಂಖ್ಯೆ) ಅತ್ಯಗತ್ಯ. ಶ್ರಮವು ದೈಹಿಕ ಅಥವಾ ಮಾನಸಿಕವಾಗಬಹುದು ಅಥವಾ ಎರಡೂ ಆಗಬಹುದು. ಅದು ಒಂದು ಉತ್ಪಾದನಾಂಗವಾಗಿ ಆರ್ಥಿಕ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರ ವಹಿಸುವುದರಿಂದ ಮಾನವ ಸಂಪನ್ಮೂಲ ಎನಿಸಿಕೊಂಡಿದೆ. ಆಡಂಸ್ಮಿತ್ ತನ್ನ 'ರಾಷ್ಟ್ರಗಳ ಸಂಪತ್ತು' ಪುಸ್ತಕದಲ್ಲಿ "ಶ್ರಮವು ರಾಷ್ಟ್ರದ ಸಂಪತ್ತಿನ ನಿರ್ಧಾರಕ ಅಂಶ"(ಡಾ. ಸಿ.ಕೆ. ರೇಣುಕಾರ್ಯ:೨೦೦೭:೬೭) ಎಂದು ಹೇಳಿದ್ದಾರೆ. ಗಾಂಧೀಜಿಯವರು "ಜನರೇ ಒಂದು ದೇಶದ ನಿಜವಾದ ಆಸ್ತಿ ಅಥವಾ ಸಂಪತ್ತು; ಯಾವ ದೇಶ ಗರಿಷ್ಠ ಸಂಖ್ಯೆಯ ಸಂತೋಷಭರಿತ ಜನರನ್ನು ಸಲಹುತ್ತಿರುವುದೋ ಅದೇ ಸಂಪದ್ಭರಿತ ದೇಶ"(ಎಚ್ಬಾರ್ಕೆ:೨೦೦೩:೧೧೦) ಎಂದು ಹೇಳಿದ್ದಾರೆ. ಮನುಷ್ಯನಿಲ್ಲ ದಿದ್ದರೆ ಅಭಿವೃದ್ಧಿ ಸಾಧ್ಯವಿಲ್ಲ. ಇದೊಂದು ನಿರಂತರ ಪ್ರಕ್ರಿಯೆ. ಕುರಿ ಸಾಕಾಣಿಕೆಯು ಶ್ರಮಸಾಂದ್ರ ಕಸುಬಾಗಿದೆ. ಕಸುಬನ್ನು ಮುಂದುವರಿಸಿಕೊಂಡು ಹೋಗಲು ಅಧಿಕ ಸಂಖ್ಯೆಯ ಶ್ರಮಗಾರ ಅವಶ್ಯಕತೆ ಇದೆ. ಆದ್ದರಿಂದಲೇ ಅಲೆಮಾರಿ ಕುರುಬ ಕುಟುಂಬದ ಸ್ತ್ರೀ ಪುರುಷರೆಲ್ಲರು ಈ ವೃತ್ತಿಯಲ್ಲಿ ತೊಡಗಿಸಿಕೊಂಡಿರುವುದನ್ನು ಕಾಣುತ್ತೇವೆ.

ಪ್ರಸ್ತುತ ಅಧ್ಯಯನದ ಅವಧಿಯಲ್ಲಿ ಕುರಿಸಂಗೋಪನೆಗಾಗಿ ಬಳ್ಳಾರಿ ಜಿಲ್ಲೆಯ ಭೂಪ್ರದೇಶದಲ್ಲಿ ಅಲೆದಾಡುತ್ತಿರುವ ಅಲೆಮಾರಿ ಕುರುಬ ಕುಟುಂಬಗಳ ಜನಸಂಖ್ಯೆಯನ್ನು ಈ ಕೆಳಗಿನ ಕೋಷ್ಟಕದಲ್ಲಿ ನೀಡಲಾಗಿದೆ.

ಕೋಷ್ಟಕ ೨.೧ ಅಲೆಮಾರಿ ಕುರುಬರ ಜನಸಂಖ್ಯೆ ಪ್ರಮಾಣ

| ಸಂ | ತಾಲೂಕು | ಕುಟುಂಬ | ಗಂಡು | ಹೆಣ್ಣು | ಒಟ್ಟು |
|---|---|---|---|---|---|
| ೧ | ಅಥಣಿ | ೧ | ೪ | ೩ | ೭ |
| ೨ | ಖಾನಾಪುರ | ೧೧ | ೩೪ | ೨೯ | ೬೩ |
| ೩ | ಗೋಕಾಕ್ | ೪ | ೧೧ | ೧೪ | ೨೫ |
| ೪ | ಚಿಕ್ಕೋಡಿ | ೩೦೭ | ೧೦೦೩ | ೯೦೨ | ೧೯೦೫ |
| ೫ | ಬೈಲಹೊಂಗಲ | -- | -- | -- | -- |
| ೬ | ಬೆಳಗಾವಿ | ೫೧ | ೧೨೭ | ೧೧೫ | ೨೪೨ |
| ೭ | ರಾಮದುರ್ಗ | ೨ | ೬ | ೫ | ೧೧ |
| ೮ | ರಾಯಬಾಗ್ | ೫ | ೧೫ | ೧೬ | ೩೧ |
| ೯ | ಸವದತ್ತಿ | ೧ | ೨ | ೩ | ೫ |
| ೧೦ | ಹುಕ್ಕೇರಿ | ೪ | ೧೦ | ೧೧ | ೨೧ |
| | ಒಟ್ಟು | ೩೮೬ | ೧೨೧೨ | ೧೯೮ | ೨೩೧೦ |

೨.೧ ಕೋಷ್ಟಕ ಮೂಲಕ ಬೆಳಗಾಂ ಜಿಲ್ಲೆಯ ವಿವಿಧ ತಾಲೂಕುಗಳಿಂದ ವಲಸೆ ಬಂದ ಅಲೆಮಾರಿ ಕುರುಬ ಕುಟುಂಬಗಳು ೩೮೭. ಆ ಕುಟುಂಬಗಳ ಒಟ್ಟು ಜನಸಂಖ್ಯೆ ೨,೩೧೦ ಆಗಿದ್ದು, ಅದರಲ್ಲಿ ೧,೨೧೨ ಪುರುಷರು ಮತ್ತು ೧,೦೯೮ ಸ್ತ್ರೀಯರು ಇದ್ದಾರೆ. ಇವರ ಲಿಂಗಾನುಪಾತ ೯೦೬ ಇರುವುದು ಗೊತ್ತಾಗುತ್ತದೆ.

ವಿವಿಧ ತಾಲೂಕುಗಳಿಂದ ವಲಸೆ ಬಂದ ಅಲೆಮಾರಿ ಕುರುಬ ಕುಟುಂಬಗಳ ಜನಸಂಖ್ಯೆಯನ್ನು ತೌಲನಿಕವಾಗಿ ನೋಡಿದಾಗ ಚಿಕ್ಕೋಡಿ ತಾಲೂಕಿನಿಂದ ವಲಸೆ ಬಂದವರ ಸಂಖ್ಯೆ ಗಣನೀಯವಾಗಿದೆ. ಇವರ ಒಟ್ಟು ಜನಸಂಖ್ಯೆ ೧೯೦೬ (ಶೇ. ೮೨.೫೨ ರಷ್ಟು) ಅದರಲ್ಲಿ ಪುರುಷರು ೧೦೦೩ (ಶೇ. ೫೨.೬ ರಷ್ಟು) ಹಾಗೂ ಸ್ತ್ರೀಯರು ೯೦೨ (ಶೇ. ೪೭.೩೪ ರಷ್ಟು) ಇದ್ದು ಪ್ರಥಮ ಸ್ಥಾನದಲ್ಲಿದೆ. ಬೆಳಗಾಂ ತಾಲೂಕಿನ ಒಟ್ಟು ಜನಸಂಖ್ಯೆ ೨೪೨ (ಶೇ. ೧೦.೦೪). ಅದರಲ್ಲಿ ಪುರುಷರು ೧೨೭ (ಶೇ. ೫೨.೪೭) ಮತ್ತು ಸ್ತ್ರೀಯರು ೧೧೫ (ಶೇ. ೪೭.೫೨) ಜನರು ಇದ್ದು ದ್ವಿತೀಯ ಸ್ಥಾನದಲ್ಲಿದೆ. ಖಾನಪುರ ತಾಲೂಕಿನ ಒಟ್ಟು ಜನಸಂಖ್ಯೆ ೬೩ (ಶೇ. ೨.೭೨). ಅದರಲ್ಲಿ ಪುರುಷರು ೩೪ (ಶೇ. ೫೩.೯೭) ಮತ್ತು ಸ್ತ್ರೀಯರು ೨೯ (ಶೇ. ೪೬.೦೩). ಜನರು ಇದ್ದು ತೃತೀಯ ಸ್ಥಾನದಲ್ಲಿದೆ. ರಾಯಬಾಗ್ ತಾಲೂಕಿನ ಒಟ್ಟು ಜನಸಂಖ್ಯೆಯು ೩೧ (ಶೇ. ೧.೩೪). ಅದರಲ್ಲಿ ಪುರುಷರು ೧೫ (ಶೇ. ೪೮) ಸ್ತ್ರೀಯರು ೧೬ (ಶೇ. ೫೧.೬) ಜನರಿದ್ದು ನಂತರದ ಸ್ಥಾನವನ್ನು ಪಡೆದುಕೊಂಡಿದೆ. ಇತರೆ ತಾಲೂಕುಗಳಾದ ಗೋಕಾಕ್, ಹುಕ್ಕೇರಿ, ರಾಮದುರ್ಗ, ಅಥಣಿ, ಮತ್ತು ಸವದತ್ತಿಗಳು ಕ್ರಮವಾಗಿ ಇಳಿಕೆಯ ಸ್ಥಾನದಲ್ಲಿ ಜನಸಂಖ್ಯೆಯನ್ನು ಹೊಂದಿವೆ. ಬೈಲಹೊಂಗಲ ತಾಲೂಕಿನಿಂದ ಪ್ರಸ್ತುತ ಅಧ್ಯಯನದ ಅವಧಿಯಲ್ಲಿ ಯಾರು ವಲಸೆ ಬಂದಿಲ್ಲದಿರುವುದನ್ನು ಕೋಷ್ಟಕದಲ್ಲಿ ಕಾಣಬಹುದಾಗಿದೆ.

## ವಲಸೆಗೆ ಕಾರಣಗಳು

ಮಾನವ ತನ್ನ ಜೀವನೋಪಾಯಕ್ಕಾಗಿ ಕೈಗೊಂಡ ವೃತ್ತಿಯ ಆಧಾರದ ಮೇಲೆ ಆರ್ಥಿಕತೆಯನ್ನು ಕೃಷಿವಲಯ, ಕೈಗಾರಿಕಾವಲಯ ಮತ್ತು ಸೇವಾವಲಯಗಳೆಂದು ವಿಂಗಡಿಸಲಾಗಿದೆ. ಹೀಗೆ ವಿವಿಧ ವಲಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡ ಜನ ಸಮುದಾಯಗಳು ಒಂದು ಕಡೆ ನೆಲೆನಿಂತು ನಾಗರಿಕ ಸೌಲಭ್ಯಗಳನ್ನು ರೂಪಿಸಿಕೊಳ್ಳುತ್ತಲೆ ಮಾನವ ಜೀವನ ಮೈಪಡೆದುಕೊಂಡಿದೆ. ಮೂಲತಃ ಅಲೆಮಾರಿ ಗಳಾದ ಅಲೆಮಾರಿ ಕುರುಬರು ಕಾಲಾಂತರದಲ್ಲಿ ನೆಲೆನಿಂತರು. ಹಟ್ಟಿ ಅಥವಾ ಗ್ರಾಮಗಳಲ್ಲಿ ಮನೆಕಟ್ಟಿಕೊಂಡು ಕುರಿಗಳ ಸಂಗೋಪನೆಯೆ ಜೀವನ ವಿಧಾನವಾಯಿತು. ಅಲೆಮಾರಿ ಕುರುಬರು ವರ್ಷದ ಮಳೆಗಾಲದಲ್ಲಿ ನಾಲ್ಕೈದು ತಿಂಗಳು ಸ್ವಗ್ರಾಮ ಬಿಟ್ಟು ಕುಟುಂಬ ಸಮೇತ ಗುಡ್ಡಗಾಡು ಅಥವಾ ಗಟ್ಟಿಪ್ರದೇಶವಿರುವ ಕಡೆ ವಲಸೆ ಹೋಗಿ ಹಿಂದಿರುಗುತ್ತಿದ್ದರು. ವರ್ಷದ ನಾಲ್ಕೈದು ತಿಂಗಳು ಅರೆ-ಅಲೆಮಾರಿಯಾಗಿದ್ದ ಇವರ ಬದುಕು ಸ್ಥಿತ್ಯಂತರಗಳಿಗೊಳಗಾಗಿ ಅಲೆಮಾರಿತನವಾಗಿ ಮಾರ್ಪಟ್ಟಿತು. ಈ ರೀತಿ ಮಾರ್ಪಡಲು ಹಲವಾರು ಕಾರಣಗಳುಂಟು.

ಬೆಳಗಾವಿ ಜಿಲ್ಲೆ ವಿಶೇಷವಾಗಿ ಚಿಕ್ಕೋಡಿ ತಾಲೂಕಿನಲ್ಲಿ ಕುರಿಸಂಗೋಪನೆ ಮಾಡುವ ಕುಟುಂಬಗಳ ಸಂಖ್ಯೆ ಹೆಚ್ಚಾಗಿವೆ.

• ಬೆಳಗಾವಿ ಜಿಲ್ಲೆ ಅರೆಮಲೆನಾಡು ಭೂಪ್ರದೇಶವಾಗಿದೆ. ಮಳೆಗಾಲದಲ್ಲಿ ಅತಿ ಹೆಚ್ಚು ಅಂದರೆ ಕುರಿ ಸಂಗೋಪನೆಗೆ ಯೋಗ್ಯ ಎನ್ನುವುದಕ್ಕಿಂತ ಹೆಚ್ಚು (೨೦೦೫ರಲ್ಲಿ ೧೩೬೬ ಮೀ.ಮಿ. ಮಳೆ ಆಗುತ್ತದೆ) ಮಳೆ ಬೀಳುತ್ತದೆ. ಆ ಪ್ರದೇಶದಲ್ಲಿ ಮಳೆ ಬೀಳಲು ಪ್ರಾರಂಭಿಸಿದರೆ ವಾರ, ಹದಿನೈದು ಅಥವಾ ತಿಂಗಳು ಗಟ್ಟಲೆ ನಿರಂತರವಾಗಿ ಮಳೆ ಬೀಳುತ್ತಿರುತ್ತದೆ. ಇಂಥ ಸಂದರ್ಭದಲ್ಲಿ ಕುರಿಗಳನ್ನು ಮೇಯಿಸುವುದು ಹಾಗೂ ಅವುಗಳ ಆರೈಕೆ ಮಾಡುವುದು ತುಂಬಾ ಕಷ್ಟವಾಗುತ್ತದೆ.

• ಬೆಳಗಾವಿ ಜಿಲ್ಲೆಯು ೩,೭೨,೪೯೨ ಹೆಕ್ಟೇರ್ ಭೂಪ್ರದೇಶ ನೀರಾವರಿ ಸೌಲಭ್ಯ ಹೊಂದಿದೆ. "ಆ ಪ್ರದೇಶದಲ್ಲಿ ನೀರಾವರಿ ಹಾಗೂ ಇತರೆ ಬೆಳೆಗಳನ್ನು ಬೆಳೆದರೂ ಕಬ್ಬು ಮತ್ತು ಹೊಗೆಸೊಪ್ಪನ್ನು ಹೆಚ್ಚಾಗಿ ಬೆಳೆಯಲಾಗುತ್ತದೆ. ಕಬ್ಬು ವಾರ್ಷಿಕ ಬೆಳೆಯಾದ ಕಾರಣ ವರ್ಷದಲ್ಲಿ ಕೆಲವೇ ದಿನಗಳು ಮಾತ್ರ ಕುರಿಗಳಿಗೆ ಮೇವು ದೊರೆಯುತ್ತದೆ. ಹೊಗೆಸೊಪ್ಪು ಬೆಳೆಯುವ ಹೊಲಗದ್ದೆಗಳಲ್ಲಿ ಹುಲ್ಲು ಅಥವಾ ಕಳೆ ಬೆಳೆಯುವುದಿಲ್ಲ. ಪರಿಣಾಮವಾಗಿ ಕುರಿ-ಮೇಕೆಗಳಿಗೆ ಮೇವಿನ ಕೊರತೆ ಉಂಟಾಗಿದೆ" (ಮಾಹಿತಿದಾರ: ಅಪ್ಪಣ್ಣ ಪೂಜಾರಿ: ಸೌಂದಲಗ).

• ಅಲೆಮಾರಿ ಕುರುಬರು ವಲಸೆ ಬಂದು ಅಲೆದಾಡುವ ಭೂಪ್ರದೇಶಗಳಲ್ಲಿ ಅಂದರೆ ಬಳ್ಳಾರಿ (೬೩೫ ಮಿ.ಮೀ.) ರಾಯಚೂರು (೬೩೧ ಮಿ.ಮೀ.) ಕೊಪ್ಪಳ (೫೭೨ ಮಿ.ಮೀ.) ದಾವಣಗೆರೆ (೬೪೯ ಮಿ.ಮೀ.) ಗದಗ (೬೧೨ ಮಿ.ಮೀ.) ಹಾವೇರಿ (೭೫೩ ಮಿ.ಮೀ.) ಧಾರವಾಡ (೭೭೨ ಮಿ.ಮೀ.) ಜಿಲ್ಲೆಗಳಲ್ಲಿ ಮಳೆಯ ಪ್ರಮಾಣ ಕಡಿಮೆ ಇದೆ" ಹವಾಮಾನ ಉಷ್ಣತೆಯಿಂದ ಕೂಡಿರುವುದರಿಂದ ಕುರಿ ಸಂಗೋಪನೆಗೆ ಯೋಗ್ಯವಾಗಿದೆ. ಈ ಪ್ರದೇಶಗಳಲ್ಲಿ ಹೆಚ್ಚಾಗಿ ವಾರ್ಷಿಕ ಬೆಳೆಗಳನ್ನು ಬೆಳೆಯದೆ ಅಲ್ಪಕಾಲಿಕ ಬೆಳೆಗಳನ್ನು ಬೆಳೆಯಲಾಗುತ್ತದೆ. ಈ ಬೆಳೆಗಳು ನಾಟಿ ಮಾಡಿದ ೩ ರಿಂದ ೬ ತಿಂಗಳೊಳಗೆ ಕಟಾವು ಆಗುತ್ತವೆ. ಇವು ಮುಂಗಾರು ಮತ್ತು ಹಿಂಗಾರು ಬೆಳೆಗಳಾದ್ದರಿಂದ ಕುರಿ-ಮೇಕೆ ಮೇಯಿಸಲು ವಿಶಾಲ ಭೂಪ್ರದೇಶ ದೊರೆಯುತ್ತದೆ. ಬಳ್ಳಾರಿ, ರಾಯಚೂರು, ಕೊಪ್ಪಳ, ದಾವಣಗೆರೆ, ಶಿವಮೊಗ್ಗ ಜಿಲ್ಲೆಗಳಲ್ಲಿ ತುಂಗಾಭದ್ರ ನದಿಯಿಂದ ನೀರಾವರಿ ಸೌಲಭ್ಯ ಪಡೆದ ಪರಿಣಾಮವಾಗಿ ಬೇಸಿಗೆ ಕಾಲದಲ್ಲೂ ಆ ಪ್ರದೇಶಗಳಲ್ಲಿ ಕುರಿ-ಮೇಕೆಗಳಿಗೆ ಸಾಕಷ್ಟು ಮೇವು-ನೀರು ದೊರೆಯುತ್ತದೆ.

**ವಲಸೆ ಮಾರ್ಗ : ಪ್ರಸರಣ : ಗುರುತಿಸುವಿಕೆ**

**ವಲಸೆ ಮಾರ್ಗ :** ಅಲೆಮಾರಿ ಕುರುಬರು ಬಳ್ಳಾರಿ ಜಿಲ್ಲೆಯ ಭೂಪ್ರದೇಶಕ್ಕೆ ವಲಸೆ ಬರಲು ಎರಡು ಮಾರ್ಗಗಳನ್ನು ಬಳಸಿಕೊಂಡಿದ್ದಾರೆ. ಕೆಲವರು ಗೋಕಾಕ್ ಮಾರ್ಗವಾಗಿ ಇನ್ನೂ ಕೆಲವರು ಬೆಳಗಾಂ ಮಾರ್ಗವಾಗಿ ವಲಸೆ ಬಂದಿರುವುದು ತಿಳಿದುಬಂದಿದೆ. ಎರಡು ಮಾರ್ಗಗಳ ಮೂಲಕ ವಲಸೆ ಬಂದಿರುವ ಇವರು ಮುಖ್ಯ ರಸ್ತೆಗಳ ಮೂಲಕ ಬಾರದೆ,

ಕಲ್ಲು-ಮುಳ್ಳು, ತಗ್ಗು-ದಿಣ್ಣೆಗಳಿಂದ ಕೂಡಿದ ಕಾಲುದಾರಿ ಹಾಗೂ ಹೊಲ-ಗದ್ದೆಗಳನ್ನು ದಾರಿಯಾಗಿ ಬಳಸಿಕೊಂಡು ಬಂದವರಾಗಿದ್ದಾರೆಂಬುದು ಗೊತ್ತಾಗಿದೆ. ವಲಸೆಯ ಪ್ರದೇಶವನ್ನು ಒಂದು ಅಥವಾ ಎರಡು ದಿನಗಳಲ್ಲಿ ತಲುಪದೆ, ದಿನಾಲು ೧೫ ರಿಂದ ೨೦ ಕಿ.ಮೀ. ದಾರಿ ಸಾಗಿ, ಸಾಯಂಕಾಲವಾಗುತ್ತಿದ್ದಂತೆ ದಾರಿಯಲ್ಲಿ ಬರುವ ಗ್ರಾಮದ ಹತ್ತಿರ ಗುಡಾರವನ್ನು ಹೂಡಿ ಕುರಿತಬ್ಬುವುದು, ಮರುದಿನ ಬೆಳಿಗ್ಗೆ ೮ ಗಂಟೆಯ ನಂತರ ಕೌಟುಂಬಿಕ ಸಾಮಾನುಗಳನ್ನು ಕುದುರೆಯ ಮೇಲೆ ಹೇರಿಕೊಂಡು ಕುರಿಗಳನ್ನು ಮೇಯಿಸುತ್ತಾ ದಾರಿ ಸಾಗುವುದು ತಿಳಿದುಬಂದಿದೆ. ದಿನಾಲು ದಾರಿ ನಡೆದು ಕುರಿ-ಮೇಕೆಗಳು ದಣಿದಿದ್ದರೆ ಒಂದೆರಡು ದಿನ ಒಂದೇ ಸ್ಥಳದಲ್ಲಿ ಕುರಿ ತಬ್ಬುವುದು, ಕುರಿಗಳ ಚಟುವಟಿಕೆಯಿಂದ ಅವು ವರ್ತಿಸುವುದನ್ನು ಗಮನಿಸಿ ಮತ್ತೆ ವಲಸೆ ಮಾರ್ಗ ಹಿಡಿದು ಸಾಗುವುದು ಕ್ಷೇತ್ರಕಾರ್ಯದಿಂದ ತಿಳಿದುಬಂದಿದೆ. ಈ ಪ್ರಕ್ರಿಯೆ ವಲಸೆ ಹೋಗಲು ಬಯಸಿರುವ ಪ್ರದೇಶ ಮುಟ್ಟುವವರೆಗೆ ಸಾಗಿಬಂದಿದೆ.

ಬಳ್ಳಾರಿ ಜಿಲ್ಲೆಯ ಭೂಪ್ರದೇಶಕ್ಕೆ ವಲಸೆ ಬಂದಿರುವ ಅಲೆಮಾರಿ ಕುರುಬರು ಸಾಮಾನ್ಯವಾಗಿ ಈ ಮುಂದೆ ತಿಳಿಸಿರುವ ಎರಡು ಮಾರ್ಗಗಳನ್ನು ಬಳಸಿಕೊಂಡು ವಲಸೆ ಬಂದಿರುವುದು ಕ್ಷೇತ್ರಕಾರ್ಯದಿಂದ ತಿಳಿದುಬಂದಿದೆ.

**ವಲಸೆ ಮಾರ್ಗ - ಒಂದು**

ಚಿಕ್ಕೋಡಿ
↓
೧. ಸಂಕೇಶ್ವರ
↓
೨. ಹುಕ್ಕೇರಿ
↓
೩. ಗೋಕಾಕ್ — ಬೆಳಗಾವಿ ಜಿಲ್ಲೆ
↓
೪. ಜಮುನಾಲ್
↓
೫. ಯರಗಟ್ಟಿ
↓
೬. ಸವದತ್ತಿ
↓
ನವಲಗುಂದ — ಧಾರವಾಡ ಜಿಲ್ಲೆ
↓

**ವಲಸೆ ಮಾರ್ಗ - ಎರಡು**

ಚಿಕ್ಕೋಡಿ
↓
೧. ಸಂಕೇಶ್ವರ
↓
೨. ಹುಕ್ಕೇರಿ
↓
೩. ಸುತಕಟ್ಟಿ — ಬೆಳಗಾವಿ ಜಿಲ್ಲೆ
↓
೪. ಬೆಳಗಾವಿ
↓
೫. ಬೈಲಹೊಂಗಲ
↓
೬. ದೊಡ್ಡವಾಡ
↓
೭. ಧಾರವಾಡ — ಧಾರವಾಡ ಜಿಲ್ಲೆ
↓
೮. ಹುಬ್ಬಳಿ

ಅಣ್ಣಿಗೇರಿ ↓ ಗದಗ ↓ ಹರಳಾಪುರ — ಗದಗ ಜಿಲ್ಲೆ

↓

ಹಲಗೇರಿ ↓ ಕೊಪ್ಪಳ ↓ ಗಂಗಾವತಿ — ಕೊಪ್ಪಳ ಜಿಲ್ಲೆ

↓

ಕಂಪ್ಲಿ ↓ ಕಮಲಾಪುರ — ಬಳ್ಳಾರಿ ಜಿಲ್ಲೆ

↓

ಸವಣೂರು — ಹಾವೇರಿ ಜಿಲ್ಲೆ

↓

ಶಿರಹಟ್ಟಿ ↓ ಮುಂಡರಗಿ — ಗದಗ ಜಿಲ್ಲೆ

↓

ಹೂವಿನ ಹಡಗಲಿ ↓ ಹೊಳಗುಂದಿ ↓ ಮೋರಗೇರಿ ↓ ಹಗರಿಬೊಮ್ಮನಹಳ್ಳಿ ↓ ಹೊಸಪೇಟೆ — ಬಳ್ಳಾರಿ ಜಿಲ್ಲೆ

↓

ಈ ಸ್ಥಳಗಳಿಗೆ ತಲುಪಿದ ನಂತರ ಋತುಮಾನಕ್ಕನುಗುಣವಾಗಿ ಜಿಲ್ಲೆಯಾದ್ಯಂತ ಅಲೆದಾಡುತ್ತಿದ್ದಾರೆ. ವಲಸೆ ಬಂದ ಮಾರ್ಗಗಳನ್ನು ಮುಂದಿನ ನಕ್ಷೆಯಲ್ಲಿ ಕಾಣಬಹುದಾಗಿದೆ.

ಮಳೆಗಾಲದ ದಿನಗಳಲ್ಲಿ ಈ ಊರಿನ ಸುತ್ತಮುತ್ತಲಿನ ಗ್ರಾಮಗಳ ಗುಡ್ಡಗಾಡು ಪ್ರದೇಶಗಳಲ್ಲಿ ಕುರಿ ಸಂಗೋಪನೆ ಮಾಡಿ ನಂತರ ಹೊಲ-ಗದ್ದೆಗಳಲ್ಲಿ ಅಲೆದಾಡಿ ಕುರಿ ಸಂಗೋಪನೆ ನಡೆಸುತ್ತಾರೆ.

ಪ್ರಸರಣ : ಬಳ್ಳಾರಿ ಜಿಲ್ಲೆಯ ಭೂಪ್ರದೇ ಶಕ್ಕೆ ವಲಸೆ ಬಂದಿರುವ ಅಲೆಮಾರಿ ಕುರುಬರು ಹೊಸಪೇಟೆ, ಸಂಡೂರು, ಹೂವಿನ ಹಡಗಲಿ, ಬಳ್ಳಾರಿ ಮತ್ತು ಸಿರುಗುಪ್ಪ ತಾಲೂಕುಗಳಲ್ಲಿ ಹೆಚ್ಚಾಗಿ ಅಲೆದಾಡುತ್ತಾ ಕುರಿ ಸಂಗೋಪನೆ ಮಾಡುತ್ತಾರೆ. ಉಳಿದ ತಾಲೂಕುಗಳಾದ ಕೂಡ್ಲಿಗಿ ಮತ್ತು ಹಗರಿಬೊಮ್ಮನಹಳ್ಳಿಗಳ ಕಡೆಗೆ ವಲಸೆ ಹೋಗುವುದು ವಿರಳ. ಕಾರಣ ಈ ತಾಲೂಕುಗಳಲ್ಲಿ ಹೆಚ್ಚು ಕುಟುಂಬಗಳು ಕುರಿ ಸಂಗೋಪನೆಯಲ್ಲಿ ತೊಡಗಿವೆ. ಅಲ್ಲದೆ ಈ ಭಾಗವು ಹೆಚ್ಚು ಬಯಲು ಪ್ರದೇಶವಾಗಿರುವುದರಿಂದ ಕುರಿ-ಮೇಕೆಗಳಿಗೆ ಹಸಿರು ಮೇವು ಮತ್ತು ನೀರು ದೊರೆಯುವುದಿಲ್ಲ. ಜೊತೆಗೆ ಸ್ಥಳೀಯ ಕುರಿಗಾರರ ವಿರೋಧ ಇರುವುದು ತಿಳಿದುಬಂದಿದೆ. ಹಾಗಾಗಿ ಆ ಪ್ರದೇಶಗಳತ್ತ ವಲಸೆ ಹೋಗುವುದು ಹೆಚ್ಚಾಗಿ ಕಂಡುಬರುವುದಿಲ್ಲ.

## ಅಲೆಮಾರಿ ಕುರುಬರ ವಲಸೆ
## ಮಾರ್ಗಗಳು




ವಲಸೆ ಸೂಚಿಗಳು

♦ ವಲಸೆ ಮಾರ್ಗ ಒಂದು

ಅ ವಲಸೆ ಮಾರ್ಗ ಎರಡು

ವಲಸೆ ಬಂದು ಅಲೆದಾಡುತ್ತಿರುವ ಅಲೆಮಾರಿ ಕುರುಬರು ನಿರ್ದಿಷ್ಟ ಗ್ರಾಮ ಅಥವಾ ಸ್ಥಳದಲ್ಲಿ ನೆಲೆಯೂರಿ ಕುರಿಗಳ ಸಂಗೋಪನೆ ಮಾಡುತ್ತಿಲ್ಲ. ತಮ್ಮ ಕುರಿಮೇಕೆಗಳಿಗೆ ಮೇವು-ನೀರು ಯಾವ ಪ್ರದೇಶಗಳಲ್ಲಿ ದೊರೆಯುತ್ತದೆಯೋ ಆ ಪ್ರದೇಶಗಳಲ್ಲಿ ಅಲೆದಾಡುತ್ತ ಕುರಿ ಸಂಗೋಪನೆ ಮಾಡುತ್ತಾರೆ. ಸಾಮಾನ್ಯವಾಗಿ ಮಳೆಗಾಲದಲ್ಲಿ ಗುಡ್ಡ ಹಾಗೂ ಗಟ್ಟಿ ಪ್ರದೇಶಗಳಲ್ಲಿ ಅಲೆದಾಡುತ್ತಾರೆ. ಮಳೆಗಾಲದ ನಂತರ ಅಂದರೆ ಚಳಿಗಾಲ ಮತ್ತು ಬೇಸಿಗೆ ಕಾಲಗಳಲ್ಲಿ ಮೇವು ನೀರು ದೊರೆಯುವ ಹೊಲಗದ್ದೆಗಳಲ್ಲಿ ಅಲೆದಾಡುತ್ತಾ ಕುರಿಸಂಗೋಪನೆ ಮಾಡಲಾಗುತ್ತದೆ. ಅಲೆಮಾರಿ ಕುರುಬರು ಅಲೆದಾಡುವ ಪ್ರದೇಶಗಳಿಗೆ ನೆಲೆಗಳು, ಅಥವಾ ಗ್ರಾಮಗಳೆಂದು ಕರೆಯುವುದರ ಬದಲು, ಅವರು ಅಲೆದಾಡುವ ಗ್ರಾಮಗಳ ಹೊಲಗದ್ದೆಗಳು ಹಾಗೂ ಗುಡ್ಡಗಾಡು ಪ್ರದೇಶವೆಂದು ಕರೆಯುವುದು ಸೂಕ್ತವೆನಿಸುತ್ತದೆ. ಅಲೆಮಾರಿ ಕುರುಬರು ಅಲೆದಾಡುತ್ತಿರುವ ಊರುಗಳ ಹೆಸರುಗಳನ್ನು ಋತುಮಾನಕ್ಕನುಗುಣವಾಗಿ ವಿಂಗಡಿಸಿ, ತಾಲೂಕುವಾರು ಪಟ್ಟಿ ಮಾಡಿ ಈ ಕೆಳಗಿನಂತೆ ಕೊಡಲಾಗಿದೆ.

**ಮಳೆಗಾಲದ ಅವಧಿ (ಗುಡ್ಡಗಾಡು ಮತ್ತು ಗಟ್ಟಿಪ್ರದೇಶ)**

**ಹೊಸಪೇಟೆ ತಾಲೂಕು :** ಕಮಲಾಪುರ, ಕಾರಿಗನೂರು, ವಡ್ಡರಹಳ್ಳಿ, ಪಾಪಿನಾಯಕನ ಹಳ್ಳಿ, ಬೈಲವದ್ದಿಗೇರಿ, ಧರ್ಮಸಾಗರ, ಗಾದಿಗನೂರು, ಸೀತಾರಾಮತಾಂಡ, ಚಿನ್ನಾಪುರ, ನಲ್ಲಾಪುರ, ಮೆಟ್ರಿ, ದೇವಲಾಪುರ, ಕಣಿವೆ ತಿಮ್ಮಲಾಪುರ, ನಾಗೇನಹಳ್ಳಿ, ಕಡ್ಡಿರಾಂಪುರ, ಬುಕ್ಕಸಾಗರ, ವೆಂಕಟಾಪುರ, ರಾಮಸಾಗರ, ಕಂಪ್ಲಿ, ಹಂಪಿ ಇತ್ಯಾದಿ.

**ಸೊಂಡೂರು ತಾಲೂಕು :** ಲಿಂಗದಹಳ್ಳಿ, ಉಬ್ಬಳಗಂಡಿ, ರಾಜಪುರ, ಬಸಾಪುರ, ವೆಂಕಟ ಗಿರಿ, ಕುರೆಕುಪ್ಪೆ, ತೋರಣಗಲ್ಲು, ಮಲ್ಲಾಪುರ, ಪೋತನಕಟ್ಟೆ, ಕಲ್ಲಹಳ್ಳಿ, ವಡ್ಡು, ತಾಳೂರು, ಮೆಟ್ರಿಕಿ, ಸೊಂಡೂರು (ಕುಮಾರಸ್ವಾಮಿ ಗುಡ್ಡ) ಇತ್ಯಾದಿ.

**ಹೂವಿನ ಹಡಗಲಿ ತಾಲೂಕು :** ಹಿರೇಹಡಗಲಿ, ವರ್ಲಹಳ್ಳಿ, ಬಸಠಹಳ್ಳಿ, ಅಂಕಲಿ, ಸಾವನಳ್ಳಿ, ಹಿರೆಮಲ್ಲನಕೆರೆ, ಹೊಳಗುಂದಿ, ದಾಸರಹಳ್ಳಿ, ಬಾವಿಹಳ್ಳಿ.

**ಬಳ್ಳಾರಿ ತಾಲೂಕು :** ಕುಡುತಿನಿ, ವೇಣಿವೀರಾಪುರ, ಅಲ್ಲಿಪುರ ಇತ್ಯಾದಿ.

**ಚಳಿಗಾಲ ಮತ್ತು ಬೇಸಿಗೆ ಕಾಲ (ಹೊಲ-ಗದ್ದೆಗಳಲ್ಲಿ)**

**ಹೊಸಪೇಟೆ ತಾಲ್ಲೂಕು :** ರಾಮಸಾಗರ, ಚಿಕ್ಕಜಾಯಿಗನೂರು, ದೇವಸಮುದ್ರ, ಹಂಪ ದೇವನಹಳ್ಳಿ, ಸುಗ್ಗೇನಹಳ್ಳಿ, ದೇವಲಾಪುರ, ಮಾವಿನಹಳ್ಳಿ, ಹೊನ್ನಳ್ಳಿ, ಕಂಪ್ಲಿ, ಕೊಟ್ಟಾಲು, ಗೋನಾಳ, ಸಣಾಪುರ, ಇಟಗಿ, ಇತ್ಯಾದಿ.

**ಸೊಂಡೂರು ತಾಲೂಕು :** ಹಳೆದರೋಜಿ, ಹೊಸದರೋಜಿ, ಮಾಳಪುರ

**ಹಡಗಲಿ ತಾಲೂಕು :** ಕುರುವತ್ತಿ, ಮೈಲಾರ, ಹೊಳಲು, ಗುತ್ತಲ, ಕತ್ತೆಬೆನ್ನೂರು, ಹಿರೇಬನ್ನಿ ಮಟ್ಟಿ, ಬ್ಯಾಲಹುಣಸಿ, ಮಾಗಳ, ಮಾಗಳ ಹೊಸಳ್ಳಿ, ದಾಸರಹಳ್ಳಿ ತಾಂಡ, ಮದಲಘಟ್ಟ.

**ಬಳ್ಳಾರಿ ತಾಲೂಕು :** ವೆಲ್ಲೂಡಿ, ಎಮ್ಮಿಗನೂರು, ಓರ್ವಾಯಿ, ಗುತ್ತಿಗನೂರು, ಪಟ್ಟಣ ಸೆರಗು, ಕಲ್ಲುಕಂಬ, ಸೋಮಲಾಪುರ, ಹೆಚ್.ವಿರಾಪುರ, ಮುಷ್ಟಗಟ್ಟಿ, ಗೆಣಿಕೆಹಾಳ್,

ಕುರುಗೋಡು, ಬಾದನಹಟ್ಟಿ, ವದ್ದಹಟ್ಟಿ, ಸಿದ್ದಮ್ಮನಹಳ್ಳಿ, ಏಳುಬೆಂಚಿ, ಯರ್ರಂಗ್ಳಿ, ಕೊಳಗಲ್ಲು, ಸೋಮಸಮುದ್ರ, ಕೊಳೂರು, ದಮ್ಮೂರು, ಬೈಲೂರು, ಸಿಂದಿಗೇರಿ, ಶ್ರೀಧರಗಡ್ಡ, ಕೊರ್ಲಗುಂದಿ, ಚಾಗನೂರು, ಕಪ್ಪಗಲ್ಲು, ಮೋಕಾ, ಗುಡದೂರು, ವಣೇನೂರು, ಕರ್ಚೇಡು, ಬಸರಕೋಡು, ಸಿಂದವಾಳ, ಬೇಣಕಲ್, ಎರ್ರಗುಡಿ, ಜಾಲಿಹಾಳ್, ಎಂ.ಗೋನಾಳ, ಅಸುಂಡಿ, ರೂಪನಗುಡಿ, ಇತ್ಯಾದಿ.

ಸಿರುಗುಪ್ಪ ತಾಲೂಕು : ಮಣ್ಣೂರು, ಸೂಗುರು, ನಡವಿ, ಉಡೇಗೋಳ, ನಿಟ್ಟೂರು, ಹೆರಕಲ್ಲು, ಕೆಂಚನಗುಡ್ಡ, ದೇಶನೂರು, ಬಾಗೇವಾಡಿ, ಶ್ರೀಧರಗಡ್ಡೆ, ಚಿಕ್ಕಬಳ್ಳಾರಿ, ಹಚ್ಚೊಳ್ಳಿ, ನಾಗಲಾಪುರ, ಕುರುವಳ್ಳಿ, ಕರ್ಚಿಗನೂರು, ರಾರಾವಿ, ಅಗಸನೂರು, ನಾಡಂಗ, ಕೊತ್ತಲಚಿಂತ, ಬಂಡ್ರಾಳು, ಕೆ.ಸೂಗುರು, ಹಳೆಕೋಟೆ, ತೆಕ್ಕಲಕೋಟೆ, ಉಪ್ಪಾರ ಹೊಸಹಳ್ಳಿ, ಬಲಕುಂದಿ, ಕೆ.ಬೆಳಗಲ್ಲು, ಮೈಲಾಪುರ ಕ್ಯಾಂಪ್, ಬೂದುಗುಪ್ಪ, ಮಾಟಸೂಗುರು, ಕರೂರು, ದರೂರು, ಭೈರಾಪುರ, ಆಗಲೂರು, ಉತ್ತನೂರು, ಊಳೂರು, ತಾಳೂರು, ಕೊಂಚಿಗೇರಿ, ಸಿರಿಗೇರಿ, ಹಾವಿನಾಳ್, ಚನ್ನಪಟ್ಟಣ ಇತ್ಯಾದಿ.

ಗುರುತಿಸುವಿಕೆ : ಪರಂಪರಗತವಾಗಿ ಬಂದ ವೃತ್ತಿ ಮತ್ತು ಉಡುಪುಗಳಿಂದ ಕುರುಬರನ್ನು ಗುರುತಿಸಲಾಗುತ್ತದೆ. ಇವರು ಋತುಮಾನಕ್ಕನುಗುಣವಾಗಿ ಬೆಟ್ಟ-ಗುಡ್ಡ, ಹೊಲ-ಗದ್ದೆಗಳಲ್ಲಿ ೩-೪ ಕುಟುಂಬಗಳು ಒಟ್ಟಿಗೆ ಗುಡಾರ ಹೂಡಿ ಕುರಿಗಳ ಸಂಗೋಪನೆ ಮಾಡುತ್ತ ಜೀವನ ಸಾಗಿಸುತ್ತಿರುತ್ತಾರೆ. ಸ್ತ್ರೀ-ಪುರುಷರು ಶಾರೀರಕವಾಗಿ ಗಟ್ಟಿಮುಟ್ಟಾಗಿದ್ದು ಮರಾಠಿ ಮಿಶ್ರಿತ ಕನ್ನಡ ಭಾಷೆ ಅಥವಾ ಮರಾಠಿ ಭಾಷೆಯನ್ನು ಮಾತನಾಡುತ್ತಾರೆ.

ಪುರುಷರನ್ನು ತಲೆಗೆ ಸುತ್ತಿರುವ ಪೇಟಾ ಅಥವಾ ಗಾಂಧಿಟೋಪಿ, ಹೆಗಲ ಮೇಲಿರುವ ಕರಿಕಂಬಳಿ ಅಥವಾ ಶಾಲು, ನಡುವಿಗೆ ಮೇಲೆಳೆದು ಕಟ್ಟಿರುವ ಕಚ್ಚೆಪಂಚೆ, ಕಾಲಲ್ಲಿ ದಪ್ಪನೆಯ ದೇಶಿ ಮಾದರಿ ಮೆಟ್ಟು, (ಚಪ್ಪಲಿ) ಕಿವಿಯಲ್ಲಿ ಮುರುವು, ಕೊರಳಲ್ಲಿ ತಾಯ್ತ, ನಡುವಿನಲ್ಲಿ ಎಲೆ ಅಡಿಕೆ ಚೀಲ, ಮುಖದ ಮೇಲೆ ಕೊರೆ ಮೀಸೆ, ಹಣೆಯ ತುಂಬಾ ಹಚ್ಚಿರುವ ಭಂಡಾರ ಮೊದಲಾದ ಕುರುಹುಗಳಿಂದ ಗುರುತಿಸಲಾಗುವುದು. ಮಹಿಳೆಯನ್ನು ಕಚ್ಚೆ ಹಾಕಿದ ಇಳಕಲ್ ಸೀರೆ ಅಥವಾ ಪಟ್ಟೆಸೀರೆ, ಕಾಲು ಬೆರಳಿಗೆ ಕಾಲಬಿಲ್ಲೆ (ಉಂಗುರು), ಹಣೆಯ ಮೇಲೆ ದಪ್ಪನೆಯ ಕುಂಕುಮ, ಕಾಲಲ್ಲಿ ದೇಶೀ ಮಾದರಿ ದಪ್ಪನೆಯ ಚಪ್ಪಲಿ ಇತ್ಯಾದಿ ಅಂಶಗಳಿಂದ ಗುರುತಿಸಲಾಗುವುದು.

ವಲಸೆ ಮಾರ್ಗ : ಅಲೆಮಾರಿ ಕುರುಬರು ಕುರಿಸಂಗೋಪನೆಗಾಗಿಯೆ ತಮ್ಮ ಸ್ವಗ್ರಾಮಗಳನ್ನು ತೊರೆದು ಎರಡು ಮಾರ್ಗಗಳ ಮೂಲಕ ವಲಸೆ ಬಂದಿರುವುದನ್ನು ಕಾಣುತ್ತೇವೆ. ಒಂದು ಅವರಲ್ಲಿ ಕೆಲವರು ಚಿಕ್ಕೋಡೀ ತಾಲ್ಲೂಕಿನ ವಿವಿಧ ಗ್ರಾಮಗಳಿಂದ ಚಿಕ್ಕೋಡಿ ಮೂಲಕ ಗೋಕಾಕ್ ಮಾರ್ಗದಿಂದ ಕೊಪ್ಪಳ, ರಾಯಚೂರು ಮತ್ತು ಬಳ್ಳಾರಿ ಜಿಲ್ಲೆಗಳ ಭೂಪ್ರದೇಶದ ಕಡೆ ವಲಸೆ ಬಂದಿದ್ದಾರೆ. ಹಾಗೆಯೇ ಇನ್ನು ಕೆಲವರು ಚಿಕ್ಕೋಡಿಯ ಮೂಲಕ ಬೆಳಗಾವಿ ಮಾರ್ಗ ಹಿಡಿದು ಧಾರವಾಡ, ಹಾವೇರಿ, ಗದಗ, ದಾವಣಗೆರೆ, ಶಿವಮೊಗ್ಗ ಮತ್ತು ಚಿಕ್ಕಮಗಳೂರು ಜಿಲ್ಲೆಗ ಭೂಪ್ರದೇಶದ ಕಡೆ ವಲಸೆ ಬಂದಿರುವುದನ್ನು ಕಾಣುತ್ತೇವೆ.

೩

# ಸ್ಥಳಾವರಣ ಮತ್ತು ಬ್ರಹ್ಮಾಂಡದ ಪರಿಕಲ್ಪನೆ

## ಗುಡಾರ (ವಸತಿ)

ಸಂಚಾರಿ ಬದುಕಿಗೆ ಹೆಸರುವಾಸಿಯಾದ ಅಲೆಮಾರಿ ಕುರುಬರು ನಗರ, ಪಟ್ಟಣ, ಗ್ರಾಮಗಳಲ್ಲಿ ವಾಸಿಸದೆ ಗುಡ್ಡ-ಬೆಟ್ಟ, ಅಥವಾ ಹೊಲ-ಗದ್ದೆಗಳಲ್ಲಿ ತಮ್ಮ ಬದುಕುಗಳನ್ನು ರಕ್ಷಣೆ ಮಾಡುವುದೋಸ್ಕರ ಕುರಿಗಳ ಮಧ್ಯದಲ್ಲಿ ಗುಡಾರ ಹೂಡುವುದು ಕಂಡುಬರುತ್ತದೆ. ಚಳಿ, ಗಾಳಿ, ಮಳೆ ಬಿಸಿಲುಗಳಿಂದ ತಮ್ಮನ್ನು ರಕ್ಷಿಸಿಕೊಳ್ಳಲು, ದಿನನಿತ್ಯದ ಆಹಾರ ಸಾಮಗ್ರಿಗಳನ್ನು ಜೋಪಾನವಾಗಿಟ್ಟುಕೊಳ್ಳಲು ೮ ಅಡಿ ಅಗಲ ೧೨ ಅಡಿ ಉದ್ದದ ಗುಡಾರವೇ ಇವರಿಗೆ ವಸತಿಯಾಗಿದೆ. ಈ ಉದ್ದೇಶಕ್ಕೆ ತಾಡಪಾಲನ್ನು ಪ್ರತಿಯೊಂದಕ್ಕೆ ೧,೨೦೦ ರೂ. ಗಳಿಂದ ೧,೫೦೦ ರೂಪಾಯಿಗಳವರೆಗೆ ಹಣ ನೀಡಿ ಹುಬ್ಬಳ್ಳಿ ಅಥವಾ ದಾವಣಗೆರೆಯಲ್ಲಿ ಕೊಂಡು ತರಲಾಗುತ್ತದೆ. ತಾಡಪಾಲಿನ ಜೀವಿತಾವಧಿ ಬಳಕೆಯನ್ನು ಅವಲಂಬಿಸಿದ್ದು ಸಾಮಾನ್ಯವಾಗಿ ೪ ರಿಂದ ೬ ವರ್ಷಗಳು ಬಾಳಿಕೆ ಬರುತ್ತದೆ.

ನೈಸರ್ಗಿಕ ಬದಲಾವಣೆಗೆ ಅನುಗುಣವಾಗಿ ಗುಡಾರ ಹೂಡಲಾಗುತ್ತದೆ. ವಾರ್ಷಿಕ ಋತುಮಾನಗಳಿಗೆ ತಕ್ಕಂತೆ ಮಳೆ ಬರುವ ಮತ್ತು ಗಾಳಿ ಬೀಸುವ ದಿಕ್ಕಿಗೆ ವಿರುದ್ಧವಾಗಿ ಗುಡಾರ ಹೂಡುವುದು ಸಹಜ. ಮುಂಗಾರು ಮಳೆ ಆರಂಭದಿಂದ ಮುಕ್ತಾಯದವರೆಗೆ (ಜೂನ್ ನಿಂದ ಆಗಸ್ಟ್‌ವರೆಗೆ) ಪಶ್ಚಿಮ ದಿಕ್ಕಿನಿಂದ ಗಾಳಿಬಿಸುವುದು ಹಾಗೂ ಮಳೆ ಬರುವುದರಿಂದ ಪೂರ್ವ ದಿಕ್ಕಿಗೆ ಮುಖಮಾಡಿ ಗುಡಾರ ಹೂಡುವುದು ಕಾಣುತ್ತದೆ. ಹಿಂಗಾರು ಮಳೆ ಆರಂಭದಿಂದ ಚಳಿಗಾಲ ಮುಗಿಯುವವರೆಗೆ (ಸೆಪ್ಟಂಬರ್ ದಿಂದ ಜನವರಿ) ಪೂರ್ವ ದಿಕ್ಕಿನಿಂದ ಗಾಳಿ ಬಿಸುವುದು ಮತ್ತು ಮಳೆ ಬರುವುದರಿಂದ ಪಶ್ಚಿಮ ದಿಕ್ಕಿಗೆ ಮುಖಮಾಡಿ ಗುಡಾರವನ್ನು ಹೂಡುವುದನ್ನು ಕಾಣಬಹುದು. ಈ ರೀತಿಯಲ್ಲಿ ಗುಡಾರ ಹೂಡುವ ಕಾರಣಗಳನ್ನು ಹೀಗೆ ಗುರುತಿಸಬಹುದು. ಗಾಳಿ ಗುಡಾರದೊಳಗೆ ನುಗ್ಗಿ ಗುಡಾರ ಹಾರಬಾರದು, ಮಳೆ ನೀರು ಗುಡಾರದೊಳಗೆ ಸಿಡಿಯಬಾರದು, ಸಂಗ್ರಹಿಸಿಟ್ಟ ಆಹಾರದಾನ್ಯಗಳು ಕೆಡಬಾರದು, ಬಟ್ಟೆಗಳು ತೊಯ್ಯಬಾರದು, ತಾವು ಮತ್ತು ತಮ್ಮ ಮಕ್ಕಳು ಆಗ ತಾನೇ ಹುಟ್ಟಿದ ಕುರಿಮರಿಗಳು ಮಳೆಯಿಂದ ನೆನೆಯಬಾರದು ಮತ್ತು ಶೀತಗಾಳಿಯಿಂದ ತಮ್ಮನ್ನು ರಕ್ಷಿಸಿಕೊಳ್ಳುವುದು.

ಗುಡಾರದ ಹೊರಗಿನ ಹಿಂಭಾಗದಲ್ಲಿ ಪ್ಲಾಸ್ಟಿಕ್ ಕಾಗದ ಅಥವಾ ತಾಡುಪಾಲನ್ನು ಇಳಿ ಬಿಟ್ಟು, ಗಾಳಿಗೆ ಹಾರದಂತೆ ಭದ್ರವಾಗಿ ಕಟ್ಟಲಾಗಿರುತ್ತದೆ. ಗುಡಾರದಲ್ಲಿ ಗಾಳಿ ನುಸುಳ ಬಾರದೆಂಬ ಉದ್ದೇಶದಿಂದ ಗುಡಾರದ ಒಳಗಿನ ಹಿಂಭಾಗದಲ್ಲಿ ಆಹಾರದಾನ್ಯ ಮತ್ತು ಇತರೆ ಸಾಮಾಗ್ರಿಗಳು ತುಂಬಿದ ಚೀಲಗಳನ್ನಿಡ ಲಾಗಿರುತ್ತದೆ. ಕುಟುಂಬದಲ್ಲಿ ಚಿಕ್ಕಮಕ್ಕಳಿದ್ದರೆ ಗುಡಾರದೊಳಗೆ ತೊಟ್ಟಿಲು ಕಟ್ಟಲಾಗುತ್ತದೆ. ಗುಡಾರದ ಮುಂಭಾಗದ ಹತ್ತಿರ ಅಥವಾ ಅಂಟಿಕೊಂಡಂತೆ ಎಡಭಾಗದಲ್ಲಿ ಆಹಾರ ಬೇಯಿಸಿಕೊಂಡು ತಿನ್ನಲು ಮೂರು ಕಲ್ಲುಗಳನ್ನಿಟ್ಟು, ಒಲೆ ಹೂಡಲಾಗಿರುತ್ತದೆ. ಗುಡಾರದ ಬಲಭಾಗದ ಸ್ವಲ್ಪ ದೂರದಲ್ಲಿ ಮರಿಬಲೆ ಮತ್ತು ರಾತ್ರಿ ಸಮಯದಲ್ಲಿ ಕುದುರೆಗಳನ್ನು ಕಟ್ಟಿ ಹಾಕಲು ಗುಡಾರದ ಸಮೀಪ ಗೂಟಗಳನ್ನು ಬಡಿಯಲಾಗಿರುತ್ತದೆ.

ಬೇಸಿಗೆ ಕಾಲದಲ್ಲಿ ಸಂಕ್ರಾಂತಿಯ ಹಬ್ಬದಿಂದ ಕಾರಹುಣ್ಣಿಮೆಯವರೆಗೆ (ಜನವರಿ ೧೪ ರಿಂದ ಮೇ ತಿಂಗಳ ಕೊನೆಯವರೆಗೆ) ಗುಡಾರ ಹೂಡುವುದಿಲ್ಲ. ಈ ಅವಧಿಯಲ್ಲಿ ಬಿಸಿಲು ಅತಿ ಹೆಚ್ಚಾಗಿದ್ದು ಬಿಸಿಲಿಗೆ ತಾಡಪಾಲು ಬಾಳಿಕೆ ಬರುವುದಿಲ್ಲ. ಪ್ರತಿವರ್ಷ ತಾಡಪಾಲಿಗೆ ಬೆಲೆ ತೆತ್ತರೆ ಜೀವನ-ನಿರ್ವಹಣೆ ಕಷ್ಟದಾಯಕವಾಗುತ್ತದೆಂಬ ಉದ್ದೇಶದಿಂದ ಸುಮಾರು ೫ ತಿಂಗಳುಗಳ ಕಾಲ ಗಾಳಿ ಮತ್ತು ಬಿಸಿಲನ್ನು ಸಹಿಸಿಕೊಳ್ಳುತ್ತಾ ಹೊಲ-ಗದ್ದೆಗಳ ಬಯಲಿನಲ್ಲಿ ಕಾಲದೂಡುವುದು ಕಂಡುಬರುತ್ತದೆ. ಬೇಸಿಗೆಯ ೫ ತಿಂಗಳ ಕಾಲ ತಾಡಪಾಲನ್ನು ಬಳಸದೆ ಒಂದು ಚೀಲದಲ್ಲಿ ಕಟ್ಟಿ, ತಮಗೆ ಪರಿಚಯವಿರುವ ಗ್ರಾಮದ ಜಮೀನ್ದಾರರ ಮನೆ ಯಲ್ಲಿಟ್ಟು, ಮಳೆಗಾಲ ಆರಂಭವಾದಾಗ ತೆಗೆದುಕೊಂಡು ಬರಲಾಗುತ್ತದೆ. ಈ ಸಮಯದಲ್ಲಿ ಆಹಾರಧಾನ್ಯ ಹಾಗೂ ಇತರೆ ಸಾಮಾನುಗಳನ್ನು ಬಿಸಿಲು-ಗಾಳಿಯಿಂದ ರಕ್ಷಿಸಿಕೊಳ್ಳಲು ಚೀಲಗಳಲ್ಲಿ ತುಂಬಿ, ಚೀಲದ ಮೇಲೆ ಚೀಲಗಳನ್ನಿಟ್ಟು ನೆರಳಿಗಾಗಿ ಕಂಬಳಿಗಳನ್ನು ಹೊದಿಸಲಾಗುತ್ತದೆ. ಬಿಸಿಲಿನ ತಾಪ ತಡೆಯಲು ಮಕ್ಕಳಿಗೆ ಹಾಗೂ ಕುರಿಮರಿಗಳಿಗೊಂದರಂತೆ ನಾಲ್ಕು ಕಡೆ ಬಿದುರು ಕಟ್ಟಿಗೆ ಬಡಿದು ಅವುಗಳ ಮೇಲೆ ನೆರಳಿಗಾಗಿ ಕಂಬಳಿ ಇಳಿಬಿಡ ಲಾಗುತ್ತದೆ. ಒಂದರಲ್ಲಿ ಕುರಿಮರಿಗಳಿದ್ದರೆ ಮತ್ತೊಂದರಲ್ಲಿ ತಮ್ಮ ಮಕ್ಕಳು ಆಡುತ್ತವೆ. ಒಂದು ವೇಳೆ ತಾವು ಗುಡಾರ ಹೂಡಿದ ಹೊಲಗದ್ದೆಗಳಲ್ಲಿ ಮರಗಿಡಗಳಿದ್ದರೆ ಮಧ್ಯಾಹ್ನದ ಸಮಯದಲ್ಲಿ ಗಿಡದ ಕೆಳಗೆ ಕುರಿಮರಿ ಮತ್ತು ಮಕ್ಕಳನ್ನು ಆಡಲು ಬಿಡಲಾಗುತ್ತದೆ. ಕೆಲಸದ ಒತ್ತಡ ಕಡಿಮೆಯಿದ್ದರೆ ಮಹಿಳೆಯರು ಸ್ವಲ್ಪ ಹೊತ್ತು ವಿಶ್ರಾಂತಿ ಪಡೆದು ಕೊಳ್ಳುವುದು ಉಂಟು. ಈ ೫ ತಿಂಗಳುಗಳ ಕಾಲ ಹಗಲು-ರಾತ್ರಿ ಬಯಲಿನಲ್ಲಿಯೇ ಇಡೀ ಕುಟುಂಬ ಕಾಲ ದೂಡುತ್ತದೆ.

**ಗುಡಾರ ಬದಲಾಯಿಸುವ ವಿಧಾನ**

ಇವರು ಯಾವುದೇ ಒಂದು ನಿರ್ದಿಷ್ಟ ಭೂ ಪ್ರದೇಶದಲ್ಲಿ ಗುಡಾರ ಹೂಡಿ ಜೀವನ ಸಾಗಿಸುವುದಿಲ್ಲ. ತಮ್ಮ ಬದುಕು(ಕುರಿ)ಗಳಿಗೆ ಮೇವು-ನೀರು ಹುಡುಕಿಕೊಂಡು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗುತ್ತ ತಾತ್ಕಾಲಿಕವಾಗಿ ಹೂಡಿದ

ಗುಡಾರಗಳನ್ನು ಬದಲಾಯಿ ಸುವುದು ಕಾಣಬಹುದು. ತಮ್ಮ ಬದುಕು(ಕುರಿ)ಗಳಿಗೆ ಮೇವು-ನೀರು ದೊರೆಯುವವರೆಗೆ ಅಲ್ಲಿದ್ದು, ಮೇವು-ನೀರು ಖಾಲಿಯಾಗುತ್ತಿದ್ದಂತೆ ಮುಂದೆ ಯಾವ ಪ್ರದೇಶದಲ್ಲಿ ಮೇವು-ನೀರು ದೊರೆಯುತ್ತದೆಯೋ ಆ ಪ್ರದೇಶಕ್ಕೆ ಗುಡಾರವನ್ನು ವರ್ಗಾಯಿಸುವುದು ಸಾಮಾನ್ಯವಾಗಿದೆ. ಮಳೆಗಾಲದ ಅವಧಿಯಲ್ಲಿ ಗುಡ್ಡಗಾಡು ಪ್ರದೇಶದಲ್ಲಿ ಗುಡಾರ ಹೂಡಿ ಕುರಿ ಸಂಗೋಪನೆ ಮಾಡಿದರೆ, ಮಳೆಗಾಲದ ನಂತರ ಮತ್ತೆ ಹೊಲ-ಗದ್ದೆಗಳ ಕಡೆ ವಲಸೆ ಬಂದು ಮೇವು-ನೀರು ಸಿಗುವ ಹೊಲ-ಗದ್ದೆಗಳಲ್ಲಿ ಅಲೆದಾಡುತ್ತಾ ಕುರಿ ಸಂಗೋಪನೆ ಮಾಡಲಾಗುತ್ತದೆ.

ಗುಡಾರ ಬದಲಾಯಿಸುವಿಕೆಯು ಋತುಮಾನದಿಂದ ಋತುಮಾನಕ್ಕೆ ಭಿನ್ನವಾಗಿರುತ್ತದೆ. ಒಂದು ಋತುಮಾನದಿಂದ ಮತ್ತೊಂದು ಋತುಮಾನಕ್ಕೆ (ಬೇಸಿಗೆಯ ಕಾಲದಿಂದ ಮಳೆಗಾಲಕ್ಕೆ) ಬದಲಾಯಿಸುವಾಗ ಗುಡಾರ ಬದಲಾಯಿಸುವ ಭೂ-ಪ್ರದೇಶದ ಅಂತರ ದೂರವಾಗಿರುತ್ತದೆ. ಒಂದೇ ಋತುಮಾನದಲ್ಲಿ ಗುಡಾರ ಬದಲಾಯಿಸುವಾಗ, ಬದಲಾಯಿಸುವ ಗುಡಾರದ ಅಂತರ ಕಡಿಮೆ ಇರುತ್ತದೆ. ಋತುಮಾನದಿಂದ ಋತುಮಾನಕ್ಕೆ ಬದಲಾಯಿಸುವಾಗ ಒಂದು ತಾಲೂಕಿನ ಭೂಪ್ರದೇಶದಿಂದ ಪಕ್ಕದ ತಾಲೂಕಿನ ಅಥವಾ ಬೇರೊಂದು ಜಿಲ್ಲೆಯ ಅಥವಾ ಪಕ್ಕದ ರಾಜ್ಯದ ವ್ಯಾಪ್ತಿಗೊಳಪಟ್ಟ ಭೂಪ್ರದೇಶಕ್ಕೆ ವರ್ಗಾವಣೆಯಾಗುತ್ತಿರುತ್ತದೆ. ಈ ರೀತಿಯ ವರ್ಗಾವಣೆಯು ಮಳೆಗಾಲದಲ್ಲಿ ಗುಡ್ಡಗಾಡು ಪ್ರದೇಶಕ್ಕೆ ಮತ್ತು ಮಳೆಗಾಲದ ನಂತರ ನೀರಾವರಿ ಅಥವಾ ಬಯಲು ಪ್ರದೇಶದ ಕಡೆ ಗುಡಾರ ಬದಲಾಗುತ್ತಿರುತ್ತದೆ. ಗುಡ್ಡಗಾಡು ಪ್ರದೇಶದಿಂದ ನೀರಾವರಿ ಅಥವಾ ಬಯಲು ಪ್ರದೇಶದ ಕಡೆ ಬದಲಾಯಿಸುವಾಗ ಅಥವಾ ನೀರಾವರಿ ಪ್ರದೇಶದಿಂದ ಗುಡ್ಡಗಾಡು ಪ್ರದೇಶಕ್ಕೆ ಬದಲಾಯಿಸುವಾಗ ಒಂದೇ ದಿನದಲ್ಲಿ ಗುಡಾರ ವರ್ಗಾವಣೆ ಸಾಧ್ಯವಾಗುವುದಿಲ್ಲ. ಈ ಸಮಯದಲ್ಲಿ ಪ್ರತಿದಿನ ೨೦ ರಿಂದ ೨೫ ಕಿ.ಮೀ.ವರೆಗೆ ಕುದುರೆಗಳ ಮೇಲೆ ತಮ್ಮ ದಿನನಿತ್ಯ ಬಳಕೆಯ ಸಾಮಾನುಗಳನ್ನು ಹೇರಿಕೊಂಡು ದಾರಿ ಸಾಗಿ ಸಾಯಂಕಾಲವಾದ ಮೇಲೆ ತಾವು ಸಾಗುವ ಹಾದಿಯಲ್ಲಿರುವ ಗ್ರಾಮದ ಹತ್ತಿರ ರಾತ್ರಿ ಗುಡಾರ ಹೂಡುವುದನ್ನು ಕಾಣುತ್ತೇವೆ. ಮರುದಿನ ಆ ಸಾಮಾನುಗಳನ್ನು ಹೇರಿಕೊಂಡು ತಾವು ಯೋಜಿಸಿದ ದಾರಿ ಹಿಡಿದುಕೊಂಡು ಮುನ್ನಡೆಯಲಾಗುತ್ತದೆ. "ಒಂದು ವೇಳೆ ಕುರಿಗಳು ದಾರಿ ನಡೆದು ದಣಿದಿದ್ದರೆ, ತಾವು ರಾತ್ರಿ ಗುಡಾರ ಹೂಡಿದ ಗ್ರಾಮದ ಸುತ್ತಮುತ್ತಲೂ ಬಯಲು ಪ್ರದೇಶ ವಿದ್ದು, ಕುರಿಗಳಿಗೆ ಮೇವು-ನೀರು ದೊರೆಯುವಂತಿದ್ದು ಹಾಗೂ ಮಳೆಗಾಲವಾದರೆ ವಾತವರಣ ತಿಳಿಯಾಗಿದ್ದಲ್ಲಿ ಒಂದೆರಡು ದಿನ ಗುಡಾರ ಹೂಡಿದ ಸುತ್ತಮುತ್ತಲಿನ ಪ್ರದೇಶದಲ್ಲಿ ಕುರಿಗಳನ್ನು ಮೇಯಿಸಿಕೊಂಡು, ನಂತರ ಗುಡಾರ ಬದಲಾಯಿಸುತ್ತವೆ" (ಮಾಹಿತಿ: ಖಾನಪ್ಪ ಪೂಜಾರಿ: ಕಡಕಲಾಟ). ಈ ರೀತಿ ಗುಡಾರ ಬದಲಾಯಿಸುವಿಕೆಯು ತಾವು ಯೋಜಿಸಿದ ಪ್ರದೇಶ ಮುಟ್ಟುವವರೆಗೆ ನಡೆಯುವ ನಿರಂತರ ಪ್ರಕ್ರಿಯೆಯಾಗಿರುತ್ತದೆ.

ಒಂದೇ ಋತುಮಾನದಲ್ಲಿ ಗುಡಾರ ಬದಲಾಯಿಸುವಾಗ ದೂರದ ಸ್ಥಳಕ್ಕೆ ಬದಲಾಯಿಸದೆ

ಒಂದು ಗ್ರಾಮದ ಹೊಲಗದ್ದೆಯಿಂದ ಪಕ್ಕದ ಅಥವಾ ಸಮೀಪದ ಗ್ರಾಮದ ಹೊಲಗದ್ದೆಗಳಿಗೆ ಅಥವಾ ಅದೇ ಗ್ರಾಮದ ಬೇರೊಂದು ಜಮೀನ್ದಾರನ ಹೊಲ-ಗದ್ದೆಗಳಿಗೆ ಬದಲಾಗುತ್ತಿರುತ್ತದೆ. ಈ ಅವಧಿಯಲ್ಲಿ ಬದಲಾಯಿಸುವ ಅಂತರ ಸಾಮಾನ್ಯವಾಗಿ ೧ ರಿಂದ ೧೫ ಕಿ.ಮೀ.ವರೆಗೆ ಇರುತ್ತದೆ.

ಸ್ಥಳಾವರಣ ಮತ್ತು ಬ್ರಹ್ಮಾಂಡದ ಪರಿಕಲ್ಪನೆ

ಸ್ಥಳಾವರಣ : ಅಲೆಮಾರಿ ಕುರುಬರಲ್ಲಿ ಸ್ಥಳಾವರಣವನ್ನು ಎರಡು ಹಂತಗಳಲ್ಲಿ ಗುರುತಿಸಬಹುದು. ಒಂದು ಅಲೆದಾಡುವ ಪ್ರದೇಶದಲ್ಲಿಯ ಸ್ಥಳಾವರಣ ಮತ್ತೊಂದು ಸ್ವಗ್ರಾಮಗಳಲ್ಲಿಯ ಸ್ಥಳಾವರಣ. ಅಲೆದಾಡುವ ಸ್ಥಳದಲ್ಲಿಯ ಸ್ಥಳಾವರಣಕ್ಕೆ ಒಂದು ನಿರ್ದಿಷ್ಟ ನೆಲೆ ಇರದೆ ಕುರಿ ಮೇಕೆಗಳಿಗೆ ಮೇವು ನೀರು ದೊರೆಯುವ ಪ್ರದೇಶಗಳೆ ಸ್ಥಳಾವರಣ. ಈ ಸ್ಥಳಗಳಲ್ಲಿ ತಾತ್ಕಾಲಿಕ ಗುಡಾರ ಹೊಡಿಕೊಂಡು ಕುರಿಸಂಗೋಪನೆ ಮಾಡುತ್ತಾರೆ. ಉದಾಹರಣೆಗೆ ಯುವತಿ ಮೈನೆರದೆ ಅವಳನ್ನು ಗುಡಾರದಲ್ಲಿಯೇ ಒಂದು ನಿರ್ಧಿಷ್ಟ ಪ್ರದೇಶದಲ್ಲಿ ಕೂಡಿಸಲಾಗುತ್ತದೆ. ಹಾಗೆಯೇ ಜನನ, ಮದುವೆ ಹಾಗೂ ಮರಣಕ್ಕೆ ಸಂಬಂಧಿಸಿದ ಎಲ್ಲಾ ಕ್ರಿಯಾವಿಧಿಗಳು ಸ್ವಗ್ರಾಮಗಳಲ್ಲಿಯೇ ನಡೆಯುತ್ತವೆ.

ಇವರ ಸ್ವಗ್ರಾಮಗಳಲ್ಲಿ ಹಂಚಿನ ಮನೆಗಳು ನಿರ್ಮಾಣವಾಗಿದ್ದು ಮೂರು ಕೋಣೆಗಳನ್ನು ಹೊಂದಿರುತ್ತವೆ. ಆರಂಭದ ಕೋಣೆಯನ್ನು ಪಡಸಾಲೆ, ಎರಡನೆಯ ಕೋಣೆಯನ್ನು ನಡುಮನೆ ಹಾಗೂ ಕೊನೆಯ ಕೋಣೆಯನ್ನು ಹಿಂದಿನ ಮನೆ ಎಂದು ಕರೆಯುತ್ತಾರೆ. ಮೊದಲ ಕೋಣೆ ಕೂಡಲು ವಿಶ್ರಮಿಸಲು ಬಳಸಿದರೆ ಎರಡನೆಯದು ಅಡುಗೆಗೆ ಸಂಬಂಧಿಸಿದ ಕಾರ್ಯ, ಊಟ ಮತ್ತು ದೈವ ಸಂಬಂಧಿ ಕಾರ್ಯಗಳು ನಡೆಯುತ್ತವೆ. ಕೊನೆಯ ಕೋಣೆಯಲ್ಲಿ ಕಾಳು ಕಡಿ ಸಂಗ್ರಹಣೆಗೆ ಬಳಸುತ್ತಾರೆ. ಕುಟುಂಬದ ಸದಸ್ಯರು ಯಾರಾದರೂ ತಿರಿಕೊಂಡರೆ ಮೊದಲ ಕೋಣೆಯಲ್ಲಿಯೇ ಮಲಗಿಸುತ್ತಾರೆ. ಹಾಗೆಯೇ ಮೈನೆರೆದರೆ, ಹೆರಿಗೆಯಾದರೆ ಕೊನೆಯ ಕೋಣೆಯಲ್ಲಿ ವ್ಯವಸ್ಥೆ ಮಾಡುತ್ತಾರೆ.

**ಬ್ರಹ್ಮಾಂಡದ ಪರಿಕಲ್ಪನೆ :** ಅಲೆಮಾರಿ ಕುರುಬ ಸಮುದಾಯದಲ್ಲಿ ಇತರೆ ಸಮುದಾಯಗಳಲ್ಲಿರುವಂತೆ ಬ್ರಹ್ಮಾಂಡದ ಪರಿಕಲ್ಪನೆ ಇದೆ. ಮೊದಲಿಗೆ ಈ ಬ್ರಹ್ಮಾಂಡವು ನಿರಂಕಾರವಾಗಿತ್ತು ಎಂದು ಹೇಳುವಲ್ಲಿ ಬ್ರಹ್ಮಾಂಡದ ನಿರಾಕಾರ ಕಲ್ಪನೆ ಅಡಗಿದೆ. ತದನಂತರ ನಿಸರ್ಗದ ಒಂದೊಂದು ಅಂಶಗಳಾದ ಗಾಳಿ, ಭೂಮಿ, ಆಕಾಶಗಳು ಸೃಷ್ಟಿಯಾಗುತ್ತವೆ. ಇವುಗಳ ನಂತರ ಬ್ರಹ್ಮ, ವಿಷ್ಣು, ಮಹೇಶ, ರುದ್ರ ಇವರುಗಳು ಜೊತೆಗೆ ಅಲೆಮಾರಿ ಕುರುಬರ ಪೂಜ್ಯರಾದ ಶಾಂತಮುಂತಯ್ಯನ ಜನನ ಕೈಲಾಸದಲ್ಲಿಯೇ ಆಗುತ್ತದೆ. ಈತನು ರಾಕ್ಷಸರನ್ನು ಕೊಂದು ಹಾಲುಮತದ ಜೊತೆಗೆ ಸಂಬಂಧ ಬೆಳೆಸಿಕೊಂಡಿರುವ ಕುರಿಗಳನ್ನು ಡೊಳ್ಳನ್ನು ಮತ್ತು ಕಂಬಳಿಯನ್ನು ತಯಾರಿಸುತ್ತಾನೆ.

ಈ ರೀತಿಯಾಗಿ ಪ್ರಾರಂಭವಾಗುವ ಈ ಕತೆಯು ಭೂಲೋಕಕ್ಕೆ ಬಂದು ಸೇರುವ ಸಂಗತಿಗಳು ಕುತೂಹಲಕಾರಿಯಾಗಿವೆ. ಶಾಂತಮುತ್ತಯ್ಯನು ಸೃಷ್ಟಿಸಿದ ಕುರಿಗಳನ್ನು ಬ್ರಹ್ಮ,

ವಿಷ್ಣು, ಶಿವ ಮುಂತಾದವರು ಕಾಯುತ್ತ ಕೊನೆಗೆ ಪಾರ್ವತಿಯ ಸರದಿ ಬರುತ್ತದೆ. ಪಾರ್ವತಿಯು ಕುರಿಗಳನ್ನು ಕಾಯುತ್ತ ಆಕಾಶದ ಬಾಗಿಲು ತೆರೆದು ಭೂಲೋಕಕ್ಕೆ ಬರುತ್ತಾಳೆ. ಹೀಗೆ ಬಂದವಳು ಭೂಮಿಯ ಒಂದು ಹುತ್ತದಲ್ಲಿ ಕುರಿಗಳನ್ನು ಹೋಗಿಸುತ್ತಾಳೆ. ಭೂಮಿಯ ಮೇಲೆ ಮೊದಲು ಪಾದರ್ಪಣೆ ಮಾಡಿದಾಕೆ ಹೆಣ್ಣು ಪಾರ್ವತಿ ಮತ್ತು ಪ್ರಾಣಿ ಸಂತತಿಯಾಗಿ ಭೂಮಿಯಲಿ ಕಾಣಿಸಿಕೊಂಡು ಭೂಮಿಯ ಗರ್ಭದಲ್ಲಿ ವಾಸವಾದವು ಕುರಿಗಳು ಎಂಬ ಸಂಗತಿ ಮುಖ್ಯವಾದದು.

ಕುರಿಗಳನ್ನು ಹುತ್ತಿನಲ್ಲಿ ಹೊಕ್ಕಿಸಿ ಭೂಮಿಯ ಮೇಲೆ ಕುಳಿತುಕೊಂಡ ಪಾರ್ವತಿ ತನ್ನ ಬಲೆ ಮೊಲೆಯ ಹಾಲನ್ನು ಕೈಯಲ್ಲಿ ಹಿಡಿದು ಮಣ್ಣಿನಲ್ಲಿ ಬೆರೆಯಿಸಿ ಪುರುಷ ರೂಪವನ್ನು ಮಾಡಿ ಎಡ ಮೊಲೆಯ ಹಾಲಿನಲ್ಲಿ ಮಣ್ಣನ್ನು ಬೆರೆಯಿಸಿ ಮುದ್ದೆಯಿಂದ ಸ್ತ್ರೀ ರೂಪವನ್ನು ಮಾಡಿ ಸಾಕ್ಷತ್ ಸದಾಶಿವನ ಮುಂದೆ ಇರಿಸಿ, ಇವರು ಈ ಪೃಥ್ವಿಯ ಆದಿಗೆ ಕರ್ತರಾಗಬೇಕೆಂದು ಬೇಡಿಕೊಂಡಳು. ಆಗ ಸದಾಶಿವನು ಮುಗುಳ್ನಗೆ ನಕ್ಕು ಪಾರ್ವತಿಯ ಮಾತಿಗೆ ಸಮ್ಮತಿಸಿ, ಆ ಎರಡು ಮಣ್ಣಿನ ಗೊಂಬೆಗಳಿಗೆ ಜೀವಕಳೆಯನ್ನು ತುಂಬಿಸುತ್ತಾನೆ. ಇವರು ಮಣ್ಣು ಮುದ್ದೆಯಿಂದ ನಿರ್ಮಿತರಾದ್ದರಿಂದ ಪುರುಷ ಗೊಂಬೆಗೆ ಮುದ್ದಪ್ಪನೆಂತಲೂ ಹೆಣ್ಣು ಗೊಂಬೆಗೆ ಮುದ್ದವ್ವನೆಂತಲೂ ಹೆಸರಿಡುತ್ತಾರೆ. ಇವರೆ ಹಾಲುಮತ ಧರ್ಮದ ಮೂಲ ಪುರುಷರು ಎಂದು ಹೇಳಲಾಗುತ್ತದೆ.



೩.೭. ಅಲೆಮಾರಿ ಕುರುಬ

೪

# ಬಂಧುತ್ವ ಮತ್ತು ವಿವಾಹ

## ಕುಟುಂಬ ಮತ್ತು ಬಂಧುತ್ವ ಸಂಘಟನೆ

ಭಾರತದಾದ್ಯಂತ ಬುಡಕಟ್ಟುಗಳು ಸಾಮಾನ್ಯವಾಗಿ ಪಿತೃಪ್ರಧಾನ ಕುಟುಂಬಗಳನ್ನು ಹೊಂದಿವೆ. "ದಕ್ಷಿಣ ಭಾರತದ ಕೆಲವು ಬುಡಕಟ್ಟುಗಳನ್ನು ಹೊರತುಪಡಿಸಿ ಮತ್ತು ಕೇರಳದ ನಾಯರ್‌ಗಳನ್ನು ಬಿಟ್ಟರೆ ಎಲ್ಲಾ ಕಡೆಗಳಲ್ಲಿ ಪಿತೃಪ್ರಧಾನ, ಪಿತೃವಂಶೀಯ ಮತ್ತು ಪಿತೃಸ್ಥಾನೀಯ ಕುಟುಂಬಗಳನ್ನು ಕಾಣಬಹುದಾಗಿದೆ"(ಗುರುಲಿಂಗಯ್ಯ, ಎಂ:೨೦೦೫:೨೪). ದಕ್ಷಿಣ ಭಾರತದವರಾದ ಅಲೆಮಾರಿ ಕುರುಬರು ಪಿತೃಪ್ರಧಾನ ಕುಟುಂಬ ವ್ಯವಸ್ಥೆಯನ್ನು ಪಾಲಿಸಿಕೊಂಡು ಬಂದಿದ್ದಾರೆ. ಇವರಲ್ಲಿ ಬಂಧುತ್ವ ಮತ್ತು ಆಸ್ತಿಯ ಹಂಚಿಕೆ ಪುರುಷರ ಮೂಲಕ ಆಗುವುದು. ಪುರುಷ ಕುಟುಂಬದ ಯಜಮಾನನಾಗಿರುತ್ತಾನೆ. ಕುಟುಂಬದ ಆಗು ಹೋಗುಗಳಿಗೆ ಇವನೇ ಜವಾಬ್ದಾರನಾಗಿರುತ್ತಾನೆ. ಮಹಿಳೆಗೆ ಸಂಪೂರ್ಣ ಸ್ವಾತಂತ್ರ್ಯ ವಿರುವುದಿಲ್ಲ. ವಾಸ್ತವಿಕವಾಗಿ ಬುಡಕಟ್ಟು ಜನರಾದ ಅಲೆಮಾರಿ ಕುರುಬ ಸಮುದಾಯದಲ್ಲಿ ಮಹಿಳೆಗೆ ಹೆಚ್ಚಿನ ಗೌರವವಿದೆ. ಪುರುಷನು ಗುಡಾರ(ಮನೆಯ)ದ ಯಾಜಮಾನನಾದರೂ, ಗುಡಾರದ ಒಳಜವಾಬ್ದಾರಿಯನ್ನು ಮಹಿಳೆಯರೇ ಹೊಂದಿರುತ್ತಾರೆ.

ಅಲೆಮಾರಿ ಕುರುಬರಲ್ಲಿ ಅವಿಭಕ್ತ ಕುಟುಂಬಗಳೇ ಹೆಚ್ಚಾಗಿ ಇರುವುದನ್ನು ಕಾಣುತ್ತೇವೆ. ಕುರಿ ಸಂಗೋಪನೆ ಮಾಡಲು ಹೆಚ್ಚಿನ ಸಂಖ್ಯೆಯಲ್ಲಿ ಜನರ ಅವಶ್ಯಕತೆ ಇರುವುದರಿಂದ ಅವಿಭಕ್ತ ಕುಟುಂಬ ಪದ್ಧತಿ ಇಂದಿಗೂ ಉಳಿದುಕೊಂಡಿದೆ. ಇವರಿಗೆ ಸಂಬಂಧಗಳಲ್ಲಿ ನಂಬಿಕೆ ಮತ್ತು ಭಾವನಾತ್ಮಕ ಗೌರವವಿರುವುದರಿಂದ ಇವರು ಒಟ್ಟಿಗೆ ಬದುಕಲು ಇಷ್ಟಪಡು ತ್ತಾರೆ. ಗುಡಾರಗಳನ್ನು ಜನಸಂಖ್ಯೆಗನುಗುಣವಾಗಿ ನಿರ್ಮಿಸಿಕೊಂಡರೂ ಊಟೋಪಚಾರ ಗಳು, ಸಾಂಸ್ಕೃತಿಕ ಆಚರಣೆಗಳು, ಹಬ್ಬ ಹರಿದಿನಗಳನ್ನು ರಕ್ತ ಸಂಬಂಧಿಗಳೆಲ್ಲರು ಕೂಡಿ ಆಚರಿಸುತ್ತಾರೆ. ಆಸ್ತಿ ಮತ್ತು ಕುರಿ ಸಂಪತ್ತನ್ನು ಒಟ್ಟಾಗಿ ಹೊಂದಿರುತ್ತಾರೆ. ಇವರಲ್ಲಿ ಹಿರಿಯ ಯಜಮಾನ ಮನೆಯ ಕಾರ್ಯವೈಖರಿ ಗಳನ್ನು ನಿರ್ವಹಿಸುತ್ತಾನೆ. ಆತನೇ ಮನೆಯ ಮುಖ್ಯಸ್ಥನಾಗಿದ್ದು ಮನೆಯ ಉಳಿದ ಸದಸ್ಯರು ಇವನನ್ನು ಅನುಸರಿಸಬೇಕು. ಯಾವುದೇ ತೀರ್ಮಾನ ತೆಗೆದುಕೊಳ್ಳುವಾಗ ಮುಖ್ಯಸ್ಥನ ನಿರ್ಣಯವೇ ಅಂತಿಮವಾಗಿರುತ್ತದೆ. ಅಲೆಮಾರಿ ಕುರುಬ ಸಮುದಾಯಗಳಲ್ಲಿ ವಿಭಕ್ತ ಕುಟುಂಬಗಳು ಇಲ್ಲವೆಂದಲ್ಲ. ಇತ್ತೀಚಿನ ದಿನಗಳಲ್ಲಿ

ಆಧುನೀಕರಣ ಪ್ರಭಾವದಿಂದ ವಿಭಕ್ತ ಕುಟುಂಬಗಳು ಅಲ್ಲಲ್ಲಿ ಕಂಡು ಬರುತ್ತವೆ. ಇಂತಹ ಕುಟುಂಬಗಳಲ್ಲಿ ಗಂಡ-ಹೆಂಡತಿ ಮತ್ತು ಮದುವೆಯಾಗದ ಮಕ್ಕಳಿದ್ದು, ಒಂದೇ ಪೀಳಿಗೆಗೆ ಸೇರಿದವರಾಗಿರುತ್ತಾರೆ.

ಬಂಧುತ್ವ ಸಂಘಟನೆ : ಅಲೆಮಾರಿ ಕುರುಬ ಸಮುದಾಯದ ವಿವಾಹಿತ ಮಹಿಳೆ ಗಂಡನ ಮನೆಯಲ್ಲಿರುವುದು ಹಾಗೂ ಪುರುಷ ಅವಲಂಬಿತ ರೂಢಿಗಳನ್ನೊಳಗೊಂಡ ಪಿತೃಪ್ರಧಾನ ಸಮುದಾಯ ವಾಗಿರುವುದನ್ನು ನಾವು ಈಗಾಗಲೇ ತಿಳಿದುಕೊಂಡಿದ್ದೇವೆ. ಅವರು "ತಮ್ಮ ಬಂಧು-ಬಳಗದವರನ್ನು ದಾಯಾದಿಗಳು ಹಾಗೂ ನೆಂಟರು ಎಂದು ಎರಡು ವಿಧವಾಗಿ ವರ್ಗೀಕರಿಸುತ್ತಾರೆ. ಪಿತಾರ್ಜಿತ ಆಸ್ತಿಯಲ್ಲಿ ಪಾಲು ಪಡೆಯುವ ಎಲ್ಲಾ ಪುರುಷರನ್ನು ದಾಯಾದಿಗಳೆಂದು ಅಥವಾ ಅಣ್ಣ-ತಮ್ಮಂದಿರೆಂದು, ಇತರರನ್ನು ಬೀಗರೆಂದು ಕರೆಯ ಲಾಗುತ್ತದೆ. ಕುಲ ಹಾಗೂ ವಂಶದವರೆಲ್ಲಾ ದಾಯಾದಿ ಗಳಾದರೆ, ಮದುವೆ ಮುಖಾಂತರ ಸಂಬಂಧ ಬೆಳೆಸಿದವರು ನೆಂಟರೆನಿಸಿಕೊಳ್ಳುತ್ತಾರೆ. ದಾಯಾದಿಗಳು ಸ್ವಗ್ರಾಮಗಳಲ್ಲಿ ಒಂದೇ ವಠಾರಗಳಲ್ಲಿ ವಾಸಿಸುತ್ತಾರೆ. ಮನೆ, ಜಮೀನು ಹಂಚಿಕೊಳ್ಳುವುದಲ್ಲದೆ ಹಬ್ಬ-ಹರಿದಿನ, ಮದುವೆ, ಮರಣ ಮುಂತಾದವುಗಳಲ್ಲಿ ಸಾಮೂಹಿಕವಾಗಿ ಪಾಲ್ಗೊಳ್ಳುತ್ತಾರೆ. ಹಾಗೆಯೇ ಅವರು ನೆರೆಹೊರೆಯವರಾಗಿ ವಾಸಿಸುತ್ತಿರುವುದರಿಂದ ಆಪತ್ತು ಅಥವಾ ತೊಂದರೆಗಳು ಬಂದಾಗ ಬಂಧು-ಬಳಗದವರು ನೆರವಿಗೆ ಬರುತ್ತಾರೆ"(ಅದೇ:೨೫).

ಧರ್ಮಾಚರಣೆಯ ವಿಷಯವಾಗಿ ಹೇಳುವುದಾದರೆ ದಾಯಾದಿಗಳು ಒಂದೇ ಕುಲ ಹಾಗೂ ವಂಶಕ್ಕೆ ಸೇರಿರುವುದರಿಂದ ದೇವರುಗಳನ್ನು ಹಾಗೂ ಜಾತ್ರೆ ಹಬ್ಬಗಳನ್ನು ಒಟ್ಟಿಗೆ ಸೇರಿ ಆಚರಿಸುತ್ತಾರೆ. ಜಾತ್ರೆ, ಹಬ್ಬ ಮತ್ತು ಮದುವೆಗಳಲ್ಲಿ ಇವರ ಬಂಧುತ್ವದ ಸಂಬಂಧ ಮಹತ್ವದ ಪಾತ್ರವಹಿಸುತ್ತದೆ. ಅಂದರೆ ಒಂದು ಊರಿನಲ್ಲಿ ಒಂದು ವಂಶ ಅಥವಾ ಕುಲಕ್ಕೆ ಸಂಬಂಧಿಸಿದ ವ್ಯಕ್ತಿಗಳಿದ್ದರೆ ಇನ್ನೊಂದು ಊರು ಅಥವಾ ಪ್ರದೇಶದಲ್ಲಿ ಅದೇ ಕುಲ ಅಥವಾ ವಂಶಕ್ಕೆ ಸೇರಿದ ವ್ಯಕ್ತಿಗಳಿರುತ್ತಾರೆ. ಮದುವೆ ಸಂದರ್ಭದಲ್ಲಿ ಇಂತಹ ವ್ಯಕ್ತಿಗಳು ಒಂದೆಡೆ ಸೇರಿದರೆ ಅವರು ಬೇರೆ ಊರು ಅಥವಾ ಬೇರೆ ಪ್ರದೇಶದವರಾದರೂ ಕುಲ ಸಂಬಂಧಿ ದೃಷ್ಟಿಯಲ್ಲಿ ಆತ್ಮೀಯರಾಗಿ ಮಾತನಾಡುತ್ತಾರೆ. ಕೆಲವೊಮ್ಮೆ ಒಂದೇ ಬಳಿಯ ಜನರು ಇನ್ನೊಂದು ಬಳಿಯ ಜನರನ್ನು ವಿನೋದ (ತಮಾಷೆ) ಮಾಡುವುದು, ಛೇಡಿಸುವುದು, ತಮಾಷೆಗಾಗಿ ಪೀಡಿಸುವರು. ಉದಾಹರಣೆಗೆ ಅಲೆಮಾರಿ ಕುರುಬ ಸಮುದಾಯದ ಕರಗಾರ ಬಳಿಯವರು ಅಥವಾ ಕುಲದವರು ಅದೇ ಸಮುದಾಯದ ಇನ್ನೊಂದು ಬಳಿಯನ್ನು ಅಂದರೆ ಕೌಲಪುರೆ ಬಳಿಯವರನ್ನು ತಮಾಷೆ ಮಾಡುವುದನ್ನು ಕಾಣುತ್ತೇವೆ. ತಮ್ಮ ಕುಲವೇ ಶ್ರೇಷ್ಠ ನಿಮ್ಮ ಕುಲವೇ ಕಡಿಮೆ ಮಟ್ಟದ್ದು ಎಂದು ಛೇಡಿಸುತ್ತಾರೆ.

ಎಲ್ಲ ಮತಧರ್ಮಗಳಲ್ಲಿ ಸೋದರ ಸಂಬಂಧಗಳಿರುವಂತೆ ಅಲೆಮಾರಿ ಕುರುಬರಲ್ಲಿಯೂ ತಂದೆ-ತಾಯಿ, ಅಕ್ಕ-ಅಣ್ಣ, ತಮ್ಮ-ತಂಗಿ, ಅಳಿಯ-ಮಾವ, ಅತ್ತೆ-ಸೊಸೆ, ಮಗ-ಮಗಳು, ಮೊಮ್ಮಗ-ಮೊಮ್ಮಗಳು, ಅಜ್ಜ-ಅಜ್ಜಿ ಮುಂತಾದ ಬಂಧುತ್ವ ಪದಗಳು ಬಳಕೆಯಲ್ಲಿವೆ.

## ಕುಲ-ಬಳಿ ಅಥವಾ ಬೆಡಗುಗಳು

ಕುಲ ಅಥವಾ ಬಳಿ ಎಂಬುದು ವಂಶಾನುಕ್ರಮ ಬಂಧುಗಳ, ಸಂಬಂಧಗಳ ಆಧಾರದ ಮೇಲೆ ರಚಿತವಾಗಿರುತ್ತದೆ. ಸಮುದಾಯದ ಸದಸ್ಯರೆಲ್ಲರು ಪೂರ್ವಜರ ವಂಶಾವಳಿಯ ಜೊತೆಗೆ ಸಂಬಂಧವಿದೆ ಎಂದು ನಂಬುತ್ತಾರೆ. ಇಲ್ಲಿ ಕುಲವನ್ನು ಪ್ರಾಣಿ, ಪಕ್ಷಿ, ಮರ, ಬಳ್ಳಿ ಕೆಲವೊಂದು ವ್ಯಕ್ತಿಗಳಿಗೆ ಸಂಬಂಧಿಸಿದಂತೆ ಸಂದರ್ಭಕ್ಕೆ ತಕ್ಕಂತೆ ರಚಿಸಿಕೊಂಡಿರುತ್ತಾರೆ. ಸಾಮಾನ್ಯವಾಗಿ ಕುಲ, ಬಳಿ ಅಥವಾ ಬೆಡಗು "ಒಬ್ಬ ನಿರ್ದಿಷ್ಟ ಪೂರ್ವಜರಿಂದ ಉದ್ಭವಿಸಿದ ಸಂಬಂಧಿಕರ ಒಂದು ಸಮೂಹವಾಗಿದೆ". ವಂಶಾವಳಿಯನ್ನು ಮೂಲ ದಂಪತಿಗಳಿಂದ ಗುರುತಿಸಲಾಗುವುದು. ಒಮ್ಮೊಮ್ಮೆ ಕುಟುಂಬ ದೊಡ್ಡದಾಗಿ ಬೇರೆ ಬೇರೆಯಾದರೂ ತಮ್ಮ ಪೂರ್ವಜರೊಬ್ಬರಿಂದ ಸೃಷ್ಟಿಯಾಗಿದ್ದೇವೆಂಬ ನಂಬಿಕೆ ಬುಡಕಟ್ಟು ಸಮುದಾಯಗಳಲ್ಲಿರುವುದನ್ನು ಕಾಣುತ್ತೇವೆ. ಅಂತೆಯೇ ಅಲೆಮಾರಿ ಕುರುಬ ಸಮುದಾಯವು ಈ ನಂಬಿಕೆಯಿಂದ ಹೊರತಾಗಿಲ್ಲ.

ಪ್ರಾಚೀನ ಕಾಲದಲ್ಲಿ ಅಲೆಮಾರಿ ಕುರುಬರು ತಮ್ಮ ಕುರಿಗಳ ಸಾಕಣೆ ಮತ್ತು ರಕ್ಷಣೆಗಾಗಿ ಮೇವು-ನೀರು ಇರುವ ಪ್ರದೇಶಗಳನ್ನು ಗುರುತಿಸಿ ಹಟ್ಟಿಗಳನ್ನು ಕಟ್ಟಿಕೊಂಡು ಗುಂಪಾಗಿ ಅಲೆದಾಡುತ್ತಿದ್ದರು. ಬೆಟ್ಟ-ಗುಡ್ಡದಲ್ಲಿ ಬೀಡುಬಿಟ್ಟು ವಾಸಿಸುತ್ತಿದ್ದರು. ಗುಂಪಿನಿಂದ ಪ್ರತ್ಯೇಕತೆ ಉಂಟಾದಾಗ ತಮ್ಮದೇ ಆದಂತಹ ಪ್ರಾಣಿ, ಪಕ್ಷಿ, ಗಿಡ ಅಥವಾ ಬಳ್ಳಿಗಳನ್ನು ಸಂಕೇತವಾಗಿ ಇಟ್ಟುಕೊಂಡಿರು ತ್ತಿದ್ದರು. ಇವೇ ಪ್ರಾಚೀನ ಕಾಲದ ಅಲೆಮಾರಿ ಕುರುಬರ ಗುಂಪಿನ ಹೆಸರುಗಳು. ಕಾಲಾಂತರದಲ್ಲಿ ಇವೇ ಬೆಡಗುಗಳಾಗಿ ರೂಪಾಂತರಗೊಂಡವು. ಈ ಹಿನ್ನಲೆಯಲ್ಲಿ ಕರುಳು-ಬಳ್ಳಿಯವರೆಲ್ಲ ಒಂದೇ ಬೆಡಗಿನವರಾದರು. ಇವರು ತಮ್ಮ ಎಲ್ಲಾ ಬೆಡಗುಗಳ ನೆನಪಿಗಾಗಿ ಪ್ರತಿಯೊಂದು ಬೆಡಗುಗಳ ಆಧಾರದ ಮೇಲೆ ಅವರವರ ಮನೆತನದ ಹೆಸರನ್ನು ಅಡ್ಡ ಹೆಸರುಗಳಿಂದ ಕರೆಯುತ್ತಾರೆ. ತಮ್ಮ ಹೆಸರು ಅಥವಾ ವಿಳಾಸ ಹೇಳುವಾಗ ಹೆಸರಿನ ಕೊನೆಯಲ್ಲಿ ಅವರ ಕುಲ ಅಥವಾ ಬೆಡಗನ್ನು ಸೇರಿಸಿ ಹೇಳುವುದು ವಾಡಿಕೆ. ಇದರಿಂದ ಆ ವ್ಯಕ್ತಿ ಯಾವ ಕುಲ ಅಥವಾ ಬೆಡಗಿಗೆ ಸೇರಿದವನೆಂಬುದು ಸುಲಭವಾಗಿ ತಿಳಿಯಲು ಸಾಧ್ಯವಾಗುತ್ತದೆ. ಉದಾಹರಣೆಗೆ ಭೀರಪ್ಪ ಬಾಳು ಭಾವಸೆ, ಸುಭಾಷ್ ಸಿದ್ಧಪ್ಪ ಡೋಣೆ, ಅಪ್ಪಣ್ಣ ಸಿದ್ದಪ್ಪ ಬನ್ನೇ, ಲಿಂಗಪ್ಪ ಸತ್ಯಪ್ಪ ಕೌಲಪುರೆ ಇತ್ಯಾದಿ ಹೆಸರುಗಳು ವ್ಯಕ್ತಿಗಳ ಮನೆತನ ಮತ್ತು ಬೆಡಗುಗಳನ್ನು ಸೂಚಿಸುತ್ತವೆ. ಈ ಬೆಡಗುಗಳು ರಕ್ತ ಸಂಬಂಧದ ಬೇರೆ ಬೇರೆ ಗುಂಪುಗಳನ್ನು ನಿರ್ದೇಶಿಸುತ್ತವೆ. ಅಲೆಮಾರಿ ಕುರುಬರು ನೆಂಟಸ್ತಿಕೆ ಬೆಳೆಸುವ ಸಂದರ್ಭದಲ್ಲಿ ಬೆಡಗುಗಳಿಗೆ ಹೆಚ್ಚಿನ ಮಹತ್ವ ನೀಡುತ್ತಾರೆ. ಒಂದೇ ಬೆಡಗಿಗೆ ಸೇರಿದವರು ಅಥವಾ ಒಳಬಾಂಧವ್ಯವಗಳು, ಸೋದರ ಸಂಬಂಧ, ಬೇರೆ ಬೆಡಗಿನವರು ಅಥವಾ ಹೊರ ಬಾಂದವ್ಯಗಳು, ನೆಂಟರ ಸಂಬಂಧ ಎಂಬ ಕಾರಣಕ್ಕಾಗಿ ಒಳಬಾಂಧವ್ಯದಲ್ಲಿ ವಿವಾಹ ನಿಷೇಧವಿದ್ದು ಹೊರ ಬಾಂದವ್ಯದಲ್ಲಿ ವಿವಾಹ ನಡೆಸುತ್ತಾ ಬಂದಿರುವುದನ್ನು ನಾವು ಕಾಣುತ್ತೇವೆ. ಅಂದರೆ ನೆಂಟಸ್ತಿಕೆ ಮಾಡುವಾಗ ಬೇರೆ ಬೆಡಗಿನವರನ್ನು

ಗುರುತಿಸಿ ಹೆಣ್ಣು ಕೊಡುವ ಮತ್ತು ತರುವುದನ್ನು ನೋಡುತ್ತೇವೆ. ಉದಾಹರಣೆ ಗವಡೆ + ಗವಡೆ, ಕರಗಾರ + ಕರಗಾರ, ಕೌಲಪುರೆ + ಕೌಲಪುರೆ ಇಂಥವು ಸಮ ಬೆಡಗುಗಳಾಗಿದ್ದು ಇವುಗಳ ನಡುವೆ ವಿವಾಹ ನಿಷಿದ್ಧವಾಗಿದೆ. ಆದರೆ ಗವಡೆ + ಕರಗಾರ, ಕೌಲಪುರೆ + ಗವಡೆ, ಕರಗಾರ + ಕೌಲಪುರೆ ಈ ರೀತಿಯ ಬೆಸ ಬೆಡಗುಗಳಲ್ಲಿ ವೈವಾಹಿಕ ಸಂಬಂಧ ಬೆಳಸಲು ಅರ್ಹವಾಗುತ್ತವೆ. ಇದರ ಸ್ಪಷ್ಟನೆಗಾಗಿ ಕ್ಷೇತ್ರಕಾರ್ಯದಿಂದ ಕಂಡುಕೊಂಡ ಬೆಡಗುಗಳನ್ನು ಇಲ್ಲಿ ಕೊಡಲಾಗಿದೆ.

ಕೋಷ್ಟಕ: ೪.೧ ಅಲೆಮಾರಿ ಕುರುಬರ ಬೆಡಗುಗಳು

| ಬೆಡಗು | ಕುಟುಂಬಗಳ ಸಂಖ್ಯೆ |
|---|---|
| ಅನುಷೆ | ೦೮ |
| ಅವಾಡಿಖಾನ್ | ೦೫ |
| ಬನ್ನೇ | ೩೬ |
| ಬನ್ನೇಗೋಳ್ | ೦೨ |
| ಬೋರಗೊಂಡೆ | ೦೪ |
| ಬೋರಾಟಿವಾಳ್ | ೦೫ |
| ಚೆಂಡ್ಕೆ | ೦೪ |
| ಚೊಪಡೆ | ೦೩ |
| ದಿವಟೆ | ೦೬ |
| ಡೋಣೆ | ೦೮ |
| ಡೊಂಗರೆ | ೧೦ |
| ಗವಂಡೆ | ೦೨ |
| ಗವಡೆ | ೨೪ |
| ಗೋಸಂಡೆ | ೦೭ |
| ಗೋಸರವಾಡೆ | ೦೨ |
| ಗೌಡ್ನರು | ೦೫ |
| ಹಡಕರ್ | ೧೦ |
| ಹೊಗಡೆ | ೦೧ |
| ಹೊನ್ನೆಬನ್ನೇ | ೦೩ |
| ಹೊನ್ನೆಶಿಂಗಾಡಿ | ೧೧ |
| ಝುಂಡೆ | ೧೨ |
| ಕರಗಾರ | ೨೫ |

| | |
|---|---|
| ಕವಳೆ | ೧೦ |
| ಕಾಗನೇಕರ್ | ೦೫ |
| ಕೊಳಸೆ | ೦೫ |
| ಕೊರಲ್ಲೆರ್ | ೦೫ |
| ಕೋಡೆ | ೦೫ |
| ಕೋಳಕರ್ | ೦೬ |
| ಕೌಲಾಪುರೆ | ೨೯ |
| ಲಟ್ಟೆ | ೧೫ |
| ಲಾಂಡೆ | ೧೫ |
| ಲಿಂಗಗೋಳ್ | ೦೨ |
| ಮುರಡೆ | ೦೩ |
| ಮುತ್ತಿನವರು | ೦೨ |
| ಮುತ್ತುಮಾಣಿಕ್ಯ | ೦೫ |
| ನರಾಟೆ | ೨೨ |
| ಪಡುವಾಳಕರ | ೦೬ |
| ರಾಣೆ | ೦೯ |
| ರಾಣೆಗೆ | ೧೨ |
| ಸೆಂಡಿಗೆ | ೦೫ |
| ಶಿಂಗಡೆ | ೦೫ |
| ವಾಸ್ಕರ್ | ೦೬ |
| ಯಮಗಾರ್ | ೨೦ |
| ಒಟ್ಟು | ೩೮೬ |

ಅಲೆಮಾರಿ ಕುರುಬರು ಬೆಡಗುಗಳಿಂದ ಸಂಘಟನೆಯುಳ್ಳವರಾಗಿದ್ದಾರೆ. ಮದುವೆ ಯಂತಹ ಮಂಗಳ ಕಾರ್ಯದಲ್ಲಿ ಮತ್ತು ಧಾರ್ಮಿಕ ಆಚರಣೆಯಲ್ಲಿ ಒಂದೇ ಬೆಡಗಿನವರು ಒಂದುಗೂಡಿಕೊಳ್ಳುತ್ತಾರೆ. ಒಂದು ಕಾಲಕ್ಕೆ ಬೆಡಗುಗಳು ವಾಸಿಸುವ ಹಟ್ಟಿಯ ನಾಮ ಗಳಾಗಿದ್ದವು. ಕಾಲಚಕ್ರದಲ್ಲಿ ಇಂದು ಮದುವೆಯಂತಹ ಶಿಷ್ಟಾಚಾರದಲ್ಲಿಯೂ, ಧಾರ್ಮಿಕ ಆಚರಣೆಯಲ್ಲಿ ಕುಲ-ಬೆಡಗುಗಳು ಪ್ರಮುಖ ಪಾತ್ರವಹಿಸುತ್ತಲಿವೆ. ಅಲೆಮಾರಿ ಕುರುಬರಲ್ಲಿ ಹಲವಾರು ಬೆಡಗು ಹಾಗೂ ಅನೇಕ ವಿಧದ ಒಳಬೇಧಗಳಿವೆ. ಇವುಗಳನ್ನು ರಹಸ್ಯವಾಗಿಯೇ ಹೇಳುವರು. ಆದರೆ ಅಲೆಮಾರಿ ಕುರುಬ ಸಮುದಾಯದವರೆಲ್ಲರು ತಮ್ಮ ಜಾತಿಯ ಹೆಸರು ಬೇರೆಯವರಿಗೆ ಹೇಳುವ ಸಂದರ್ಭದಲ್ಲಿ ಹಾಲುಮತದವರೆಂದು ಹೇಳುತ್ತಾರೆ.

## ಮದುವೆ

ಎಲ್ಲಾ ಸಮುದಾಯಗಳಲ್ಲೂ ಮದುವೆ ಎಂಬ ಉದ್ದೇಶ ಒಂದೇ ಆಗಿದ್ದರೂ ಅದರ ಆಚರಣೆ ಮಾತ್ರ ಒಂದೇ ತೆರನಾಗಿಲ್ಲ. ಸಮುದಾಯ ನೆಲೆಗೊಂಡ ಪರಿಸರ, ಬದುಕಿನ ಸ್ಥಿತಿಗತಿ, ಸಾಮಾಜಿಕ ಮನೋಧರ್ಮ, ನಂಬಿಕೆ, ಪದ್ಧತಿ ಇತ್ಯಾದಿ ಅಂಶಗಳಿಗನುಣವಾಗಿ ಆಚರಣೆಗಳು ಭಿನ್ನ ರೂಪ ತಾಳುತ್ತವೆ. ನಿರ್ದಿಷ್ಟ ಸಮುದಾಯವೊಂದರಲ್ಲಿ ಜರುಗುವ ಮದುವೆ ಆಚರಣೆಗಳು ಆ ಸಮುದಾಯದ ಸಂಸ್ಕೃತಿಯನ್ನು ತೋರಿಸಿಕೊಡುತ್ತವೆ. ಮದುವೆ ಆ ಸಮುದಾಯದ ಒಂದು ಸಾಂಸ್ಕೃತಿಕ ಕ್ರಿಯೆ ಯಾಗಿದೆ. ಇಲ್ಲಿ ಸಮುದಾಯದ ಬಹುಪಾಲು ಜನರು ಆ ಕ್ರಿಯೆಯಲ್ಲಿ ಭಾಗಿಯಾಗುವುದನ್ನು ಕಾಣಬಹುದು.

ಕಾಲಕ್ಕನುಗುಣವಾಗಿ ಹಲವು ಪ್ರಭಾವಗಳಿಗೆ ಒಳಗಾಗಿ ಸಂಸ್ಕೃತಿ ಬದಲಾದಂತೆ ಈ ಆಚರಣೆಯಲ್ಲಿ ಬದಲಾವಣೆಯಾಗುವುದು ಸಹಜ. "ಪ್ರಕೃತಿಗೆ ಸಾಮಿಪ್ಯವಾದ ಕುರಿ ಕಾಯುವುದನ್ನು ಪರಂಪರಾಗತವಾಗಿ ಜೀವನಾಧಾರ ಉದ್ಯೋಗವನ್ನಾಗಿ ಮುಂದುವರೆಸಿ ಕೊಂಡು ಬಂದಿರುವ ಕುರುಬರ ಮದುವೆ ಆಚರಣೆಗಳು ತೀರಾ ಸಂಪ್ರದಾಯಬದ್ಧವಾಗಿವೆ" (ಗುಬ್ಬಣ್ಣನವರ, ಶಿವಾನಂದ:೧೯೯೩:೨೧). ಈಗಲೂ ಸಹ ಹಳೆಯ ಸಂಪ್ರದಾಯಗಳಾದ ಕುರಿಬಲಿ, ದೈವದ ಊಟ, ಪ್ರಪಂಚವನ್ನು ಕಂಡು ಅರಿಯದ ಕಂದಮ್ಮಗಳಿಗೆ ತಾಳಿಕಟ್ಟಿ ಸಂಸಾರದಲ್ಲಿ ತೇಲಿ ಬಿಡುವ ಆಚರಣೆ ಇನ್ನೂ ಜೀವಂತ ಸಾಕ್ಷಿಯಾಗಿವೆ.

ಅಲೆಮಾರಿ ಕುರುಬರ ಮದುವೆ ಆಚರಣೆಗಳು ನಾಲ್ಕು ಹಂತಗಳಲ್ಲಿ ಘಟಿಸುತ್ತವೆ. ಅವನ್ನು, ಪ್ರಾಥಮಿಕ ಶಾಸ್ತ್ರಾಚರಣೆಗಳು, ಸಿದ್ಧಾತ ಆಚರಣೆಗಳು, ಪ್ರಧಾನ ಆಚರಣೆಗಳು ಮತ್ತು ಪೂರಕ ಶಾಸ್ತ್ರಾಚರಣೆಗಳೆಂದು ವಿಂಗಡಿಸಲಾಗುವುದು.

### ಪ್ರಾಥಮಿಕ ಶಾಸ್ತ್ರಾಚರಣೆಗಳು

**ಕುರಿ ಬೇಟೆ :** ಅಲೆಮಾರಿ ಕುರುಬರು ತಮ್ಮ ಗಂಡು ಮಕ್ಕಳ ಮದುವೆ ಮಾಡುವಾಗ ಹೆಣ್ಣು ದೇವತೆಯಾದ ಸತ್ಯಬಾಯಿ ಹೆಸರಿನಲ್ಲಿ 'ಕುರಿ ಬ್ಯಾಟಿ' ಮಾಡುತ್ತಾರೆ. ಇದನ್ನು ೩ ತಿಂಗಳ ಮಗುವಿನಿಂದ ಹಿಡಿದು ಮದುವೆಯಾಗುವ ಇಪ್ಪತ್ತರಿಂದ ಇಪ್ಪತ್ತೈದು ವರ್ಷ ಯುವಕರವರೆಗೆ ಮಾಡುವುದು ರೂಢಿ. ಇದಾದ ಮೇಲೆ ಮದುವೆಯಾಗಲು ಅರ್ಹ, ನಂತರ ತಮಗೆ ಅನುಕೂಲವೆನಿಸಿದಾಗ ಮದುವೆ ಮಾಡಬಹುದು. ಖರ್ಚು ಕಡಿಮೆ ಮಾಡುವ ದೃಷ್ಟಿಯಿಂದ ಬಹುತೇಕರು ಸಾಮೂಹಿಕವಾಗಿ ಬ್ಯಾಟಿ ಮಾಡುತ್ತಾರೆ. ಸಾಮೂಹಿಕ ಬೇಟೆ ನಡೆಯುವಾಗಲೂ ನಿರ್ದಿಷ್ಟ ಬೆಡಗಿನ ಅಣ್ಣ-ತಮ್ಮಂದಿರು ಮಾತ್ರ ಗುಂಪಾಗಿ ಸೇರಿ ಆಚರಣೆ ಮಾಡುತ್ತಾರೆ. ಒಂದು ವೇಳೆ ಅವರು ಬಹಳ ದೂರವಿದ್ದರೂ ಆ ದೇವರ ಹೆಸರಿನಲ್ಲಿ ಕುರಿಬಲಿ ಕೊಟ್ಟು ಆ ದೇವತೆಗೆ ಪೂಜೆ ಮಾಡಿಕೊಂಡು ಬರಬೇಕು.

"ನಮ್ಮಲ್ಲಿ ದೇವತೆಗೆ ಕುರಿಬ್ಯಾಟಿ ಮಾಡಿದ ಮೇಲೆ ಹುಡುಗ ಮದುವೆಯಾಗಲು ಅರ್ಹನಾದಂತೆ. ಇದಾದ ಮೇಲೆ ಮದುವೆ ಮುಗಿದ ಹಾಗೆ. ನಂತರ ಅವರು ವರ್ಷದೊಳಗೆ, ಮೂರು ವರ್ಷ ಅಥವಾ ಐದು ವರ್ಷದಲ್ಲಿ ಮದುವೆ ಮಾಡಿಕೊಳ್ಳಬಹುದು" (ಮಾಹಿತಿ:

ಲಿಂಗಪ್ಪ ಸಾವಿರಕುರಿ, ನವಿಲಿಹಾಳ್). ಖರ್ಚು ಕಡಿಮೆ ಮಾಡುವ ಉದ್ದೇಶದಿಂದ ಮೂರು ವರ್ಷದ ಗಂಡು ಮಗವಿಗೂ ಈ ಕಾರ್ಯಕ್ರಮವನ್ನು ಇತರೆ ಗಂಡು ಮಕ್ಕಳ ಜೊತೆಗೆ ಕೂಡಿಸಿ ಮಾಡಿ ಮುಗಿಸುತ್ತಾರೆ ಇದಾದ ಮೇಲೆ ಅವರು ಮದುವೆಯನ್ನು ಬೆಳೆದು ದೊಡ್ಡವನಾದ ಮೇಲೆ ಮಾಡಿಕೊಳ್ಳಬಹುದು. ಆದರೆ ಹಿಂದೆ ಈ ಕಾರ್ಯ ಮಾಡಿದ ಮೂರು ವರ್ಷದ ಮಗುವಿಗೆ ಆ ವರ್ಷದಲ್ಲಿಯೇ ಮದುವೆ ಮಾಡಿಬಿಡುತ್ತಿದ್ದರಂತೆ. ಈಗಲೂ ಬಹಳಷ್ಟು ಕುಟುಂಬಗಳು ಬಾಲ್ಯವಿವಾಹವನ್ನು ಆಚರಿಸುತ್ತವೆ.

**ಸಂಗಾತಿಯ ಆಯ್ಕೆ :** ಸಂಗಾತಿ ಆಯ್ಕೆಗೆ ಸಂಬಂಧಿಸಿದಂತೆ ಈ ಸಮುದಾಯದ ಯುವಕ ಯುವತಿಯರಿಗೆ ಸಂಪೂರ್ಣ ಸ್ವಾತಂತ್ರ್ಯವಿಲ್ಲ. ಸಂಗಾತಿಗಳ ಆಯ್ಕೆ ಪ್ರಕ್ರಿಯೆಯಲ್ಲಿ ಕುಟುಂಬದ ಹಿರಿಯರು, ಸಂಬಂಧಿಕರು ಮತ್ತು ತಂದೆ-ತಾಯಿಗಳ ತೀರ್ಮಾನವೇ ಪ್ರಮುಖ ವಾಗಿರುತ್ತದೆ. ಪ್ರಸ್ತುತ ಅಧ್ಯಯನಕಾರನಿಗೆ ಕಂಡುಬಂದಿರುವಂತೆ ಸಂಗಾತಿಗಳ ಆಯ್ಕೆಯನ್ನು ಬಹುಪಾಲು ಹಿರಿಯರೆ ಮಾಡುತ್ತಾರೆ. ಹಿರಿಯರು ಒಪ್ಪಿದವರನ್ನು ಗಂಡು ಅಥವಾ ಹೆಣ್ಣು ಮದುವೆಯಾಗಬೇಕಾಗುತ್ತದೆ. ಕೆಲವು ಸಲ ಗಂಡಿನ ಬಗ್ಗೆ ಹೆಣ್ಣಿನ ಒಪ್ಪಿಗೆಯನ್ನು ಪಡೆದಿರುವು ದಿಲ್ಲ. ಹೆಣ್ಣಿನ ಬಗ್ಗೆ ಗಂಡಿನ ಒಪ್ಪಿಗೆಯನ್ನು ಕೇಳುವುದಿಲ್ಲ. ಎಷ್ಟೋ ಸಂದರ್ಭಗಳಲ್ಲಿ ವಧು-ವರರು ಒಬ್ಬರಿಗೊಬ್ಬರು ಮುಖ ನೋಡುವುದು ಮದುವೆಯ ದಿನದಂದೇ ಆಗಿರುತ್ತದೆ. ಇವರು ಸಂಗಾತಿಯನ್ನು ಆಯ್ಕೆ ಮಾಡಿಕೊಳ್ಳುವಾಗ ಹೆಣ್ಣು ದೈಹಿಕವಾಗಿ ಗಟ್ಟಿ-ಮುಟ್ಟಾಗಿದ್ದು ಚಟುವಟಿಕೆ ಯಿಂದ ಕೆಲಸ-ಕಾರ್ಯಗಳನ್ನು ಮಾಡುವಂಥವಳನ್ನು ಆಯ್ಕೆ ಮಾಡುತ್ತಾರೆ. ಅಡವಿಯಲ್ಲಿ ಕುರಿ-ಮರಿ ಹಾಗೂ ಮಕ್ಕಳ ಪೋಷಣೆ ಜೊತೆಗೆ ಕುಟುಂಬದ ಕೆಲಸ ಕಾರ್ಯ ಗಳನ್ನು ನಿಭಾಯಿಸಿಕೊಂಡು ಹೋಗಬೇಕಾಗಿರುವುದರಿಂದ ಚಟುವಟಿಕೆಯಿಂದ ಕೂಡಿದ ಹೆಣ್ಣನ್ನೆ ಆಯ್ಕೆ ಮಾಡುವರು. ಕನ್ಯಾ ಆಯ್ಕೆ ಮಾಡುವಾಗ ಹುಡುಗಿಯ ಸೌಂದರ್ಯಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡದೆ, ಆ ಮನೆತನದ ಗೌರವ, ಹುಡುಗಿಯ ಲಕ್ಷಣಗಳು ಹಾಗೂ ತಮ್ಮ ಮನೆಗೆ ಹೊಂದಿಕೊಳ್ಳುವ ಅಂಶಗಳನ್ನು ಆಧಾರವಾಗಿಟ್ಟು ಕೊಳ್ಳಲಾಗುತ್ತದೆ.

**ಕನ್ಯೆ(ವಧು) ನೋಡುವುದು :** ಇವರು ಸಾಮಾನ್ಯವಾಗಿ ಸಂಬಂಧವನ್ನು ಬಳಗದಲ್ಲೆ ಬೆಳೆಸುತ್ತಾರೆ. ಮಾವನ ಮಗಳು, ಅಕ್ಕನ ಮಗಳು, ತಂಗಿಯ ಮಗಳನ್ನು ಮದುವೆ ಮಾಡಿ ಕೊಳ್ಳುತ್ತಾರೆ. "ಕನ್ಯೆ ತಮ್ಮ ಬಳಗದಲ್ಲೇ ಇರಲಿ ಅಥವಾ ಹೊರಗಿನವರೆ ಆಗಲಿ ಕನ್ಯೆಯನ್ನು ತಂದುಕೊಳ್ಳಬೇಕೆಂದು ಇಚ್ಛಿಸಿದಾಗ ಹೊತ್ತಿಗೆ ತೆಗೆಸಿ ಕೇಳುತ್ತಾರೆ. ಎಲ್ಲಾ ಒಳ್ಳೆಯದಾಗಿ ಕೂಡಿ ಬಂದರೆ ಶುಭ ದಿನವನ್ನು ನೋಡಿಕೊಂಡು ಕನ್ಯೆ ನೋಡಲಿಕ್ಕೆ ಹೋಗುತ್ತಾರೆ" ವರನಾಗುವವ ಮದುವೆಯ ಪ್ರಾಯಕ್ಕೆ ಬಂದಿದ್ದರೆ ಅವನನ್ನು ಇತ್ತೀಚಿನ ದಿನಗಳಲ್ಲಿ ಕನ್ಯೆಯನ್ನು ನೋಡಲಿಕ್ಕೆ ಕರೆದುಕೊಂಡು ಹೋಗಿ ತೋರಿಸುತ್ತಾರೆ. ಇನ್ನೂ ಪ್ರಾಯಕ್ಕೆ ಬಂದಿರದಿದ್ದರೆ ಅವನಿಗೆ ತಿಳಿಯುವುದಿಲ್ಲವೆಂದು ಹಿರಿಯರೇ ನಿರ್ಧರಿಸುತ್ತಾರೆ.

**ಕನ್ಯೆಯ ಲಕ್ಷಣ ಪರೀಕ್ಷೆ :** ದಾರಿ ಶಕುನಗಳು ಶುಭ ಕಂಡುಬಂದರೆ ನಂತರ ಗಮನಿಸುವ ಮುಂದಿನ ಅಂಶ ಕನ್ಯೆಯ ಅಂಗಲಕ್ಷಣಕ್ಕೆ ಸಂಬಂಧಿಸಿರುತ್ತದೆ. ಸುಳಿ ಶುದ್ಧ ಇದೆಯೊ

ಇಲ್ಲವೋ ಎಂಬುದನ್ನು ಪರೀಕ್ಷಿಸಿಯೆ ಕನ್ಯೆಯನ್ನು ಆಯ್ಕೆ ಮಾಡುತ್ತಾರೆ. ಕನ್ಯೆಗೆ ಎದುರು ಸುಳಿ ಇರಬಾರದು, ಎದುರು ಸುಳಿ ಇದ್ದರೆ ಕುಟುಂಬದ ಹಿರಿಯರಿಗೆ, ಗಂಡನಿಗೆ ಎದುರು ಮಾತಾನಾಡುತ್ತಾಳೆಂಬ ನಂಬಿಕೆ ಇದೆ. ಬೆರಳುಗಳು ಕಿರಿದಿರಬಾರದು, ಕಾಲು ದಪ್ಪವಾಗಿರ ಬಾರದು, ಮೊಣಕಾಲು ಬಡಿದಾಡ ಬಾರದು ಹಾಗೆಯೇ ಅಂಗೈ ನೋಡಿ ರೇಖೆ ಪರೀಕ್ಷಿಸಿ ಕನ್ಯೆಯನ್ನು ಮಾತನಾಡಿಸುತ್ತಾರೆ. "ಹೊಸ್ತಲಿ ದಾಟಿ ಬಾಮ್ಮ" ಎಂದು ಹೇಳುವ ಮೂಲಕ ಕಾಲು, ಬೆರಳು, ನಡಿಗೆಯನ್ನು ಪರೀಕ್ಷಿಸುತ್ತಾರೆ. ಈ ಎಲ್ಲಾ ಲಕ್ಷಣಗಳ ಪರೀಕ್ಷೆಯಲ್ಲಿ ಕನ್ಯೆ ಸರಿ ಹೊಂದಿ, ನೋಡಿದವರೆಲ್ಲರ ಮನಸ್ಸಿಗೆ ಸರಿಯೆನಿಸಿದರೆ ಆ ದಿನವೇ ಎಲೆ-ಅಡಿಕೆ, ಹಣ್ಣುಗಳಿಂದ ಉಡಿ ತುಂಬುತ್ತಾರೆ. ಇದು ಕನ್ಯೆಯನ್ನು ಒಪ್ಪಿರುವ ಸಂಕೇತ. ಇದಾದ ಮೇಲೆ ಚುರುಮುರಿ (ಮಂಡಕ್ಕಿ-ಕಾರ) ತಿಂದು ಚಹಾ ಕುಡಿದು ವರನ ಮನೆಯನ್ನು ನೋಡಲು ಕನ್ಯೆಯ ಕಡೆಯವರನ್ನು ಆಹ್ವಾನಿಸಿ ಹಿಂತಿರುಗುತ್ತಾರೆ. ಆದರೆ ಈ ಸಮಯದಲ್ಲಿ ಯಾವುದೇ ಕಾರಣಕ್ಕೂ ಕನ್ಯೆ ಮನೆಯಲ್ಲಿ ಊಟ ಮಾಡುವುದಿಲ್ಲ.

ನಿಶ್ಚಿತಾರ್ಥ : ಇದನ್ನು ಅಲೆಮಾರಿ ಕುರುಬರು 'ಬಾಟಿಗೆ' ಎಂದು ಕರೆಯುತ್ತಾರೆ. ಮದುವೆ ಮಾಡಿಕೊಳ್ಳುವ ಹೆಣ್ಣನ್ನು ಖಚಿತಪಡಿಸಿ ಕೊಳ್ಳುವುದೆಂದರ್ಥ. ಈ ಸಂಪ್ರದಾಯ ವನ್ನು ಎಲೆ ಹಂಚುವುದು, ಹೆಣ್ಣು ಗಟ್ಟಿ ಮಾಡುವುದು, ಸಕ್ಕರೆ ಹಂಚುವುದು, ವೀಳ್ಯೆ ಜಂಬ್ರ ಇತ್ಯಾದಿ ಹೆಸರುಗಳಿಂದ ಕರೆಯುತ್ತಾರೆ. ಒಪ್ಪಿಗೆಯ ಸಿಹಿ ಊಟವನ್ನು ಉಂಡ ಕೆಲವು ದಿನಗಳ ನಂತರ ಗಂಡಿನ ಮನೆಯವರು ಒಂದು ಶುಭದಿನ ನೋಡಿ ಕನ್ಯೆಯ ಮನೆಗೆ ಹೋಗಿ 'ನಿಶ್ಚಿತಾರ್ಥ' ಮಾಡುತ್ತಾರೆ. ನಿಶ್ಚಿತಾರ್ಥ ದಿನದಂದು ಮನೆ ದೇವರ ಪೂಜಾರಿ ಐದು ಬೆಡಗಿನವರಿಗೆ ಎಲೆ ತೆಗೆದಿಡುತ್ತಾನೆ. ಇವರೆಲ್ಲ ಈ ಕಾರ್ಯಕ್ಕೆ ಬಂದಿರಲಿ ಅಥವಾ ಬಾರದಿರಲಿ ಅವರ ಪಾಲಿನ ಎಲೆಯನ್ನು ಅವರಿಗೆ ಮುಟ್ಟಿಸಬೇಕೆಂಬುದು ನಿಯಮ. ಪೂಜಾರಿಯು ಎದ್ದು ನಿಂತು ಕನ್ಯೆಯ ಹಣೆಗೆ ಭಂಡಾರ ಹಚ್ಚಿ ಈ ಬೆಡಗಿನ (ಮನೆತನದ) ಹೆಣ್ಣು ಇಂತಹ ಬೆಡಗಿನ (ಮನೆತನದ) ಗಂಡಿಗೆ ಗಟ್ಟಿಯಾಯಿತೆಂದು ಜೋರಾಗಿ ಮೂರು ಸಾರಿ ಕೂಗುತ್ತಾನೆ. ನಂತರ ಅಲ್ಲಿ ಸೇರಿದ ಎಲ್ಲರಿಗೂ ವೀಳ್ಯೆ ಮತ್ತು ಸಕ್ಕರೆಯನ್ನು ಹಂಚುತ್ತಾರೆ. ಇಲ್ಲಿಗೆ ಈ ಕನ್ಯೆಗೆ ಈ ವರ ಎಂದು ಸಂಬಂಧ ನಿಶ್ಚಯವಾದಂತೆ. ಈ ನಿಶ್ಚಯ ಕಾರ್ಯವಾದ ಮೇಲೆ ಗಂಡಿನವರಾಗಲೀ ಹೆಣ್ಣಿನವರಾಗಲೀ ಈ ಸಂಬಂಧವನ್ನು ಮುರಿಯುವುದಕ್ಕೆ ಬರುವುದಿಲ್ಲ. ಈ ಕಾರ್ಯವಾದ ಮೇಲೆ ಮುಂದೆ ಎಂದಾದರೂ ಅನುಕೂಲ ವಾದಾಗ ಒಳ್ಳೆಯ ದಿನ ನೋಡಿ ಮದುವೆ ಮಾಡಿಕೊಳ್ಳಬಹುದು" (ಮಾಹಿತಿ: ಅಪ್ಪಣ ಪೂಜಾರಿ: ಸೌಂದಲಗ).

ಸಿದ್ಧತಾ ಆಚರಣೆಗಳು

**ಲಕ್ಷ್ಮಿಯ ಪೂಜೆ** :ಮದುವೆಗೆ ಮುಂಚೆ ಅಂದರೆ ೯ ಅಥವಾ ೧೧ ದಿನ ಮುಂಚಿತವಾಗಿ ವರನ ಮನೆಯಲ್ಲಿ ಲಕ್ಷ್ಮೀ ಪೂಜೆಯ ಆಚರಣೆ ನಡೆಯುತ್ತದೆ. ಆ ದಿನ ಮನೆಯಲ್ಲಿ ಎಲ್ಲರೂ ಸ್ನಾನ ಮಾಡಿ ಶುಭ್ರ ಬಟ್ಟೆ ಧರಿಸಬೇಕು. ತುಂಬಿದ ಬಿಂದಿಗೆಗೆ ಬಂಗಾರದ

ಒಡವೆಗಳಿಂದ ಅಲಂಕರಿಸಿ ಅದರ ಮುಂದೆ ಲಕ್ಷ್ಮಿ ಸೀರೆ, ಫಲ ತಾಂಬೂಲ ಇಟ್ಟು ಪೂಜಿಸುತ್ತಾರೆ. ಈ ಲಕ್ಷ್ಮಿ ಸೀರೆ ಪೂರ್ಣ ಕೆಂಪು ಬಣ್ಣದಿಂದ ಕೂಡಿರಬೇಕು. ಬೇರೆ ಯಾವ ಬಣ್ಣದ ಎಳೆಯೂ ಕೂಡಿರಬಾರದು. ಹೀಗೆ ಪೂಜಿಸುವ ಬಿಂದಿಗೆಯೇ ಲಕ್ಷ್ಮಿ. ಮಾಡಿದ ಸಿಹಿ ಅಡುಗೆಯನ್ನು (ಹೋಳಿಗೆ) ಲಕ್ಷ್ಮಿಗೆ ಎಡೆ ಇಡುತ್ತಾರೆ. ಈ ಅಡುಗೆಯನ್ನು ಮಾಡುವವರು ವರನ ಗುಂಪಿನ ಬೆಡಗಿಗೆ ಸೇರಿದ ಮುತ್ತೈದೆಯವರೇ ಆಗಿರಬೇಕು. ಸ್ನಾನ ಮಾಡಿ ಅಡುಗೆಗೆ ತೊಡಗಬೇಕು. ಅಡುಗೆ ಮಾಡುವಾಗ ಅಡುಗೆಯ ವಾಸನೆ ಹೊರಗೆ ಹೋಗದೆ ಹಾಗೆ ಕಿಟಕಿ, ಬಾಗಿಲುಗಳನ್ನು ಮುಚ್ಚಿರಬೇಕು. ಪೂಜೆ ಮುಗಿದು ನೈವೇದ್ಯ ಆಗುವವರೆಗೂ ಮುಚ್ಚಿದ ಕಿಟಕಿ, ಬಾಗಿಲುಗಳನ್ನು ತೆರೆಯುವಂತಿಲ್ಲ. ಲಕ್ಷ್ಮಿ ಪೂಜೆಗೆ ಮಾಡಿದ ಅಡುಗೆಯನ್ನು ವರನ ಮನೆತನದ ಅಣ್ಣ-ತಮ್ಮಂದಿರು ಮಾತ್ರ ಊಟ ಮಾಡಬೇಕು. ಆ ದಿನ ಮಾಡಿದ ಅಡುಗೆ ಯಲ್ಲಿ ಒಂದು ಅಗುಳನ್ನು ಹೊರಗೆ ಒಯ್ಯುವಂತಿಲ್ಲ. ಎಲ್ಲಿಗೂ ತುಂಬಿ ಕಳಿಸುವಂತಿಲ್ಲ. ಅದನ್ನು ಮನೆಯಲ್ಲೇ ಊಟ ಮಾಡಬೇಕು. ಅಲ್ಲದೇ ಊಟ ಮಾಡಿದ ಗಂಗಾಳಗಳನ್ನು ಹೊರಕ್ಕೆ ಚೆಲ್ಲುವಂತಿಲ್ಲ. ಮನೆಯೊಳಗೆ ಒಂದು ಮೂಲೆಯಲ್ಲಿ ತಗ್ಗು ತೋಡಿ ಎಲ್ಲ ಮುಸುರೆ ನೀರನ್ನು ಅದರಲ್ಲಿ ಹಾಕಿ ಮುಚ್ಚುತ್ತಾರೆ. ಅಲ್ಲದೆ ಲಕ್ಷ್ಮಿ ಕಾರ್ಯದ ದಿನ ಮತ್ತು ಮರುದಿನ ಮನೆಯೊಳಗೆ ಗುಡಿಸಿದ ಕಸವನ್ನೂ ಹೊರಗೆ ಎಸೆಯುವುದಿಲ್ಲ. ಲಕ್ಷ್ಮಿ ಕಾರ್ಯದ ದಿವಸ ಯಾವ ಕಾರಣಕ್ಕೂ ಲಕ್ಷ್ಮಿಯನ್ನು ಹೊರಗೆ ಹೋಗಲು ಬಿಡಬಾರದು, ಬಿಟ್ಟರೆ ಇನ್ನು ಮುಂದೆ ಎಂದೂ ಲಕ್ಷ್ಮಿ ಮನೆ ತುಂಬುವುದಿಲ್ಲ ಎಂಬ ನಂಬಿಕೆಯಿದೆ. ಆದುದರಿಂದ ಈ ಆಚರಣೆಯನ್ನು ಕಟ್ಟುನಿಟ್ಟಾಗಿ ಆಚರಿಸಲಾಗುತ್ತದೆ.

**ಮದುವೆಗೆ ಆಹ್ವಾನ**

ಇವರು ಕುರಿ ತಬ್ಬಿದ ಸುತ್ತಮುತ್ತಲಿನ ಗ್ರಾಮ, ಪಟ್ಟಣ ಅಥವಾ ನಗರಗಳಲ್ಲಿ ವಾರಕ್ಕೊಮ್ಮೆ ಸಂತೆ ಜರುಗುತ್ತವೆ. ಉದಾಹರಣೆಗೆ ಬಳ್ಳಾರಿ ಜಿಲ್ಲೆಯ ಶಿರಗುಪ್ಪದಲ್ಲಿ ಆದಿತ್ಯವಾರ, ಕಂಪ್ಲಿಯಲ್ಲಿ ಮಂಗಳವಾರ, ಬಳ್ಳಾರಿಯಲ್ಲಿ ಶುಕ್ರವಾರ, ರಾಯಚೂರು ಜಿಲ್ಲೆಯ ಸಿಂಧನೂರುನಲ್ಲಿ ಸೋಮವಾರ ದಂದು ನಡೆಯುತ್ತದೆ. ಒಂದು ವಾರದ ಅನುಭೋಗಕ್ಕೆ ಬೇಕಾಗುವಷ್ಟು ದೈನಂದಿನ ಬಳಕೆಯ ಸಾಮಾನುಗಳನ್ನು ಕೊಂಡುಕೊಳ್ಳಲು ಅಲೆಮಾರಿ ಕುರುಬರು ಸಂತೆಗೆ ಬರುತ್ತಿರುತ್ತಾರೆ. ಮದುವೆ ಮಾಡುವ ವಧು-ವರ ಕಡೆಯ ಸಂಬಂಧಿಕರು ಯಾವ ಪ್ರದೇಶದಲ್ಲಿ ಕುರಿಗಳನ್ನು ತಬ್ಬಿದ್ದಾರೆಂದು ಮೊದಲೇ ತಿಳಿದುಕೊಂಡು ಆ ಪ್ರದೇಶದ ಸಂತೆಗಳಿಗೆ ಹೋಗಿ ಲಗ್ನದ ಪತ್ರಗಳನ್ನು ನೀಡಿ ಅಥವಾ ಬಾಯಿಮಾತಿನ ಮೂಲಕ ಭಂಡಾರ ಮತ್ತು ಅಕ್ಕಿಕಾಳು ಕೊಟ್ಟು ಮದುವೆಗೆ ಆಹ್ವಾನಿಸುತ್ತಾರೆ. ಒಂದು ವೇಳೆ ಬಂಧುಗಳು ಹತ್ತಿರದವರಾಗಿದ್ದರೆ ಅವರಿದ್ದಲ್ಲಿಗೆ ಹೋಗಿ ಮದುವೆಗೆ ಆಹ್ವಾನಿಸುವರು.

**ಜವಳಿ(ಬಟ್ಟೆ) ತೆಗೆಯುವುದು**

ಇದನ್ನು ಅಲೆಮಾರಿ ಕುರುಬರು ಅರಿವೇ ತೆಗೆಯುವುದೆಂದು ಕರೆಯುತ್ತಾರೆ. ಮದುವೆ ದಿನವನ್ನು ಗೊತ್ತು ಮಾಡಿದ ಮೇಲೆ ಮದುವೆ ಅರಿವೆಕೊಳ್ಳಲು ತಮ್ಮ ಗ್ರಾಮದ

ಸಮೀಪವಿರುವ ಪಟ್ಟಣಕ್ಕೆ ಹೋಗುವ ದಿನವನ್ನು ನಿಗದಿ ಮಾಡುತ್ತಾರೆ. ಬಹಳಷ್ಟು ಅಲೆಮಾರಿ ಕುರುಬರು ನಿಪ್ಪಾಣಿ ಸುತ್ತ ಮುತ್ತಲಿನ ಗ್ರಾಮದವರಾದ್ದರಿಂದ ನಿಪ್ಪಾಣಿಗೆ ಹೋಗುತ್ತಾರೆ. ಅರಿವೆಕೊಳ್ಳಲು ಗಂಡು-ಹೆಣ್ಣಿನ ಕಡೆಯ ಹಿರಿಯರು ಕೂಡಿಕೊಂಡು ಹೋಗುತ್ತಾರೆ. ವಧು-ವರರಿಗೆ ಮಾತ್ರವಲ್ಲದೆ ಅವರ ತಾಯಂದಿರಿಗೂ ಅರಿವೆ ತೆಗೆಯುವರು. ಅರಿವೆ ತೆಗೆಯುವ ಮುಂಚೆ ವರನ ಎಲೆ-ಅಡಿಕೆ ಚೀಲವನ್ನು ಮೊದಲು ತೆಗೆಯುತ್ತಾರೆ. ಈ ಚೀಲವು ಮದುವೆಯಾಗುವ ಮುಂಚೆ ವರನಲ್ಲಿರುವುದಿಲ್ಲ. ಮದುವೆಯ ನಂತರ ಪ್ರತಿಯೊಬ್ಬ ಅಲೆಮಾರಿ ಕುರುಬನ ನಡುವಿನಲ್ಲಿ ಇದನ್ನು ಕಾಣುತ್ತೇವೆ. ಈ ಚೀಲವನ್ನು ಹೆಣ್ಣಿನ ಕಡೆಯವರು ಗಂಡಿಗೆ ಕೊಡಿಸಬೇಕು. ಇದಾದ ನಂತರ ವಧು-ವರರಿಗೆ ಹಾಗೂ ಬಂಧು ಬಳಗಕ್ಕೆ ಅರಿವೆ ತೆಗೆಯುತ್ತಾರೆ. ಅರಿವೆಯ ಜೊತೆಗೆ ವಧುವಿಗೆ ಮತ್ತು ವರನಿಗೆ ಕೊಡಬೇಕಾದ ಆಭರಣಗಳನ್ನು ಮತ್ತು ಮೆಟ್ಟು (ದೇಶಿ ಚಪ್ಪಲಿ)ಗಳನ್ನು ಕೊಂಡುಕೊಳ್ಳುತ್ತಾರೆ. ಅರಿವೆ ಮತ್ತು ಒಡವೆಗಳನ್ನು ಖರೀದಿಸಿದ ಮೇಲೆ ಎರಡು ಕಡೆಯವರು ಕೆಲವು ಮದುವೆ ಸಾಮಾನು ಗಳನ್ನು ಕೊಂಡುಕೊಂಡು ಇಂಥವರ ಮಗನು, ಇಂಥವರ ಮಗಳಿಗೆ ಅರಿವೆ ತೆಗೆದಿದ್ದಾನೆ ಎಂದು ಹೇಳುತ್ತಾ ಸಿಹಿಯನ್ನು ತಿಂದು ಎರಡು ಕಡೆಯವರು ಊರುಗಳಿಗೆ ತೆರಳುತ್ತಾರೆ.

**ಪ್ರಧಾನ ಆಚರಣೆಗಳು**

ಅಲೆಮಾರಿ ಕುರುಬರು ಮದುವೆಯನ್ನು ಪ್ರಮುಖವಾಗಿ ಮೂರು ದಿನಗಳು ಆಚರಣೆ ಮಾಡುತ್ತಾರೆ. ಅವನ್ನು ೧. ಅರಿಶಿಣ ನೀರು (ದೇವರೂಟ) ಕಾರ್ಯಕ್ರಮ, ೨. ಅಕ್ಕಿಕಾಳು ಅಥವಾ ತಾಳಿ ದಿನದ ಕಾರ್ಯಕ್ರಮ ಹಾಗೂ ೩. ಮಸಿಯೂಟ ಕಾರ್ಯಕ್ರಮಗಳೆಂದು ವಿಂಗಡಿಸಲಾಗಿದೆ.

**ಅರಿಶಿಣ ನೀರು ಅಥವಾ ದೇವರೂಟ ಕಾರ್ಯಕ್ರಮ**

**ಹಂದರ ಹಾಕುವುದು :** ಮದುವೆ ಮನೆಯ ತಲಬಾಗಿಲು ಮುಂದೆ ಹಂದರ ಹಾಕುತ್ತಾರೆ. ಇದನ್ನು ಹಾಕಬೇಕಾದರೆ ನಾಲ್ಕು ದಿಕ್ಕಿಗೆ ನಾಲ್ಕು ಬಿದುರು ನೆಟ್ಟು ಅವುಗಳ ಮೇಲೆ ಲಂಬಕಾರ ದಲ್ಲಿ ಎರಡು ಬಿದುರುಗಳನ್ನು ಕಟ್ಟುತ್ತಾರೆ. ನಂತರ ನೆಟ್ಟ ಪ್ರತಿಯೊಂದು ಬಿದಿರಿಗೆ ತೆಂಗಿನಗರಿಯನ್ನು ಕಟ್ಟಿ ಅದರ ಮೇಲೆ ತೆಂಗಿನ ಗರಿ ಮತ್ತು ಕಣಗಿನ ತಪ್ಪಲು ಹಾಕುತ್ತಾರೆ. ಮಾವಿನ ಎಲೆಗಳಿಂದ ತೋರಣ ಕಟ್ಟುತ್ತಾರೆ. ವರನ ಕಡೆಯ ಗಂಡು ಮಕ್ಕಳೇ ಹಂದರ ಪೂಜೆ ಮಾಡಬೇಕು.

**ಶಾಶಿಕಟ್ಟೆ :** ವರನ ಮನೆಯ ತಲಬಾಗಿಲು ಬಲಭಾಗದಲ್ಲಿ ಗೋಡೆಗೆ ಹೊಂದಿಕೊಂಡಂತೆ ಒಂದು ಅರ್ಧ ಅಡಿ ಎತ್ತರದ ಹಸಿ ಮಣ್ಣಿನ ಕಟ್ಟೆಯೊಂದನ್ನು ಕಟ್ಟುತ್ತಾರೆ. ಆ ಕಟ್ಟೆಗೆ ಹೊಂದಿಕೊಂಡ ಗೋಡೆಯ ಮೇಲೆ ದೇವರ ಚಿತ್ರ, ಒಂದು ಟಗರು, ಮತ್ತೊಂದು ಕುರಿ, ಅದರ ಕೆಳಗೆ ಬಾಸಿಂಗ ಮತ್ತು ಸೂಸಗ, ಅದರ ಕೆಳಗೆ ಕಳಸ ಹಿಡಿದ ಮುತ್ತೈದೆಯ ಚಿತ್ರಗಳನ್ನು ಬರೆಯುತ್ತಾರೆ. ಹೀಗೆ ಬರೆದ ಚಿತ್ರಗಳನ್ನು ಮತ್ತು ಆ ಕಟ್ಟೆಯನ್ನು ಪದ್ಧತಿ ಪ್ರಕಾರ ಪೂಜಿಸುತ್ತಾರೆ.

**ಹಾಲಗಂಬ ತರುವುದು :** ವರನಿಗೆ ಬೀಗರಾಗುವ ಅತ್ತೆ-ಮಾವ ಒಂದೇ ಹೆಸರಿರುವ ದಂಪತಿಗಳಿಂದ ಈ ಕಾರ್ಯ ಮಾಡಿಸುತ್ತಾರೆ. ಉದಾಹರಣೆಗೆ ಮಾಳಪ್ಪ-ಮಾಳಮ್ಮ, ಲಗುಮಪ್ಪ-ಲಗುಮವ್ವ ಇಂತವರ ಹೆಸರು ಬಲಾತ್ಕಾರ ಕೇಳಿ ಅವರ ಕೈಯಿಂದ ಹಾಲಗಂಬ ತರುಸುತ್ತಾರೆ. ಹಾಲುಗಂಬ ತರಲು ವಾದ್ಯ ಸಮೇತವಾಗಿ ಹೋಗುವರು. ಬಲಾತ್ಕಾರದಿಂದ ಬಂದ ದಂಪತಿಗಳಲ್ಲಿ ಹೆಂಡತಿ ಕಳಸ ಹಿಡಿದು ಮುತ್ತೈದೆಯರೊಂದಿಗೆ ಮುಂದೆ ಸಾಗುತ್ತಿದ್ದರೆ ಅವಳ ಹಿಂದೆ ಪತಿರಾಯ ಕೈಯಲ್ಲಿ ಕುಡುಗೋಲು ಹಿಡಿದುಕೊಂಡು ಸಾಗುತ್ತಾನೆ. ಊರಿನ ಹತ್ತಿರವಿರುವ ಹತ್ತಿ ಗಿಡಕ್ಕೆ ಪೂಜೆ ಮಾಡಿ ಅದರಲ್ಲಿ ಒಂದು ಸಣ್ಣ ಕೊಂಬೆ ಕಡಿದುಕೊಂಡು ಮನೆಗೆ ಬರುವಾಗ ಬೀರದೇವರ ಗುಡಿ ಮುಂದೆ ಹಾದು ಬರಬೇಕು. ಹಸಿ ಮಣ್ಣಿನ ಗುಡ್ಡೆ ಮಾಡಿ ಅದರೊಳಗೆ ಹಾಲಗಂಬ ನೆಡುತ್ತಾರೆ. ಈ ಮಣ್ಣಿನ ಗುಡ್ಡೆಯ ಒಳಕ್ಕೆ ಜೋಳ, ಗೋಧಿ, ಸಜ್ಜೆ, ನೆಲಗಡಲೆ, ಹೆಸರು, ಅಲಸಂದಿ ಇತ್ಯಾದಿ ಐದು ಧಾನ್ಯಗಳನ್ನು ಹಾಕುತ್ತಾರೆ. ಇವರು ಫಲಕೊಡುವ ಹಾಲಗಂಬ ತಂದ ಉದ್ದೇಶ ಮುಂದೆ ವಧು-ವರರ ಜೀವನವು ಫಲವತ್ತತೆ ಹಾಗೂ ಸಮೃದ್ಧಿಯಿಂದ ಕೂಡಿರಲಿ ಎಂದು ಆಶಿಸುವ ಸಂಕೇತವಿರಬಹುದು. ಹಂದರ ಹಾಕಿದ ದಿನದಿಂದ ಇಳಿಸುವವರೆಗೆ ಸುಮಾರು ೫ ಅಥವಾ ೬ ದಿನಗಳವರೆಗೆ ರಾತ್ರಿ ವೇಳೆಯಲ್ಲಿ ಹಂದರದಲ್ಲಿ ದೀಪ ಇದ್ದು ದಿನಾಲು ಪೂಜೆ ಸಲ್ಲಿಸುತ್ತಾರೆ.

**ಎದುರುಗೊಳ್ಳುವುದು ಅಥವಾ ಭೇಟಿ ಮಾಡುವುದು :** ಬೀಗರನ್ನು ಸ್ವಾಗತಿಸುವುದಕ್ಕೆ ಭೇಟಿ ಮಾಡುವುದೆನ್ನುವರು. ಸಾಯಂಕಾಲ ಹೆಣ್ಣಿನ ಕಡೆಯವರು ಊರ ಹೊರಗೆ ನಿಂತು ಬಂದಿದ್ದೇವೆಂದು ಸುದ್ದಿ ಮುಟ್ಟಿಸುವರು. ಗಂಡಿನ ಕಡೆಯವರು ವಾದ್ಯಗಳೊಂದಿಗೆ ಅವರನ್ನು ಭೇಟಿ ಮಾಡಿ ಬೇಳೆ, ಬೆಲ್ಲ ಕೊಟ್ಟು ಬೀಗರಿಗೆ ಉಳಿದುಕೊಳ್ಳಲಿಕ್ಕೆ ಗುಡಿ ಅಥವಾ ಮನೆಯ ವ್ಯವಸ್ಥೆ ಮಾಡುವರು. ಈ ವ್ಯವಸ್ಥೆ ಮಾಡುವವನಿಗೆ 'ದೈವದವನು' ಎಂದು ಕರೆಯುವರು. ಇವನು ಬೀಗರಿಗೆ ಬೇಕಾಗಿರುವ ಅವಶ್ಯಕತೆಗಳನ್ನು ಪೂರೈಸಬೇಕು. ತಾಳಿ ಆದ ನಂತರ ಗಂಡಿನವರು ದೈವದವನಿಗೆ ಬಟ್ಟೆ ಮಾರ್ಯಾದೆ ಮಾಡುತ್ತಾರೆ.

**ಪಲ್ಲಕ್ಕಿ ತರುವುದು :** ಬೀರದೇವರಿಗೆ ಪೂಜೆ ಸಲ್ಲಿಸಿ ದೇವರ ಗುಡಿಯಿಂದ ಪಲ್ಲಕ್ಕಿ ತರುವಾಗ ಡೊಳ್ಳು ಬಡಿಯುತ್ತಾ, ಭಂಡಾರ ಹಾರಿಸುತ್ತಾ, ಮದುವೆ ಮನೆಯ ಹಂದರಕ್ಕೆ ದೇವರ ಪಲ್ಲಕ್ಕಿ ತರಲಾಗುವುದು. ಪಲ್ಲಕ್ಕಿಯಲ್ಲಿ ಬೀರದೇವರ ಮೂರ್ತಿ, ಕರಿಕಂಬಳಿ ಹಾಲಗ್ಯೆಯುವ ಕತ್ತಿ, ಭಂಡಾರ ಚೀಲ, ನಾಗಬೆತ್ತ, ಕುದುರೆಗಳು ಇರುತ್ತವೆ. ತಂದ ನಂತರ ಪೂಜಾರಿಯು ಪೂಜೆ ಮಾಡಿ ಭಂಡಾರ ಹಾರಿಸುತ್ತಾನೆ.

**ಐರಾಣೆ ತರುವುದು :** ತಾಳಿ ಕಟ್ಟುವ ಮತ್ತು ಅರಿಶಿಣ ನೀರು ಹಾಕುವ ಸಮಯದಲ್ಲಿ ಉಪಯೋಗಿಸುವ ಮಣ್ಣಿನ ೫ ಬಿಂದಿಗೆ ಮತ್ತು ನಾಲ್ಕು ಮಗಿ ೨ ಪಡುಗಗಳನ್ನು ಈ ಮೊದಲೇ ಕುಂಬಾರನಿಗೆ ಹೇಳಿ ಮಾಡಿಸಿರುತ್ತಾರೆ. ಇದಕ್ಕೆ ಐರಾಣಿ ಎಂದು ಕರೆಯುತ್ತಾರೆ. ಆ ಐರಾಣಿಗಳನ್ನು ಕುಂಬಾರನು ತೆಗೆದುಕೊಂಡು ಬಂದು ದೇವಸ್ಥಾನದಲ್ಲಿಟ್ಟು ಕೊಂಡಿರುತ್ತಾನೆ. ಕಳಸ, ವಾದ್ಯ ಸಮೇತವಾಗಿ ದೇವಸ್ಥಾನಕ್ಕೆ ಹೋಗಿ ಆ ಐರಾಣಿಗಳನ್ನು

ಪೂಜಿಸಿ ಕುಂಬಾರನಿಗೆ ಪದ್ಧತಿ ಪ್ರಕಾರ ಕೊಡಬೇಕಾದದ್ದನ್ನು ಕೊಟ್ಟು ಐರಾಣಿಗಳನ್ನು ತೆಗೆದುಕೊಂಡು ಬರುತ್ತಾರೆ.

**ಕಂಕಣ ಕಟ್ಟುವಿಕೆ :** ಸಮುದಾಯದ ಪೂಜಾರಿಗಳು ವೀಳ್ಯೆದೆಲೆ ಅರಿಶಿಣ ಕೊಂಬು ಹತ್ತಿದಾರ ಉಪಯೋಗಿಸಿ ಕೈಗೆ ಕಟ್ಟುವ ಕಂಕಣಗಳನ್ನು ತಯಾರಿಸುತ್ತಾರೆ. ಇವುಗಳನ್ನು ಲಗ್ನ ಕಾರ್ಯದಲ್ಲಿ ನಿರತರಾಗುವ ಮುತ್ತೈದೆ ಸ್ತ್ರೀ-ಪುರುಷರ ಬಲಗೈಗಳಿಗೆ ಕಟ್ಟುತ್ತಾರೆ. ಈ ಕಂಕಣಗಳನ್ನು ಕಟ್ಟಿಸಿಕೊಂಡವರು ಲಗ್ನದ ಕಾರ್ಯಗಳಲ್ಲಿ ತೊಡಗಿಸಿಕೊಳ್ಳುವರು.

**ಅರಿಶಿಣ ನೀರು :** ಈ ಕಾರ್ಯದ ವಿಶೇಷವೆಂದರೆ ಹಾಲಗಂಬ ತಂದ ಸೋದರಮಾವನ ಮನೆ ಮುಂದೆ ಅರಿಶಿಣ ನೀರು ಹಾಕಲಾಗುವುದು. ಮೇಳ ಮತ್ತು ಡೊಳ್ಳು ವಾದ್ಯದೊಂದಿಗೆ ಹಾಲುಗಂಬ ತಂದವರ ಮನೆಗೆ ನೀರು ತುಂಬಿದ ನಾಲ್ಕು ಮಣ್ಣಿನ ಮಗಿ ತೆಗೆದುಕೊಂಡು ಹೋಗುವರು. ಮನೆಯ ಮುಂದೆ ಚೌಕಕಾರದಲ್ಲಿ ನಾಲ್ಕು ಮಗಿಗಳನ್ನಿಟ್ಟು ಅವುಗಳ ಮೇಲೆ ಎಲೆ ಮತ್ತು ತೆಂಗಿನಕಾಯಿಗಳನ್ನಿಡುತ್ತಾರೆ. ಆ ಮಗಿಗಳಿಗೆ ಐದು ಸುತ್ತು ಹತ್ತಿದಾರ ಸುತ್ತುವರು. ನಂತರ ಅದರೊಳಗೆ ಎರಡು ಒನಕೆಗಳನ್ನಿಡುವರು. ಮುಂದಿನ ಒನಕೆಯ ಮೇಲೆ ಮದುಮಗ ಮತ್ತು ಮದುಮಗಳ ತಾಯಿಯನ್ನು ಹಿಂದಿನ ಒನಕೆಯ ಮೇಲೆ ಮದುಮಗ ಮತ್ತು ಮದುಮಗಳನ್ನು ಕೂಡಿಸಿ ಮೈ ಮತ್ತು ಮುಖಕ್ಕೆಲ್ಲಾ ಅರಿಶಿಣ ಹಚ್ಚಿ, ನೀರು ಹಾಕುವರು. ನಾಲ್ಕು ಜನರಿಗೂ ಹೊಸ ಬಟ್ಟೆ ಕೊಟ್ಟು ದೇವರ ಜಗಲಿಗೆ ಕರೆದುಕೊಂಡು ಹೋಗಿ ಪೂಜೆ ಸಲ್ಲಿಸುವರು. ಈ ಕಾರ್ಯವು ರಾತ್ರಿ ಹತ್ತು ಅಥವಾ ಹನ್ನೊಂದು ಗಂಟೆ ಸುಮಾರಿಗೆ ಜರುಗುತ್ತದೆ. ರಾತ್ರಿಯ ಊಟವನ್ನು ಹಾಲಗಂಬ ತಂದ ಬೀಗರು(ಮಾವನರು) ಹಾಕಬೇಕು. ಈ ಊಟಕ್ಕೆ ಶ್ಯಾವಿಗೆ ಮಾಡಲೇ ಬೇಕು. ಅದಕ್ಕೆ ಶ್ಯಾವಿಗೆ ಊಟ ಎನ್ನುವರು. ಊಟವಾದ ನಂತರ ಮದುವೆಯ ಮನೆಗೆ ಬರುತ್ತಾರೆ.

**ಅಕ್ಕಿಕಾಳು ಅಥವಾ ತಾಳಿ ದಿನದ ಕಾರ್ಯ**

**ಆಲ್ಸಾಯುವದು :** ಅಲೆಮಾರಿ ಕುರುಬರು 'ಅಲಗ' ಹಾಯುವುದಕ್ಕೆ ಆಲ್ಸಾಯುವದು ಎನ್ನುತ್ತಾರೆ. ಈರಗಾರರೆನಿಸಿಕೊಂಡವರು ಮತ್ತು ಪೂಜಾರಿಗಳು ಆಲ್ಸಾಯುತ್ತಾರೆ. ಇದು ವಂಶಪರಂಪರೆಯಾಗಿ ಬಂದಿರುವ ಕಾರ್ಯವಾಗಿದೆ. ಬೀರದೇವರ ಆರಾಧಕರಾದ ಇವರು ಬೀರದೇವರ ಪಲ್ಲಕ್ಕಿಗೆ ಪೂಜೆ ಮಾಡಿದ ನಂತರ ತಲವಾರ ಕತ್ತಿ ಹಿಡಿದು ನಾಲ್ಕು ದಿಕ್ಕಿಗೆ ನಮಸ್ಕಾರ ಮಾಡಿ ಜೋರಾಗಿ ಹೊಟ್ಟೆಗೆ ಹಾಗೂ ಬೆನ್ನಿಗೆ ಹೊಡೆದುಕೊಳ್ಳುತ್ತಾರೆ. ಆ ಸಮಯದಲ್ಲಿ ಪೂಜಾರಿಗಳು ಹೊಡೆದುಕೊಂಡ ದೇಹದ ಭಾಗಗಳಿಗೆ ಭಂಡಾರ ಹಾರಿಸುವರು. ಕೆಲವೊಂದು ಸಾರಿ ರಕ್ತವೂ ಬರುವುದು. ಆಲಗ ಹಾಯುವವರಿಗೆ ದೇವರು ಮೈಯ್ಯಾಗ ಬಂದು ಮದುವೆ ಮಾಡುವವರು ದೇವರ ಆಚರಣೆ ಮಾಡುವುದನ್ನು ಮರೆತಿದ್ದರೆ ಹಾಗೂ ಹಿಂದೆ ಅವರೇನಾದರೂ ತಪ್ಪು ಮಾಡಿದ್ದರೆ ಅದನ್ನು ಹೇಳಿಕೆ ಮೂಲಕ ನೆನಪಿಸಿಕೊಡುತ್ತಾನೆ. ಹೇಳಿಕೆಯನ್ನು ಅರ್ಥೈಸಿಕೊಂಡು ಪೂಜೆ ಮಾಡುವುದರ ಮೂಲಕ ತಪ್ಪುಗಳನ್ನು ತಿದ್ದಿಕೊಳ್ಳುತ್ತಾರೆ.

ಬಲಿ : ಬೀರದೇವರನ್ನು ಮನೆದೇವರನ್ನಾಗಿ ಹೊಂದಿದವರು ಆ ದಿನದ ದೈವದ ಊಟವಾಗಿ ಕುರಿಗಳನ್ನು ದೇವರಿಗೆ ಬಲಿಕೊಟ್ಟು ಮಾಂಸದ ಅಡಿಗೆಯನ್ನು ಊಟಕ್ಕೆ ಬಡಿಸುವರು. ಇತರೆ ದೇವರು ಮನೆ ದೇವರಾಗಿದ್ದರೆ ಸಿಹಿ ಅಡಿಗೆ ಮಾಡುತ್ತಾರೆ. ಅಲ್ಲಿನವರು ಕುರಿಗಳ ಕುತ್ತಿಗೆಗೆ ಭಂಡಾರ ಹಚ್ಚಿದ ಕೂಡಲೆ ಕಟುಕರು ಕೊಯ್ಯುವರು. ಬಲಿ ಕೊಡುವ ಕುರಿಗಳ ಸಂಖ್ಯೆಯು, ವಧು-ವರರ ಸಂಖ್ಯೆ ಮತ್ತು ಬಂಧುಬಳಗದವರನ್ನು ಅವಲಂಬಿ ಸಿರುತ್ತಾರೆ. ಸಾಮಾನ್ಯವಾಗಿ ೮ ರಿಂದ ೩೦ ಕುರಿಗಳವರೆಗೆ ಬಲಿ ಕೊಡುತ್ತಾರೆ. ಕೆಲವೊಮ್ಮೆ ೬೦ ಕುರಿಗಳವರೆಗೆ ಬಲಿಕೊಟ್ಟ ಉದಾಹರಣೆಗಳಿವೆ. ಅವರು ದೇವರ ಮೇಲೆ ಇಟ್ಟಿರುವ ಗಾಢವಾದ ನಂಬಿಕೆ, ಸಂಪ್ರದಾಯಗಳಿಗೂ ಅವರ ಆರ್ಥಿಕತೆಗೂ ಸಂಬಂಧ ಕಲ್ಪಿಸಿರುವುದನ್ನು ಸೂಕ್ಷ್ಮವಾಗಿ ಸೂಚಿಸುತ್ತದೆ.

ಗುಗ್ಗಳ ಕಾರ್ಯ : ಬೀರದೇವರನ್ನು ಮನೆದೇವರನ್ನಾಗಿ ಮಾಡಿಕೊಂಡವರು ಗುಗ್ಗಳ ಆಚರಣೆ ಮಾಡುತ್ತಾರೆ. ಗುಗ್ಗಳದ ಮಡಿಕೆ(ಬಿಂದಿಗೆ)ಯೊಳಗೆ ಹತ್ತಿಕಾಳು ತುಂಬಿ ಅದರ ಮಧ್ಯದಲ್ಲಿ ಗಂಧದ ಕಟ್ಟಿಗೆಗಳನ್ನು ನೆಟ್ಟಿರುತ್ತಾರೆ. ಗಂಧದ ಕಟ್ಟಿಗೆಗೆ ಬೆಂಕಿ ಹಚ್ಚುವರು. ಅದು ದೀಪದ ಹಾಗೆ ಉರಿಯುತ್ತದೆ. ದೀಪ ನಂದದ ಹಾಗೆ ಮದುಮಗನ ತಲೆಯ ಮೇಲೆ ಹೊತ್ತುಕೊಂಡು ವಾದ್ಯ ಸಮೇತ ಬೀರದೇವರ ಗುಡಿಗೆ ಬರುವರು. ದೀಪ ನಂದಿದರೆ ಅಶುಭವೆನ್ನುವ ನಂಬಿಕೆಯಿದೆ. ಗರ್ಭಗುಡಿಯ ಸುತ್ತ ಐದು ಸುತ್ತು ತಿರುಗಿ ದೇವರ ಮುಂದೆ ಗುಗ್ಗಳ ಇಳಿಸಿ, ಬೀರದೇವರಿಗೆ ಪೂಜೆ ಸಲ್ಲಿಸುವರು. ನಂತರ ಗುಗ್ಗಳದ ಬೆಂಕಿ ನಂದಿಸಲು ಹಾಲು ತುಪ್ಪ ಬಳಸಿ ಗುಗ್ಗಳಗಳನ್ನು ಅಲ್ಲಿಯೇ ಬಿಟ್ಟು ಬರುವರು. ಆ ಸ್ಥಳದಲ್ಲಿಯೇ ಮದುಮಗನ ತಲೆಗೆ ಬಿಳಿಯ ಟೋಪಿ ಮತ್ತು ಬಾಸಿಂಗ ಕಟ್ಟಲಾಗುತ್ತದೆ. ಆ ಸಮಯದಲ್ಲಿ ದೇವರಿಗೆ ನಮಸ್ಕಾರ ಮಾಡಿ ಮದುಮಕ್ಕಳು ಹಣೆಗೆ ದಪ್ಪವಾಗಿ ಭಂಡಾರ ಹಚ್ಚಿಕೊಳ್ಳುತ್ತಾರೆ.

ಐನೀರು ತರೋದು : ಐದು ಜನ ಮುತ್ತೈದೆ ಸ್ತ್ರೀ-ಪುರುಷರು ತಲಾ ಒಂದರಂತೆ ಐದು ಮಣ್ಣಿನ ಹೊಸ ಬಿಂದಿಗೆಗಳನ್ನು ಹೊತ್ತು ಕೈಯಲ್ಲಿ ಒಂದೊಂದು ಮಗೆಯನ್ನು ಹಿಡಿದು ಕೊಂಡು ವಾದ್ಯ ಸಮೇತರಾಗಿ ನೀರು ತರಲು ಹೋಗುತ್ತಾರೆ. ನೀರು ತರಲು ಹೋದವರಿಗೆ ಬಲಗೈಗೆ, ಬಿಂದಿಗೆಗೆ ಹಾಗೂ ಮಗಿಗಳಿಗೆ ಕಂಕಣ ಕಟ್ಟಿರುತ್ತಾರೆ. ಗಂಗೆ ಇರುವಲ್ಲಿಗೆ ಹೋಗಿ ಪೂಜೆ ಮಾಡಿ ನೀರು ತುಂಬಿಕೊಂಡು ಮನೆಗೆ ಬರುತ್ತಾರೆ.

ಸುರಿಗೆ ಸುತ್ತುವುದು ಅಥವಾ ಸುರಿಗೆ ನೀರು : ಮದುಮಗನ ಮನೆಯ ಮುಂದೆ ನೀರು ತುಂಬಿ ತಂದ, ಬಿಂದಿಗೆಗಳನ್ನಿಟ್ಟು ಅವು ಉರುಳಿ ಬೀಳದ ಹಾಗೆ ಹಿಡಿದುಕೊಂಡು ಅಲ್ಲೆ ಕೂರುತ್ತಾರೆ. ನಂತರ ಆ ಐದು ಬಿಂದಿಗೆಗಳಿಗೆ ಹತ್ತಿ ನೂಲಿನ ದಾರದಿಂದ ಐದು ಸುತ್ತು ಸುತ್ತುತ್ತಾರೆ. ಇದಕ್ಕೆ 'ಸುರಿಗೆ ಸುತ್ತುವುದು' ಎಂದು ಕರೆಯುವರು. ಸುರಿಗೆಯ ಮಧ್ಯದಲ್ಲಿ ಎರಡು ಒನಕೆ ಹಾಕಿ ಮುಂದಿನ ಒನಕೆಯ ಮೇಲೆ ಮದುಮಗ ಮತ್ತು ಮದುಮಗಳು ಹಿಂದಿನ ಒನಕೆಯ ಮೇಲೆ ಅವರ ತಾಯಂದಿರನ್ನು ಕೂರಿಸಿ ನೀರು ಹಾಕುವರು. ಇದಕ್ಕೆ

'ಸುರಿಗೆ ನೀರು' ಎನ್ನುವರು. ನೀರು ಹಾಕಿದ ನಂತರ ಹೊಸ ಬಟ್ಟೆಯನ್ನುಟ್ಟು ಕುಲದೇವರ (ಬೀರದೇವರ) ಗುಡಿಗೆ ಹೋಗಿ ಬರುವರು. ಗುಡಿಯಿಂದ ಬರುವಾಗ ಹಿಮ್ಮುಖವಾಗಿ ಬರುತ್ತಾರೆ.

**ಬಾಸಿಂಗ ಕಟ್ಟುವುದು :** ದೇವರ ಕೋಣೆಯಲ್ಲಿ ಜಗಲಿ ಮುಂದಾಗಲಿ ಅಥವಾ ದೇವರ ಗುಡಿಯಲ್ಲಾಗಲೀ ಕರಿಯ ಕಂಬಳಿ ಹಾಸಿ ಅದರ ಮೇಲೆ ಮದುಮಗನನ್ನು ಕೂರಿಸಿ ಪೂಜಾರಿಗಳು ಅಥವಾ ಕಂಕಣ ಕಟ್ಟಿಕೊಂಡಿರುವವರು. ಗಂಡಿನ ತಲೆಗೆ ರುಮಾಲು ಸುತ್ತಿ ಬಾಸಿಂಗ ಕಟ್ಟುತ್ತಾರೆ. ಹಾಗೆಯೇ ಮದುವಣಗಿತ್ತಿಯನ್ನು ಕೂರಿಸಿ ಅವಳ ತಲೆಗೆ ಸೂಸುಗ ಹಾಕಿ ಬಾಸಿಂಗ ಕಟ್ಟುತ್ತಾರೆ.

**ತಾಳಿ ಕಟ್ಟುವುದು :** ತಾಳಿ ಕಟ್ಟುವ ಮುಹೂರ್ತ ಮೊದಲೇ ನಿಗದಿಯಾಗಿರುವುದರಿಂದ ಈ ಕಾರ್ಯಕ್ಕೆ ಪುರೋಹಿತರು ಬರುತ್ತಾರೆ. ಮನೆಯ ತಲಬಾಗಿಲಲ್ಲಿ ನೆಟ್ಟಿದ್ದ ಸಣ್ಣ ಹಂದರದ ಕೆಳಗೆ ಗಂಡನ್ನು ಪೂರ್ವಾಭಿಮುಖವಾಗಿ ಮತ್ತು ಹೆಣ್ಣನ್ನು ಪಶ್ಚಿಮಾಭಿಮುಖವಾಗಿ ನಿಲ್ಲಿಸಿ ಇಬ್ಬರ ಮಧ್ಯದಲ್ಲಿ ಬಿಳಿಯ ಪಂಚೆಯನ್ನು ಇಳಿಬಿಟ್ಟು ಅಡ್ಡ ಹಿಡಿದಿರುತ್ತಾರೆ. ತಾಳಿ ಕಟ್ಟುವ ಶಾಸ್ತ್ರಾಚರಣೆಗಳು ಮುಗಿಯುವವರೆಗೆ ಒಬ್ಬರ ಮುಖ ಇನ್ನೊಬ್ಬರು ನೋಡಬಾರದೆಂಬ ಉದ್ದೇಶದಿಂದ ಹೀಗೆ ಮಾಡುತ್ತಾರೆ. ಬಾಸಿಂಗ ಕಟ್ಟುವ ಮೊದಲೇ ಮದುಮಗ ಮತ್ತು ಮದುವಣಗಿತ್ತಿ ತಲಾ ೫ ಕರಿಮಣಿ ಹಾಗೂ ಒಂದೊಂದು ಬಂಗಾರದ ಗುಂಡು ಪೋಣಿಸಿಟ್ಟಿರುತ್ತಾರೆ. ಇಷ್ಟಾದ ಮೇಲೆ ಪುರೋಹಿತರು ಸಂಸ್ಕೃತ ಶ್ಲೋಕ ಪಠಿಸಿ ನೆರೆದ ಸಮಸ್ತ ಜನರ ಹಸ್ತದಿಂದ ಮುಟ್ಟಿಸಿ ಗಂಡಿನ ಕೈಯಿಂದ ಹೆಣ್ಣಿನ ಕೊರಳಿಗೆ ತಾಳಿ ಕಟ್ಟಿಸುತ್ತಾರೆ. ತಾಳಿ ಕಟ್ಟುವಾಗ ಎಲ್ಲ ಸಮಸ್ತರೂ ಆರ್ಶೀವಾದ ರೂಪವಾಗಿ ಅಕ್ಕಿಕಾಳನ್ನು ಹಾಕುತ್ತಾರೆ. ತಾಳಿ ಕಟ್ಟಿದ ಕೂಡಲೇ ವಧುವಿನ ಸೀರೆಯ ಸೆರಗಿನ ತುದಿ ಮತ್ತು ವರನ ಧೋತರದ ತುದಿಗಳನ್ನು ಹಿಡಿದು ಗಂಟುಹಾಕುತ್ತಾರೆ. ಇದನ್ನು 'ಬ್ರಹ್ಮಗಂಟು' ಎನ್ನುವರು. ಇಡೀ ಜೀವಮಾನದಲ್ಲಿ ಈ ದಾಂಪತ್ಯ ಬಿಚ್ಚಬಾರದು ಎಂಬ ಸಂಕೇತ ಈ ಬ್ರಹ್ಮಗಂಟಿನದಾಗಿದೆ.

ಈ ಕಾರ್ಯವಾದ ಮೇಲೆ ನೆರೆದಿರುವ ಸ್ತ್ರೀ-ಪುರುಷರು ನವ ಜೋಡಿಗಳ ಹೆಸರು ಹೇಳಲು ಒತ್ತಾಯಿಸುವರು. ಆ ಸಮಯದಲ್ಲಿ ಗಂಡು ತನ್ನ ಹೆಂಡತಿಯ ಹೆಸರನ್ನು ಹಾಗೂ ಹೆಣ್ಣು ತನ್ನ ಗಂಡನ ಹೆಸರನ್ನು ಒಗಟಿನ ಮೂಲಕ ಹೇಳುತ್ತಾರೆ. ಕೊನೆಯ ಪದದಲ್ಲಿ ತಮ್ಮ ಹೆಸರನ್ನು ಸೇರಿಸಿ ಹೇಳುವುದು ವಾಡಿಕೆ. ಉದಾಹರಣೆಗೆ ಗಂಡು ಹೆಣ್ಣಿನ ಹೆಸರನ್ನು ಈ ರೀತಿಯಾಗಿ ಹೇಳುತ್ತಾನೆ.

"ಕರೆ ಕುದುರೆ ತಗೊಂಡು ಕರ್‍ಯಾಕೆ ಹೋದರೆ ನೆರತಿಲ್ಲ ಎಂದು ನ್ಯಾಯ ಮಾಡ್ತಾಳೆ ಮಾಳಿ"- ಮಾಳಮ್ಮ.

"ಹಗ್ಗಲಿ ಬಡಿದರೆ ಮಗ್ಗಲದಾಗ ಬರುತಾಳೆ ಸೋನಿ"- ಸೋನಬಾಯಿ

"ಹಂಡೆವುದಾಗ ಕುಂತು ಉಂಡೆ ತಿಂತಾಳ ಬಾಗಿ" - ಬಾಗವ್ವ

ಹೆಣ್ಣು ಗಂಡಿನ ಹೆಸರೇಳುವಾಗ
"ಕಟುಕು ರೊಟ್ಟಿ-ಖಾರಪುಡಿ ತಿನ್ನಕೊಂಡು ಹೋಗಂದ್ರ
ಸೆಟಗೊಂಡು ಹೋಗ್ತಾನ ಅಪ್ಪಣ್ಣ" - ಅಪ್ಪಣ್ಣ
"ದೂರನಿಂತು ಕೇಳು ದೊರೆಪತಿ ಹೆಸರು,
ಸರಿದು ನಿಂತು ಕೇಳು ಸರಜೇರು ಹೆಸರು
ಹತ್ತು ಮಂದ್ಯಾಗ ಹೇಳ್ತೀನಿ ಲಿಂಗಣ್ಣನ ಹೆಸರು" - ಲಿಂಗಣ್ಣ

ಇಷ್ಟೆಲ್ಲ ಆದ ಮೇಲೆ ವಧುವರರನ್ನು ಮನೆಯೊಳಕ್ಕೆ ಕರೆದುಕೊಂಡು ಹೋಗುವರು. ಮನೆಯ ತಲಬಾಗಿಲಲ್ಲಿ ವರನ ಸಹೋದರಿಯು ಅಡ್ಡ ನಿಂತು ವಧುವರರ ಕಾಲು ತೊಳೆದು ಬೇಡಿ ನಿಲ್ಲುತ್ತಾಳೆ. ಇಲ್ಲಿ ವರನಿಗೂ ಮತ್ತು ವರನ ಸೋದರಿಗೂ ನಡೆಯುವ ಸಂಭಾಷಣೆ ಹೀಗಿದೆ.

ವರ : ದಾರಿ ಬಿಡಮ್ಮ
ಸೋದರಿ : ಬಿಡಕ್ಕಿಲ್ಲ
ವರ : ಕುರಿ ಕೊಡ್ತೀನಿ ಬಿಡಮ್ಮ
ಸೋದರಿ : ಕುರಿ ನಮ್ಮನೆಗಿದಾವೇ
ವರ : ಕುದುರೆ ಕೊಡ್ತೀನಿ ಬಿಡಮ್ಮ
ಸೋದರಿ : ಕುದುರೆ ನಮ್ಮನೆಗಿದಾವೇ
ವರ : ಬಂಗಾರ ಕೊಡ್ತೀನಿ ಬಿಡಮ್ಮ
ಸೋದರಿ : ಬಂಗಾರ ನಮ್ಮನೆಗಿದಾವೇ
"ನೀ ಕುರಿ ಕೊಟ್ರು ವಲ್ಲೆ
ಕುದ್ರೆ ಕೊಟ್ರು ವಲ್ಲೆ
ಬಂಗಾರ ಕೊಟ್ರು ವಲ್ಲೆ
ಮುಂದೆ ಹೆಣ್ಣು ಹಡೆದು
ಕನ್ಯಾ ಕೊಡ್ತೀನನ್ನು ಬಿಡ್ತೀನಿ"

ಸೋದರಿಯ ಈ ಅಪೇಕ್ಷೆಗೆ ವಧು-ವರರಿಬ್ಬರು 'ಆಗಲಿ' ಎಂದು ಒಪ್ಪಿದ ನಂತರ ಮನೆಯೊಳಗೆ ಹೋಗಲು ಬಿಡುವರು. ದೇವರ ಜಗಲಿಯ ಮುಂದೆ ಕಂಬಳಿ ಹಾಸಿ ವಧು-ವರರನ್ನು ಕೂರಿಸಿ, ಕಟ್ಟಿದ ಬ್ರಹ್ಮಗಂಟು ಬಿಚ್ಚುತ್ತಾರೆ. ನಂತರ ವಧು-ವರರ ವಿನೋದ ಆಟಗಳು ನಡೆಯುತ್ತವೆ.

**ಉಂಗುರ ಹುಡುಕುವ ಆಟ :** ಒಂದು ಗಂಗಾಳದಲ್ಲಿ ಅರಿಶಿಣ ಕುಂಕುಮದ ನೀರು ಸಿದ್ಧ ಮಾಡಿ ಅದರಲ್ಲಿ ಒಂದು ಉಂಗುರ ಹಾಕುತ್ತಾರೆ. ಈ ಆಟ ಆಡಿಸುವಾಗ ಗಂಡು-ಹೆಣ್ಣನ್ನು ಪೂರ್ವ-ಪಶ್ಚಿಮ ಮುಖ ಮಾಡಿ ಕೂಡಿಸಿ ಹೆಣ್ಣು ತನ್ನ ಎರಡು ಕೈಯಿಂದ, ಗಂಡು ತನ್ನ ಎಡಗೈಯಿಂದ ಮಾತ್ರ ಹುಡುಕಬೇಕು. ಉಂಗುರವು ಹೆಣ್ಣಿಗೆ ಸಿಕ್ಕರೆ ಅವಳು

ತನ್ನ ಎರಡು ಕೈಯಲ್ಲಿ ಗಟ್ಟಿಯಾಗಿ ಹಿಡಿದು ಮುಚ್ಚಿಟ್ಟುಕೊಳ್ಳುತ್ತಾಳೆ. ಗಂಡು ತನ್ನ ಎಡಗೈಯಿಂದಲೇ ಬಿಡಿಸಬೇಕು. ಹೆಣ್ಣು ಮಾತ್ರ ಎರಡು ಕೈಯಲ್ಲಿ ಬಿಡಿಸುತ್ತಾಳೆ. ಐದು ಸಲ ಈ ಆಟ ನಡೆಯುತ್ತದೆ.

**ಅಡಿಕೆ ಆಟ :** ಈ ಆಟದಲ್ಲಿ ಗಂಡು ಒಂದು ಮುಷ್ಟಿಯಲ್ಲಿ ಅಡಿಕೆ ಹಿಡಿದುಕೊಂಡರೆ ಹೆಣ್ಣು ಎರಡು ಕೈಯಿಂದ ಬಿಡಿಸಬೇಕು. ಹೆಣ್ಣು ಎರಡು ಮುಷ್ಟಿಯಿಂದ ಅಡಿಕೆ ಹಿಡಿದು ಕೊಂಡರೆ ಗಂಡು ಒಂದೇ ಕೈಯಿಂದ ಬಿಡಿಸಬೇಕು.

**ಗೊಂಬೆಯಾಟ :** ಒಂದು ಗೊಂಬೆಗೆ ಬಟ್ಟೆ ತೊಡಿಸಿ ಅದು ಮಗುವೆಂದು ಭಾವಿಸಿ ನೀನು ಜೋಪಾನ ಮಾಡು, ನೀನು ಜೋಪಾನ ಮಾಡು ಎನ್ನುವರು. ಹಾಗೆಯೇ ಹೆಣ್ಣು ನಾನು ಅಡಿಗೆ ಮಾಡಬೇಕು ಎತ್ತಿಕೊಂಡು ಸಮಧಾನ ಪಡಿಸು ಎನ್ನುವಳು, ಗಂಡು ನಾನು ಕುರ‍್ಯಾಕ ಹೋಗಬೇಕು ಎತ್ತಿಕೋ ಎಂದು ಗಂಡ-ಹೆಂಡತಿಯರ ನಡುವೆ ಮಾತಿನ ಸಂಭಾಷಣೆ ಮೂಲಕ ಗೊಂಬೆಯನ್ನು ಕೊಡುವುದು ಮತ್ತು ತೆಗೆದುಕೊಳ್ಳುವುದನ್ನು ಮಾಡುತ್ತಾರೆ.

**ದೈವದ ಊಟ :** ಈ ಊಟವನ್ನು ಒಂದೇ ಬೆಡಗಿಗೆ ಸೇರಿದವರು ಕೂಡಿ ಅಡಿಗೆ ಮಾಡಿಸಿ ಸಮಾಜಕ್ಕೆ ಊಟ ಹಾಕಿಸುತ್ತಾರೆ. ಬೀರದೇವರ ಭಕ್ತರಾದವರು ಈ ಊಟಕ್ಕೆ ಕುರಿ-ಮೇಕೆಗಳ ಮಾಂಸ ಹಾಗೂ ಅನ್ನ ಮಾಡಿ ಊಟಕ್ಕೆ ಬಡಿಸುವರು. ಮಾಳಿಂಗರಾಯ, ಅರಣ್ಯಸಿದ್ಧ ಇತ್ಯಾದಿ ದೇವರ ಭಕ್ತರು ಸಿಹಿ ಅಡಿಗೆ ಮಾಡುವರು. ಈ ಊಟಕ್ಕೆ ಬೇಕಾಗುವಷ್ಟು ಕಿರಾಣಿ ಸಾಮಾನುಗಳನ್ನು ದೈವದ ಮುಖಂಡರಿಗೆ ನೀಡುವರು. ದೈವದ ಮುಖಂಡರೆ ಅಡುಗೆ ಮಾಡಿ ಎಲ್ಲರಿಗೂ ಊಟಕ್ಕೆ ಬಡಿಸುವರು. ಇಲ್ಲಿ ಮದುವೆ ಮಾಡುವವರ ಮಾತು ಅಷ್ಟಕಷ್ಟೆ, ಪ್ರತಿಯೊಂದು ತೀರ್ಮಾನ ದೈವದ ಮುಖಂಡರದು. ಅವರು ಕೇಳಿದ ವಸ್ತುಗಳನ್ನು ಒದಗಿಸಬೇಕು. ಊಟ ಮಾಡುವಾಗ ಶ್ರೀಮಂತ-ಬಡವ ಎಂಬ ಭೇದ ಮಾಡದೇ ಎಲ್ಲರೂ ನೆಲದ ಮೇಲೆ ಸಾಲಾಗಿ ಕುಳಿತುಕೊಂಡು ಊಟ ಮಾಡಬೇಕು. ಒಂದು ವೇಳೆ ತಾರತಮ್ಯ ಮಾಡಿದ್ದೇ ಆದರೆ ದೈವದವರಲ್ಲಿ ಜಗಳಗಳಾಗವು ದುಂಟು. ಒಟ್ಟಾರೆಯಾಗಿ ಈ ಊಟ ದೇವರ ಅಥವಾ ದೈವದ ಊಟವಾಗಿದ್ದರಿಂದ ಯಾರೂ ಭೇದ ಮಾಡಬಾರದೆಂಬುದೇ ಇವರ ನಂಬಿಕೆ ಹಾಗೂ ಪದ್ಧತಿಯಾಗಿದೆ.

**ಮುಸಿ ಊಟ (ತಾಳಿಯ ಮಾರನೆಯ ದಿನ)**

**ಕರಿ ನೀರು ಊಟ :** ಬೀರದೇವರ ಭಕ್ತರಾದವರು ದೈವದ ಊಟದ ದಿನದಂದು ಒಂದೆರಡು ಕುರಿಗಳ ತಲೆ ಮತ್ತು ತೊಡೆಗಳನ್ನು ತೆಗೆದಿಟ್ಟಿರುತ್ತಾರೆ. ಮರುದಿನ ಬೆಳಿಗ್ಗೆ ಅಕ್ಕಿ, ಎಣ್ಣೆ, ಕಾರ, ತಲೆ ಮತ್ತು ತೊಡೆಗಳನ್ನು ಹೆಣ್ಣಿನ ಕಡೆಯವರಿಗೆ ಕೊಡುವರು. ಬೀಗರು ತಾವು ಉಳಿದುಕೊಂಡ ಮನೆಯಲ್ಲಿ ಈ ಅಡಿಗೆಯನ್ನು ಮಾಡಿ ಗಂಡಿನವರನ್ನು ಕರೆದು ಊಟ ಮಾಡುತ್ತಾರೆ.

**ಅಳಿಯನ ಕಾಲು ತೊಳೆಯುವುದು ಮತ್ತು ಧಾರೆ ಎರೆಯುವುದು**

ಮದುವಣಗಿತ್ತಿಯ ಚಿಕ್ಕಪ್ಪ-ಚಿಕ್ಕಮ್ಮ ಅಥವಾ ದೊಡ್ಡಪ್ಪ-ದೊಡ್ಡಮ್ಮ ಮಾಡುವ ಕಾರ್ಯ. ಇವರು ಐದು ವಿಧದ ಅಡುಗೆಗೆ ಬಳಸುವ ಸಾಮಾನುಗಳನ್ನು (ಆಂಡೆವು, ತಂಬಿಗೆ,

ಗಂಗಾಳ, ಎರಡು ಲೋಟ) ಹಾಗೂ ಕಂಚಿನ ಮೂರ್ತಿ(ಬಾಲಕೃಷ್ಣ)ಗಳನ್ನು ವಾದ್ಯದೊಂದಿಗೆ ಹೊತ್ತು ಕೊಂಡು ಮದುಮಗನ ಮನೆಗೆ ಬರುತ್ತಾರೆ. ಬಂದವರು ತಾವು ತಂದ ಗಂಗಾಳದಲ್ಲಿ ಅಳಿಯನ ಕಾಲು ತೊಳೆಯುತ್ತಾರೆ. ಇದಕ್ಕೆ ಅಳಿಯನ ಕಾಲು ತೊಳೆಯುವಿಕೆ ಎಂದು ಕರೆಯುವರು. ಹಾಗೆಯೇ ತಮ್ಮ ಮಗಳನ್ನು ಗಂಡಿನ ಮನೆಗೆ ಒಪ್ಪಿಸುವುದನ್ನು ಧಾರೆ ಎರೆಯುವುದೆಂದು ಕರೆಯುತ್ತಾರೆ. ಹೀಗೆ ತಂದ ಸಾಮಾನುಗಳ ಮೌಲ್ಯದಷ್ಟು ಧಾರೆ ಎರೆದವರಿಗೆ ಗಂಡಿನವರು ಬಟ್ಟೆಯನ್ನು ತರಬೇಕು. ಇಲ್ಲವಾದರೆ ಅಷ್ಟು ಮೌಲ್ಯದ ಅಡುಗೆ ಸಾಮಾನುಗಳನ್ನು ಪ್ರತಿಯಾಗಿ ಕೊಡಬೇಕು. ಇದಾದ ನಂತರ ಹೆಣ್ಣು ಮನೆಯವರು ವಿವಿಧ ಬಗೆಯ ಅಡುಗೆ ಪದಾರ್ಥಗಳನ್ನು ಹಾಗೂ ಅಡುಗೆ ಸಾಮಾನುಗಳನ್ನು ಗಂಡಿನ ಮನೆಗೆ ತಂದು ಒಪ್ಪಿಸುವ ಕಾರ್ಯಕ್ರಮವಿರುತ್ತದೆ.

**ಗಂಗೆಶಾಸ್ತ್ರ :** ವಧು-ವರರು ಹಾಗೂ ಬಂಧುಗಳು ತಾಳಿಯ ಮರುದಿನ ವಧುವಿನ ಮನೆಗೆ ಹೋಗಿ ಅರಿಶಿಣದ ನೀರಿನ ದಿನವನ್ನು ಲೆಕ್ಕ ಮಾಡಿ ಐದನೇ ದಿನದಲ್ಲಿ ಗಂಗೆ ಪೂಜೆ ಮಾಡುವರು. ಈ ದಿನದಂದು ವಧು-ವರರು ತಲೆಯ ಮೇಲೆ ಮಣ್ಣಿನ ಬಿಂದಿಗೆ ಹೊತ್ತುಕೊಂಡು ಸುಮಂಗಲೆಯರು ಆರತಿ ಹಿಡಿದುಕೊಂಡು ಗಂಗೆಗೆ ಹೋಗಬೇಕು. ಗಂಗೆಗೆ ಹುಗ್ಗಿ, ಅನ್ನ ಅರ್ಪಿಸಿ ಪೂಜೆ ಮಾಡಬೇಕು. ನಂತರ ಬಿಂದಿಗೆಯಲ್ಲಿ ನೀರು ತುಂಬಿಕೊಂಡು ತಲೆಯ ಮೇಲೆ ಹೊತ್ತು ಮನೆಗೆ ಬಂದು ದೇವರ ಮುಂದೆ ಇಳಿಸುವರು. ಈ ಸಮಯದಲ್ಲಿ ವಧು-ವರರನ್ನು ಗಂಡನ ಹಾಗೂ ಹೆಂಡತಿಯ ಹೆಸರು ಹೇಳಲು ಒತ್ತಾಯಿಸುವುದು ಕಂಡುಬರುತ್ತದೆ.

**ಸೋಬಾನ (ಮೊದಲ ರಾತ್ರಿ) :** ಗಂಗೆಶಾಸ್ತ್ರ ಆಚರಣೆ ಮಾಡಿದ ಹನ್ನೊಂದನೆ ದಿನ ಅಂದರೆ ಮದುವೆಯಾಗಿ ಹದಿನಾರನೆ ದಿನದಂದು ಹೊಸ ದಂಪತಿಗಳನ್ನು ಒಟ್ಟುಗೂಡಿಸುವುದು ಅಲೆಮಾರಿ ಕುರುಬರ ಸಂಪ್ರದಾಯ. ಮದುವೆಯಾದ ಹುಡುಗಿ ಋತುಮತಿಯಾಗಿದ್ದರೆ ಮದುವೆಯಾದ ಹೊಸದರಲ್ಲಿ ಕೆಲವು ದಿನಗಳು ತವರು ಮನೆಗೆ ಹೋಗಿ, ಸ್ವಲ್ಪ ಕಾಲ ಅಲ್ಲಿದ್ದು, ಅನಂತರ ಗಂಡನ ಮನೆಗೆ ಮರಳುತ್ತಾಳೆ. ತವರು ಮನೆಯಲ್ಲಿ ತಂಗಬೇಕಾದ ದಿನಗಳೆಷ್ಟು ಎಂಬುದನ್ನು ಎರಡು ಕಡೆಯ ಹಿರಿಯರು ನಿರ್ಧರಿಸುತ್ತಾರೆ. ಒಂದು ವೇಳೆ ಹುಡುಗಿ ಋತುಮತಿಯಾಗಿರದಿದ್ದರೆ ಒಂದು ವಾರದವರೆಗೆ ಮಾತ್ರ ಗಂಡನ ಮನೆಯಲ್ಲಿರಿಸಿಕೊಂಡು ತವರಿಗೆ ಕಳುಹಿಸಿಕೊಡುತ್ತಾರೆ. ಮತ್ತೆ ಅವಳನ್ನು ಗಂಡನ ಮನಗೆ ಕರೆ ತರುವುದು ಅವಳು ಪ್ರೌಢ ಸಂಸ್ಕಾರಕ್ಕೆ ಒಳಗಾದ ನಂತರವೇ. ಒಮ್ಮೊಮ್ಮೆ ಗಂಡನ ಮನೆಯಲ್ಲಿ ಕೆಲಸದ ಒತ್ತಡವಿದ್ದರೆ ಹುಡುಗಿ ಚಿಕ್ಕವಳಿದ್ದರೂ, ಗಂಡಿನ ಕಡೆಯವರು ಬಂದು ಕರೆದುಕೊಂಡು ಹೋಗುವ ಸಾಧ್ಯತೆ ಇರುತ್ತದೆ.

**ಬಹುಪತ್ನಿತ್ವ :** ಈ ಸಮುದಾಯದಲ್ಲಿ ಏಕಪತ್ನಿತ್ವ ಕುಟುಂಬಗಳೇ ಜಾಸ್ತಿ ಇವೆ. ಬಹುಪತ್ನಿತ್ವಕ್ಕೆ ಹೆಚ್ಚಿನ ಪ್ರಾಶಸ್ತ್ಯವಿರದಿದ್ದರೂ ಕೆಲವೊಂದು ಸಂದರ್ಭಗಳಲ್ಲಿ ಬಹುಪತ್ನಿತ್ವ ವಿವಾಹಕ್ಕೆ ಅವಕಾಶವಿದೆ. ಮದುವೆಯಾಗಿ ಬಹುದಿನಗಳವರೆಗೆ ಮಕ್ಕಳಾಗದಿದ್ದರೆ, ಹೆಂಡತಿ

ಬಂಜೆ ಎಂದು ಕಂಡುಬಂದಲ್ಲಿ, ಅನಾರೋಗ್ಯದಿಂದ ಬಳಲುತ್ತಿದ್ದು ಸದಾ ರೋಗಿಯಾಗಿದ್ದರೆ, ಹೆಂಡತಿ ಗಂಡು ಮಕ್ಕಳಿಗೆ ಜನ್ಮ ನೀಡದಿರುವ ಇತ್ಯಾದಿ ಪ್ರಸಂಗಗಳಲ್ಲಿ ಮಕ್ಕಳನ್ನು ಪಡೆಯುವ ಸಲುವಾಗಿ ಬಹುಪತ್ನಿತ್ವ ಹೊಂದಲು ಇಷ್ಟಪಡುತ್ತಾರೆ. ವಂಶದ ಕುಡಿ ಬೆಳೆಯಬೇಕೆಂಬುದು ಒಂದಾದರೆ, ಮತ್ತೊಂದು ಕುರಿ ಸಾಕಾಣಿಕೆಯಿಂದಲೇ ಜೀವನ ನಿರ್ವಹಣೆ ಮಾಡಬೇಕಾಗಿರುವುದರಿಂದ ಅವನ್ನು ಸಾಕಿ-ಸಲುವುದಕ್ಕಾಗಿ ಹಾಗೂ ಮುಪ್ಪಿನಲ್ಲಿ ತಮ್ಮನ್ನು ನೋಡಿಕೊಳ್ಳಲು ಗಂಡು ಸಂತಾನಬೇಕೆಂಬ ಉದ್ದೇಶದಿಂದ ಬಹುಪತ್ನಿತ್ವ ಹೊಂದುತ್ತಾರೆ.

ವಿಧವಾ ವಿವಾಹ : ಅಲೆಮಾರಿ ಕುರುಬರಲ್ಲಿ ಗಂಡ ಸತ್ತ ಮೇಲೆ ವಿಧವೆಯು ಮರುವಿವಾಹ ಮಾಡಿಕೊಳ್ಳಲು ಅವಕಾಶವಿದೆ. ಅದಕ್ಕೆ 'ಕೂಡಿಕೆ' ಅಥವಾ 'ಕೂಡಾವಳಿ' ಎಂದು ಕರೆಯುತ್ತಾರೆ. ಸಾಮಾನ್ಯವಾಗಿ ಹೆಣ್ಣು ಚಿಕ್ಕ ವಯಸ್ಸಿನವಳಾಗಿದ್ದು ಅಥವಾ ಇನ್ನು ಮಕ್ಕಳು ಆಗದೆ ಇದ್ದ ಪ್ರಸಂಗಗಳಲ್ಲಿ 'ವಿಧವಾ ವಿವಾಹ' ಮಾಡಲಾಗುತ್ತದೆ. ವಿಧವೆಯನ್ನು ಮದುವೆ ಮಾಡಿಕೊಳ್ಳುವ ಗಂಡು ಈಗಾಗಲೇ ಮದುವೆಯಾಗಿರುತ್ತಾನೆ ಅಥವಾ ಹೆಂಡತಿ ತೀರಿಕೊಂಡಿರುತ್ತಾಳೆ. ಅಥವಾ ಹೆಂಡತಿಯನ್ನು ಬಿಟ್ಟಿರುತ್ತಾನೆ. ಇಂತಹ ಮದುವೆಗಳು ದೇವರ ಗುಡಿಗಳಲ್ಲಿ ಜರುಗುತ್ತವೆ. ಸಾಮಾನ್ಯವಾಗಿ ವಿವಾಹವಾಗುವ ಸ್ತ್ರೀ ಅತ್ತೆ-ಮಾವನ ಒಪ್ಪಿಗೆ ತೆಗೆದುಕೊಂಡೆ ವಿವಾಹ ಮಾಡುತ್ತಾರೆ. ಈ ತರಹದ ಮದುವೆಯಾದ ಗಂಡು-ಹೆಣ್ಣುಗಳು ಮಂಗಳ ಕಾರ್ಯಗಳಲ್ಲಿ ಭಾಗವಹಿಸುವಂತಿಲ್ಲ. ಹಾಗೆಯೇ ಇವರಿಗೆ ಹುಟ್ಟುವ ಮಕ್ಕಳು ಕಾಲಾಂತರದಲ್ಲಿ ಪುನಃ ಕೂಡಾವಳಿ ಕುಟುಂಬಗಳಿಂದಲೇ ತಮಗೆ ಸಂಗಾತಿಗಳನ್ನು ಹುಡುಕಿಕೊಳ್ಳುವುದು ಅನಿವಾರ್ಯವಾಗಿದೆ.

೫

# ಆರಾಧನೆ ಆಚರಣೆ ನಂಬಿಕೆ

**ಹು**ಟ್ಟಿನಿಂದ ಸಾವಿನವರೆಗೆ ಜೀವನದ ಮುಖ್ಯ ಘಟ್ಟಗಳಲ್ಲಿ ಅಲೆಮಾರಿ ಕುರುಬರು ಅನುಸರಿಸುವ ಪದ್ಧತಿ ಹಾಗೂ ಸಾಂಪ್ರದಾಯಗಳು ಇತರೆ ಕುರುಬ ಸಮುದಾಯಗಳಂತೆ ಹೊರ ನೋಟಕ್ಕೆ ಕಂಡರೂ ಒಳಹೊಕ್ಕು ನೋಡಿದಾಗ ಭಿನ್ನವಾಗಿರುವುದರ ಜೊತೆಗೆ ಕುತೂಹಲಕರವಾಗಿವೆ, ಅಧ್ಯಯನಕ್ಕೆ ಯೋಗ್ಯವಾಗಿವೆ. ಇವರು ತಮ್ಮ ಸ್ವಗ್ರಾಮ ಬಿಟ್ಟು ಬಹಳಷ್ಟು ದೂರ ಕುರಿಗಳ ಜೊತೆಗೆ ಕುಟುಂಬ ಸಮೇತ ವಲಸೆ ಬಂದರೂ ತಾವು ಅನುಸರಣೆ ಮಾಡುತ್ತಿರುವ ಜೀವನಾವರ್ತನ ಅಂದರೆ ಜನನದಿಂದ ಮರಣದವರೆಗೆ ಜರುಗುವ ಆಚರಣೆಗಳನ್ನು ಸಾಮಾನ್ಯವಾಗಿ ತಮ್ಮ ಸ್ವಗ್ರಾಮಗಳಲ್ಲಿ ಆಚರಿಸುತ್ತಾರೆ. ಆದರೆ ಕೆಲವೊಂದು ಶಾರೀರಿಕ ಪ್ರಕ್ರಿಯೆಗಳಾದ ಹೆರಿಗೆ, ಋತುಮತಿ, ಮರಣಗಳನ್ನು ಅಂದಾಜಿಸುವುದು ಅಸಾಧ್ಯ. ಇಂಥವು ತಾವು ಅಲೆದಾಡುವ ಪ್ರದೇಶಗಳಲ್ಲಿ ಕೆಲವೊಮ್ಮೆ ಜರುಗುತ್ತವೆ. ಉದಾಹರಣೆಗೆ ತಾವು ಅಲೆದಾಡುವ ಪ್ರದೇಶಗಳಲ್ಲಿ ಹೆರಿಗೆಯಾದರೆ ಗುಡಾರ ಹೂಡಿದ ಸಮೀಪದ ಊರಿನ ಜನರನ್ನು ಪರಿಚಯ ಮಾಡಿಕೊಂಡು ಒಂದೆರಡು ದಿನ ಆ ಗ್ರಾಮದಲ್ಲಿದ್ದು ನಂತರ ಸ್ವಗ್ರಾಮಕ್ಕೆ ಕರೆದುಕೊಂಡು ಹೋಗುವರು. ಒಂದು ವೇಳೆ ಚಿಕ್ಕ ಮಕ್ಕಳು ತೀರಿಕೊಂಡರೆ ಬಿಡಾರ ಹೂಡಿದ ಸ್ಥಳದಲ್ಲಿಯೇ ಹೂಳುತ್ತಾರೆ. ವಯಸ್ಸಿಗೆ ಬಂದ ಅಥವಾ ಮದುವೆಯಾಗಿದ್ದವರು ತೀರಿಕೊಂಡರೆ ಅದೆಷ್ಟೇ ಕಷ್ಟವಾದರೂ ಸ್ವಗ್ರಾಮಕ್ಕೆ ತೆಗೆದುಕೊಂಡು ಹೋಗಿ ಶವಸಂಸ್ಕಾರ (ಮಣ್ಣು) ಮಾಡುತ್ತಾರೆ.

## ಜನನ

'ಜನನ' ಎಂಬುದು ಸ್ವಾಭಾವಿಕ, ಸಹಜ ಹಾಗೂ ಶಾರೀರಿಕ ಕ್ರಿಯೆಯಾಗಿದೆ. ಇದನ್ನು ಆಚರಿಸುವ ಪದ್ಧತಿಗಳು ಸಮುದಾಯಗಳಲ್ಲಿ ಭಿನ್ನವಾಗಿರುವುದನ್ನು ಕಾಣುತ್ತೇವೆ. ಅಲೆಮಾರಿ ಕುರುಬರಲ್ಲಿ ಮೊದಲನೆಯ ಮತ್ತು ಎರಡನೆಯ ಹೆರಿಗೆಯು ತವರು ಮನೆಯಲ್ಲಿಯಾಗಬೇಕೆಂಬುದು ಪದ್ಧತಿಯಾಗಿದೆ. ಆನಂತರದ ಹೆರಿಗೆಗಳು ತಮ್ಮ ಅನುಕೂಲಕ್ಕೆ ತಕ್ಕಂತೆ ಎಲ್ಲಿಯಾದರೂ ಮಾಡಬಹುದು.

ಹೆರಿಗೆಯಾಗಿ ಐದು ದಿನಗಳವರೆಗೆ ಬಾಣಂತಿಗೆ ಸೂತಕ ದಿನ. ಅಲ್ಲಿಯವರೆಗೆ ಅವಳು

ಯಾವ ಕೆಲಸ ಮಾಡುವಂತಿಲ್ಲ. ಐದನೇ ದಿನದಲ್ಲಿ ತಾಯಿಗೆ ಮತ್ತು ಮಗುವಿಗೆ ಸ್ನಾನ ಮಾಡಿಸಿ ಹತ್ತಿರದ ಕೆಲವು ರಕ್ತ ಸಂಬಂಧಿಕರಿಗೆ ಸಿಹಿ ಊಟ ನೀಡಲಾಗುವುದು. ಆ ದಿನವೇ ಸೂಲಗಿತ್ತಿಗೆ ಹೊಸ ಸೀರೆ ತಂದು ಉಡಿಸುವುದು ವಾಡಿಕೆ. ಒಂದೂವರೆ ತಿಂಗಳು ಅಥವಾ ಮೂರು ತಿಂಗಳಲ್ಲಿ ಗಂಗಾಪೂಜೆಯನ್ನು ಮಾಡುತ್ತಾರೆ. ಇದು ಅವರವರ ಅನುಕೂಲಕ್ಕೆ ತಕ್ಕಂತೆ ಇರುತ್ತದೆ. ಕುರಿಗಳಲ್ಲಿರುವ ಗಂಡನಿಗೆ ಅಡಿಗೆ ಮಾಡಿಡಲು ಯಾರು ಇಲ್ಲದ ಸ್ಥಿತಿಯಲ್ಲಿದ್ದಾಗ ೯ ದಿನಗಳಲ್ಲೇ ಗಂಗಾಪೂಜೆ ಕಾರ್ಯಕ್ರಮ ಮಾಡಿ ಮುಗಿಸುತ್ತಾರೆ.

### ನಾಮಕರಣ

ನಾಮಕರಣ ಆಚರಣೆ ಕಾರ್ಯವನ್ನು ಗಂಡು ಮಗುವಿಗೆ ೧೨ನೇ ದಿನದಲ್ಲಿ ಮತ್ತು ಹೆಣ್ಣು ಮಗುವಿಗೆ ೧೩ನೇ ದಿನದಲ್ಲಿ ಆಚರಿಸುತ್ತಾರೆ. ತೊಟ್ಟಿಲನ್ನು ಶೃಂಗರಿಸಿ ಬಾಣಂತಿಗೆ ಹಾಗೂ ಮಗುವಿಗೆ ನೀರು ಹಾಕಿ, ಬಾಣಂತಿ ಕೈಯಿಂದ ೫ ಧಾನ್ಯಗಳಿಗೆ ನೀರು ಚಿಮುಕಿಸಿ ಗುಗ್ಗರಿ ತಯಾರಿಸುತ್ತಾರೆ. ನಾಮಕರಣಕ್ಕೆ ಬಂದವರಿಗೆ ಗುಗ್ಗರಿಯನ್ನು ಕೊಡಲಾಗುವುದು. ಸಾಮಾನ್ಯವಾಗಿ ಅಲೆಮಾರಿ ಕುರುಬರು ತಮ್ಮ ಮಗುವಿನ ಹೆಸರಿಡುವಾಗ ಮನೆದೇವರು ಅಥವಾ ಹಿರಿಯರ ಹೆಸರಿಡುವುದು ವಾಡಿಕೆಯಾಗಿದೆ. ನಿದರ್ಶನಕ್ಕೆ ಕೆಲವು ಹೆಸರುಗಳು ಈ ಕೆಳಗಿನಂತಿರುವುದನ್ನು ಗಮನಿಸಬಹುದು.

| ದೇವರ ಹೆಸರು | ಮನುಷ್ಯರ ಹೆಸರು |
|---|---|
| ಬೀರದೇವರು | ಬೀರಪ್ಪ |
| ಲಕ್ಷ್ಮಿ | ಲಘುಮವ್ವ, ಲಘುಮಣ್ಣ |
| ಮಾಳಿಂಗರಾಯ | ಮಾಳಪ್ಪ, ಮಾಳವ್ವ |
| ಹಾಲಸಿದ್ಧ | ಹಾಲಪ್ಪ, ಹಾಲವ್ವ, ಸಿದ್ಧಪ್ಪ |
| ಕರಿಸಿದ್ಧ | ಸಿದ್ದಪ್ಪ, ಕರಿಯಪ್ಪ |
| ಮಾಯಮ್ಮ | ಮಾಯವ್ವ, ಮಾಯಕ್ಕ, ಮಾಯಪ್ಪ |
| ರೇವಣಸಿದ್ಧೇಶ್ವರ | ರೇವಣ್ಣ |
| ಅಮೋಘಸಿದ್ಧ | ಸಿದ್ದಪ್ಪ, ಅಮೋಘ ಇತ್ಯಾದಿ |

ಈ ಮೇಲಿನ ಹೆಸರುಗಳು ದೇವರ ಹೆಸರುಗಳು ಹಾಗೂ ಹಿರಿಯರ ಹೆಸರುಗಳಾಗಿರುವುದರಿಂದ ಅವನ್ನು ತಮ್ಮ ವಂಶದ ಕುಡಿಗಳಿಗೆ ಮುಂದುವರಿಸುತ್ತಾ ಹೋಗುತ್ತಾರೆ. ಈ ರೀತಿ ಪ್ರಚಲಿತವಿರುವ ಅವರ ನಂಬಿಕೆ ಗಾಢವಾದದು. ತಮ್ಮ ಹೆತ್ತವರ ಹೆಸರನ್ನು ಸ್ಮರಿಸಿಕೊಳ್ಳುವುದಕ್ಕಾಗಿ ಹಿರಿಯರ ಹೆಸರನ್ನು ಕರೆಯುವುದು ವಾಡಿಕೆಯಾಗಿದೆ. ಸತ್ತ ಹಿರಿಯರು ಮಕ್ಕಳ ರೂಪದಲ್ಲಿ ಮರುಜನ್ಮ ತಾಳಿ ಅವತರಿಸುತ್ತಾರೆಂಬುದನ್ನು ಇವರು ನಂಬುತ್ತಾರೆ. ಆದರೆ ಇಂದು ಆಧುನಿಕತೆಯ ಪ್ರಭಾವದಿಂದ ಹೆಸರುಗಳು ಆಧುನಿಕರಣಗೊಂಡಿವೆ. ಉದಾಹರಣೆಗೆ ಮಂಜು, ಸಂತೋಷ, ಸಂಗೀತ, ರೇಖಾ ಇತ್ಯಾದಿ ಹೆಸರುಗಳನ್ನಿಟ್ಟು ಕರೆಯುತ್ತಾರೆ.

**ಕಿವಿ ಚುಚ್ಚುವುದು** : ಮಗು ಜನಿಸಿದ ಮೂರು ತಿಂಗಳಲ್ಲಿ ಒಳ್ಳೆಯ ವಾರ ನೋಡಿ ಅಂದರೆ ಆದಿತ್ಯವಾರ ಅಥವಾ ಮನೆದೇವರುಗಳ ದಿನದಂದು ಕಿವಿ ಚುಚ್ಚುವರು. ಕಿವಿ ಚುಚ್ಚಲು ಅಂದು ಅಕ್ಕಸಾಲಿಗನಿಗೆ ಮನೆಗೆ ಬರಹೇಳುವರು. ಅಕ್ಕಸಾಲಿಗನು ಮನೆಗೆ ಬಂದ ಮೇಲೆ ಮಗುವನ್ನು ಕಂಬಳಿಯ ಮೇಲೆ ಕೂಡಿಸಿ ಭಂಡಾರ ಹಚ್ಚುವರು. ಆತನು ತಾಮ್ರದ ಕಡ್ಡಿಯ ಸಹಾಯದಿಂದ ಕಿವಿ ಚುಚ್ಚುವುದು ಸಾಮಾನ್ಯ. ಇವರಲ್ಲಿ ಕೆಲವರು ತಮ್ಮ ಮಕ್ಕಳಿಗೆ ಕಿವಿಯ ಎರಡು ಭಾಗದಲ್ಲಿ ಅಂದರೆ ಕೆಳಗಿವಿ ಮತ್ತು ಮೇಲ್ಗಿವಿ ಭಾಗದಲ್ಲಿ ಕಿವಿ ಚುಚ್ಚುತ್ತಾರೆ. ಈಗ ಹೆಚ್ಚಾಗಿ ಕೆಳಗಿವಿಗೆ ಮಾತ್ರ ಚುಚ್ಚುವುದನ್ನು ಕಾಣುತ್ತೇವೆ. ಕೊಬ್ಬರಿ, ಗೋಧಿ, ಬೆಲ್ಲ, ಹಿಟ್ಟು, ಎಲೆ-ಅಡಿಕೆ ಹಾಗೂ ದಕ್ಷಿಣೆಯಾಗಿ ಹಣವನ್ನು ಕಾಣಿಕೆಯಾಗಿ ಅಕ್ಕಸಾಲಿಗನಿಗೆ ನೀಡುತ್ತಾರೆ.

ಜವಳ

ಜನಿಸಿದ ಮಗು ಗಂಡಾಗಲಿ ಅಥವಾ ಹೆಣ್ಣಾಗಲಿ ಜನಿಸಿದಾಗಿನಿಂದ ಕಾಯ್ದಿಟ್ಟ ಕೂದಲನ್ನು ತೆಗೆಯುವದಕ್ಕೆ ಜವಳ ತೆಗೆಯುವುದು ಎನ್ನುವರು. ಈ ಕಾರ್ಯವನ್ನು ಅಲೆಮಾರಿ ಕುರುಬರು ೩. ಅಥವಾ ೫ ವರ್ಷದಲ್ಲಿ ನೆರವೇರಿಸುವರು. ತಮ್ಮ ಮಗುವಿನ ಜವಳ ತೆಗೆಸುತ್ತೇವೆಂದು ದೇವರಿಗೆ ಹರಕೆ ಹೊತ್ತುಕೊಂಡಿದ್ದರೆ, ಅಂಥವರು ಶುಭದಿನ ನೋಡಿ ಹರಕೆ ಹೊತ್ತ ದೇವಸ್ಥಾನದಲ್ಲಿ ತೆಗೆಸುವರು, ಇಲ್ಲವಾದರೆ ಮನೆಯಲ್ಲಿಯೇ ತೆಗೆಸುವ ವ್ಯವಸ್ಥೆ ಮಾಡುವರು. ಕೂದಲು ತೆಗೆಯುವಾಗ ಮಗುವನ್ನು ಕರಿಯ ಕಂಬಳಿಯ ಮೇಲೆ ಕೂಡಿಸಿ ಹಣೆಗೆ ಭಂಡಾರ ಹಚ್ಚುವುದು ವಾಡಿಕೆಯಾಗಿದೆ. ಪೂಜೆಗಾಗಿ ದವಸಧಾನ್ಯ, ಎಲೆ-ಅಡಿಕೆ ಹಾಗೂ ೧೧.೦೦ ರೂ.ಗಳನ್ನು ದಕ್ಷಿಣೆಯಾಗಿಟ್ಟು ಪೂಜೆ ಮಾಡುವರು. ಮಗುವಿನ ತಲೆಗೂದಲನ್ನು ಪ್ರಥಮ ಬಾರಿಗೆ ತೆಗೆಯುವ ಸಂದರ್ಭವಾದ್ದರಿಂದ ಸೋದರಮಾವನು ವೀಳ್ಯದೆಲೆ ಹಿಡಿದು ನೆಪಮಾತ್ರಕ್ಕೆ ಮುಟ್ಟಿಸುವುದು ರೂಢಿ-ಸಂಪ್ರದಾಯವಾಗಿದೆ. ಪ್ರೀತಿಗಾಗಿ ಅವನಿಗೆ ಹೊಸಬಟ್ಟೆ ಉಡುಗೊರೆಯಾಗಿ ನೀಡುವರು. ಇದಾದ ನಂತರ ಅಥವಾ ಮುಂದೊಂದು ದಿನ ಕ್ಷೌರಿಕನು ಹುಟ್ಟು ಕೂದಲನ್ನು ತೆಗೆಯುವನು. ಪ್ರತಿಯಾಗಿ ಅಕ್ಕಿ, ಬೆಲ್ಲ, ಬೇಳೆ, ಕೊಬ್ಬರಿ ಮತ್ತು ಎಲೆ-ಅಡಿಕೆ ಹಾಗೂ ದಕ್ಷಿಣೆಯಾಗಿ ಹಣವನ್ನು ನೀಡುವ ಪದ್ಧತಿಯನ್ನು ಅನುಸರಿಸಿಕೊಂಡು ಬಂದಿದ್ದಾರೆ.

ಋತುಮತಿ

ಸೃಷ್ಟಿಯ ನಿಯಮದಂತೆ ವಯಸ್ಸಿಗೆ ಬಂದ ಹೆಣ್ಣು ಮೈನೆರೆಯುವುದು ಸಹಜ ಹಾಗೂ ಸ್ವಾಭಾವಿಕ ಪ್ರಕ್ರಿಯೆಯಾಗಿದೆ. ಪ್ರಕೃತಿಯ ಮಡಿಲಲ್ಲಿಯೇ ಹೆಣ್ಣು ಮಗಳೊಬ್ಬಳು ವಯಸ್ಸಿಗೆ ಬರುವುದನ್ನು ಅಲೆಮಾರಿ ಕುರುಬರು ಮೈನೆರೆದಳು ಎಂದು ಕರೆದರೆ ಇತರರು ದೊಡ್ಡವಳಾದಳು, ಋತುಮತಿಯಾದಳೆಂದು ಕರೆಯುತ್ತಾರೆ. ಋತುಮತಿಯಾದ ೧೦ ದಿನಗಳವರೆಗೆ ಮೈಲಿಗೆಯೆಂದು ಪರಿಗಣಿಸಿ ಅವಳಿಗೆ ಪ್ರತ್ಯೇಕ ವಾಸಕ್ಕೆ ವ್ಯವಸ್ಥೆ ಮಾಡುವರು. ಹುಡುಗಿಯ ಸೋದರತ್ತೆಯ ಕೈಯಿಂದ ನೀರು ಹಾಕಿಸುವರು. ಇವರ ಹೆಣ್ಣು ಮಗಳು ಬಿಡಾರ ಹೂಡಿದ

ಅಡವಿಯಲ್ಲೇ ಹೆಚ್ಚಾಗಿ ಮೈನೆರೆಯುವದರಿಂದ ಹತ್ತು ದಿನಗಳವರೆಗೆ ಗುಡಾರ ಬದಲಾಯಿಸುವುದಿಲ್ಲ. ಹತ್ತನೆ ದಿವಸ ಸ್ನಾನ ಮಾಡಿಸಿ ಸೋದರತ್ತೆ ಅಥವಾ ಸೋದರ ಮಾವ ತಂದ ಹೊಸ ಹಸಿರು ಸೀರೆ, ಕುಪ್ಪಸ ತೊಡಿಸಿ ತಲೆಗೆ ಹೂ ಮುಡಿಸಿ ನೀರು ಹರಿಯುವ ಸ್ಥಳಕ್ಕೆ ಹೋಗಿ ಗಂಗಾ ಪೂಜೆ ಸಲ್ಲಿಸಿ ಗುಡಾರಕ್ಕೆ ಬರುತ್ತಾರೆ. ನಂತರ ಆ ಹೆಣ್ಣಿಗೆ ಉಡಿ ತುಂಬಿ ತಮ್ಮ ಕುಲದೇವರಿಗೆ ಪೂಜೆ ಸಲ್ಲಿಸುವರು.

ಇವರು ತಮ್ಮ ಹೆಣ್ಣು ಮಕ್ಕಳಿಗೆ ಮೈ-ನೆರೆಯುವ ಮುಂಚೆ ಮದುವೆ ಮಾಡುವುದು ವಾಡಿಕೆ. ಹೆಣ್ಣು ಮೈನೆರೆತ ವಿಷಯವನ್ನು ಬಂಧು ಬಳಗದವರಿಗೆ ಹಾಗೂ ಗಂಡನ ಕುಟುಂಬದವರಿಗೆ ತಿಳಿಸುವರು. ಈ ವಿಷಯವನ್ನು ಗಂಡನ ಕುಟುಂಬದವರಿಗೆ ತಿಳಿಸಲು ಬಂದ ಬೀಗನಿಗೆ ಹೊಸ ಬಟ್ಟೆಯನ್ನು ಉಡುಗೊರೆಯಾಗಿ ಕೊಡಬೇಕು. ಗಂಡನ ಮನೆಯವರು ಈ ಸುದ್ದಿ ತಿಳಿದ ತಕ್ಷಣ ಗುಡಾರದಲ್ಲಿರುವವರಿಗೆ ಸಕ್ಕರೆ ಹಂಚುವರು. ವಿಷಯವನ್ನು ಗಂಡನಿಗೆ ನೇರವಾಗಿ ಹೇಳದೆ ಭಂಡಾರ ಹಚ್ಚುವುದರ ಮುಖಾಂತರ ಮನವರಿಕೆ ಮಾಡಿಕೊಡುವ ಪದ್ಧತಿ ರೂಢಿಯಲ್ಲಿದೆ.

**ಮರಣ (ಸಾವು)**

ಮಾನವ ಜೀವನದಲ್ಲಿ ಕೊನೆಯದಾಗಿ ನಡೆಯುವ ಸಂಸ್ಕಾರವೇ ಮರಣ ಸಂಸ್ಕಾರ. ಮರಣಾ ನಂತರ ವ್ಯಕ್ತಿಗೆ ಸ್ವರ್ಗ ಪ್ರಾಪ್ತಿಯಾಗಲಿ ಎಂಬ ಸದುದ್ದೇಶದಿಂದ ಅವನ ಆಪ್ತರು ಯೋಗ್ಯ ರೀತಿ ಯಲ್ಲಿ ಅಂತ್ಯ ವಿಧಿ ಸಂಸ್ಕಾರಗಳನ್ನು ನಡೆಸುವುದು ವಾಡಿಕೆಯಾಗಿದೆ. ಸತ್ತ ವ್ಯಕ್ತಿ ತನ್ನ ಜೀವಿತದ ಅವಧಿಯಲ್ಲಿ ಗಳಿಸಿದ ಪಾಪ ಪುಣ್ಯಗಳ ಆಧಾರದ ಮೇಲೆ ಸ್ವರ್ಗವಾಸಿಯಾಗಿ ದೇವರಾಗುತ್ತಾನೆಂದು ಇಲ್ಲವೆ ನರಕದಲ್ಲಿ ಬಿದ್ದು ದೆವ್ವ ಪೀಡೆಯಾಗುತ್ತಾನೆಂದೂ ಅಲೆಮಾರಿ ಕುರುಬರು ನಂಬುತ್ತಾರೆ.

ಇವರಲ್ಲಿ ಸತ್ತವರನ್ನು ಹೂಳುವ ಹಾಗೂ ಸುಡುವ ಎರಡು ಪದ್ಧತಿಗಳಿವೆ. ಬಾಣಂತಿಯರನ್ನು ಪಿಳ್‌ಬುಟ್ಟು ಬಿಟ್ಟವರನ್ನು, ಕುಷ್ಠರೋಗ, ತೊನ್ನುರೋಗ ಇರುವವರನ್ನು ಸುಟ್ಟರೆ ಉಳಿದವರನ್ನು ಹೂಳುತ್ತಾರೆ. ಸತ್ತ ವಿಷಯವನ್ನು ಆಪ್ತರಿಗೆಲ್ಲಾ ತಿಳಿಸುವರು. ಅವರು ಬಂದೊಡನೆ ಸತ್ತ ವ್ಯಕ್ತಿ ಮದುವೆಯಾಗಿದ್ದಲ್ಲಿ ತೇರು ಕಟ್ಟಿ ನಾಲ್ಕು ಮಂದಿ ಹೊತ್ತುಕೊಂಡು ಹೋಗುತ್ತಾರೆ. ಮದುವೆಯಾಗದೆ ಸತ್ತವರನ್ನು ಚಟ್ಟದ ಮೇಲೆ ಅಂಗಾತ ಮಲಗಿಸಿ ಹೊತ್ತುಕೊಂಡು ಹೋಗುತ್ತಾರೆ. ಸತ್ತವ್ಯಕ್ತಿಯ ಮುಂದೆ ಹಿರಿಯ ಮಗ ಬಂದು ಕೈಯಲ್ಲಿ ಅನ್ನದ ಮಡಿಕೆ ಇನ್ನೊಂದು ಕೈಯಲ್ಲಿ ಬೆಂಕಿಯಿರುವ ಮಡಿಕೆಯನ್ನು ಹಿಡಿದು ಹೊರಡುತ್ತಾನೆ. ಸ್ಮಶಾನದಲ್ಲಿ ಹೆಣದ ಎಡದಿಂದ ಮೂರು ಸಾರಿ ಪ್ರದಕ್ಷಿಣೆ ಹಾಕಿದ ಮೇಲೆ ನಾಲ್ಕು ದಿಕ್ಕಿಗೂ ಮಡಿಕೆಯಲ್ಲಿರುವ ಅನ್ನ ಎಸೆದು ಮೃತ ವ್ಯಕ್ತಿಯ ತಲೆಯ ಹತ್ತಿರ ಮಡಿಕೆ ಒಡೆಯುತ್ತಾರೆ. ಕುಳಿತ ಭಂಗಿಯಲ್ಲಿಯೇ ಶವವಿಟ್ಟು ಉತ್ತರಾಭಿಮುಖವಾಗಿ ಸಮಾಧಿಯ ಗೂಡಿನಲ್ಲಿ ಕೂಡಿಸುವರು. ಮದುವೆಯಾಗದಿದ್ದ ಹೆಣವನ್ನು ಸಮಾಧಿಯಲ್ಲಿರುವ ಉದ್ದ ಗೂಡಿನಲ್ಲಿ ದಕ್ಷಿಣಕ್ಕೆ ತಲೆ ಮಾಡಿ ಮಲಗಿಸುವರು. ನಂತರ ಮೃತನಿಗೆ ಸದ್ಗತಿ ಕೋರುವ

ಮಂಗಳ ಹಾಡಿ ಮುಗಿಸುತ್ತಿದ್ದಂತೆಯೇ ಅಂತ್ಯಕ್ರಿಯೆಯಲ್ಲಿ ಭಾಗವಹಿಸಿದ ಬಂಧುಗಳು ಬಂದು ಐದು ಬೊಗಸೆ ಮಣ್ಣನ್ನು ಸಮಾಧಿಯಲ್ಲಿ ಹಾಕಿ ಋಣ ತೀರಿಸುವರು.

**ಮೂರನೆ ದಿನದ ಕಾರ್ಯ :** ಇದನ್ನು ಅಲೆಮಾರಿ ಕುರುಬರು ದಿನ ಹಾಕುವುದು ಎನ್ನುತಾರೆ. ಈ ಕಾರ್ಯವನ್ನು ತೀರಿಕೊಂಡ ಮೂರನೆಯ ದಿನದಂದು ಮಾಡುವರು. ಅಂದು ಬೇಟೆ ಕೊಯ್ದು ಮಾಂಸ ಅಡುಗೆ ಮಾಡಿಕೊಂಡು, ಸತ್ತ ವ್ಯಕ್ತಿ ಊಟ ಮಾಡುವ, ಕುಡಿಯುವ ಮತ್ತು ಸೇದುವ ಎಲ್ಲಾ ಆಹಾರ ಮತ್ತು ಪಾನೀಯಗಳನ್ನು ಎರಡು ಮರದಲ್ಲಿಟ್ಟುಕೊಂಡು ಸಮಾಧಿಯ ಸ್ಥಳಕ್ಕೆ ತೆಗೆದುಕೊಂಡು ಹೋಗುವರು. ಸತ್ತ ವ್ಯಕ್ತಿಯ ಸಮಾಧಿಗೆ ಎಡೆ ಸಲ್ಲಿಸಿ ಕಾಗೆಯನ್ನು ಕರೆಯುವ ಪದ್ಧತಿಯುಂಟು. ಕಾಗೆಯು ಎಡೆಯನ್ನು ಎಂಜಲು ಮಾಡುವವರೆಗೂ ಯಾರೂ ಊಟ ಮಾಡುವಂತಿಲ್ಲ. ಕಾಗೆ ಮುಟ್ಟಿದರೆ ಯಾವ ತೊಂದರೆಯೂ ಇಲ್ಲ ಎಂದು ತಿಳಿಯುತ್ತಾರೆ. ಎಡೆಯನ್ನು ಕಾಗೆ ಮುಟ್ಟದಿದ್ದರೆ ಇನ್ನೂ ಅನಿಷ್ಟ ಕಾದಿದೆ ಎಂದೇ ತಿಳಿಯುತ್ತಾರೆ. ಅಂದಿನ ಕಾರ್ಯಕ್ಕೆ ಬಂದ ಎಲ್ಲರಿಗೂ ಅನ್ನ ಮತ್ತು ಮಾಂಸದೂಟವನ್ನು ನೀಡಲಾಗುವುದು.

**ದಿವಸ ಅಥವಾ ಒಂಬತ್ತನೇ ದಿನದ ಕಾರ್ಯ :** ಈ ದಿನವು ಶಾಂತಿ ಸಂಸ್ಕಾರದ ಕಾರ್ಯವಾಗಿರುತ್ತದೆ. ಅಂದು ಮನೆಯನ್ನು ಶುಭ್ರಗೊಳಿಸಿ ತಾವು ಶುಭ್ರಗೊಂಡು ಪೂಜಾರಿ ಮಂತ್ರಿಸಿದ ನೀರನ್ನು ಮನೆ ತುಂಬಾ ಸಿಂಪಡಿಸುವ ಮೂಲಕ ಮೈಲಿಗೆಯನ್ನು ಕಳೆದುಕೊಳ್ಳುವರು. ಅಂದು ಋಣ ಕೊಟ್ಟ ವ್ಯಕ್ತಿಯ ತಲೆ ಬೋಳಿಸಿ ಹೊಸ ಬಟ್ಟೆಧರಿಸಿ ಎಡೆಗೆ ಮಾಡಿದ ಸಿಹಿ ಅಡುಗೆ(ಉಗ್ಗಿ ಅಥವಾ ಲಡ್ಡು)ಗಳನ್ನು ಅವನ ಹೆಗಲ ಮೇಲಿರಿಸಿಕೊಂಡು ಸಮಾಧಿಗೆ ಹೋಗುವರು. ಅಲ್ಲಿ ಪೂಜೆ ಮಾಡಿ ಮನೆಗೆ ಬಂದು, ಸತ್ತವರಿಗೆ ಬಟ್ಟೆ ಏರಿಸಿ ಪೂಜೆ ಮಾಡುವರು. ಪೂಜೆಗೆ ಬಂದ ಆಪ್ತರು ಋಣ ಕೊಟ್ಟವರ ಹೆಗಲ ಮೇಲೆ ಹೊಸ ಟವಾಲುಗಳನ್ನು ಹಾಕುವುದು ಸಂಪ್ರದಾಯ. ಆ ಕಾರ್ಯಕ್ಕೆ ಮಾಡಿದ ಸಿಹಿ ಅಡುಗೆ ಊಟಮಾಡಿ ಮರುದಿನ ಬೆಳಿಗ್ಗೆ ಊರುಗಳಿಗೆ ಹೋಗುವರು.

ಅಲೆಮಾರಿ ಕುರುಬರು ಮೃತನ ಪುಣ್ಯತಿಥಿಯನ್ನು ಆಚರಿಸದಿದ್ದರೂ ಯುಗಾದಿಯ ಪಾಡ್ಯದಂದು ಹಿರಿಯರ ಹಬ್ಬವೆಂದು ಆಚರಿಸುವರು. ಅಂದು ಮೃತನ ಸ್ಮರಣಾರ್ಥ ಕುರಿ ಮರಿ ಬಲಿಕೊಟ್ಟು ಹೊಸ ಬಟ್ಟೆಗಳನ್ನಿಟ್ಟು ನೈವೇದ್ಯದ ಮುಖಾಂತರ ಆಚರಣೆಯನ್ನು ಮುಕ್ತಾಯಗೊಳಿಸುವ ಪದ್ಧತಿ ಈಗಲೂ ನಡೆದುಕೊಂಡು ಬಂದಿದೆ.

**ನಂಬಿಕೆಗಳು :** ಅಲೆಮಾರಿ ಕುರುಬರಲ್ಲಿ ಜುಟ್ಟು ಬಿಡುವಿಕೆಯು ಒಂದು ಸಂಪ್ರದಾಯವಾಗಿದ್ದು, ಬೀರಪ್ಪ ಮಾಳಿಂಗರಾಯ ದೇವರ ಹೆಸರಿನ ಗಂಡು ಮಗುವಿನ ತಲೆಯ ಸುಳಿಯ ಮೇಲೆಯ ಸ್ವಲ್ಪ ಕೂದಲನ್ನು ತೆಗೆಯುವುದಿಲ್ಲ. ಇದನ್ನು ಪಿಳ್‌ಜುಟ್ಟು ಎಂದು ಕರೆಯುತ್ತಾರೆ. ಈ ರೀತಿ ಜುಟ್ಟು ಬಿಟ್ಟವರು ತಮ್ಮ ಮದುವೆಯಲ್ಲಿ ಪರಡಿಗೆ (ಹಸೆ ಸಜ್ಜೆ ಅಥವಾ ಜೋಳ ಸೊಪ್ಪೆಯಿಂದ ತಯಾರಿಸಿದ ಬಾಗೀನಾ) ನೀರಿನಲ್ಲಿ ಬಿಡುತ್ತಾರೆ. ಮದುವೆಯಲ್ಲಿ ಪರಡಗಿ ಬಿಟ್ಟನಂತರ ಅವನು ದೇವರ ಹೇಳಿಕೆ ಹೇಳಲು, ಹಾಲುಗ್ಯೆದ (ಕತ್ತಿ ಅಥವಾ ತಲವಾರ

ಹಿಡಿದು ಮೈಗೆ ಬಡಿದುಕೊಳ್ಳಲು ಅರ್ಹ) ಮಾಡಲು ಅರ್ಹನಾಗುತ್ತಾನೆ. ಹಾಗೆಯೇ ಅವನ ಮದುವೆಯ ದಿನ ದೇವರ ಮೈಯಾಗ ಬಂದು ಆಲಗ ಹಾಯುತ್ತಾ ದೇವರ ಹೇಳಿಕೆ ಹೇಳುತ್ತಾನೆ. ಈ ರೀತಿಯ ಆಲಗ ಹಾಯುವಾಗ ತಲವಾರ ಹಿಡಿದುಕೊಂಡು ಹೊಟ್ಟೆಗೆ ಬಡಿದುಕೊಳ್ಳುತ್ತಾ ಹೇಳಿಕೆ ಹೇಳುತ್ತಾನೆ. ಆ ಸಂದರ್ಭದಲ್ಲಿ ನೆರದಿರುವವರು ಬಡಿದು ಕೊಂಡಂತೆಲ್ಲಾ ಭಂಡಾರು ಎಸೆಯುತ್ತಿರುತ್ತಾರೆ (ಹಾರಿಸುತ್ತಾರೆ).

ಜುಟ್ಟು ಬಿಟ್ಟವರು ಜಾತ್ರೆ, ಹಬ್ಬ ಹುಣ್ಣಿಮೆ, ಅಮವಾಸ್ಯೆ ಮದುವೆ, ಆದಿತ್ಯವಾರ ಇತ್ಯಾದಿ ದಿನಗಳಲ್ಲಿ ದೇವರು ಮೈಯಾಗ ಬಂದು ಆಲಗ ಹಾಯುತ್ತ ಹಿಂದೆ ನಡೆದ ಮತ್ತು ಮುಂದೆ ನಡೆಯಬಹುದಾದ ಘಟನೆಗಳ ಬಗ್ಗೆ ಹೇಳಿಕೆಗಳ ಮೂಲಕ ಸೂಚನೆ ನೀಡು ತ್ತಿರುತ್ತಾರೆ.

ಈ ರೀತಿ ಜುಟ್ಟು ಬಿಟ್ಟವರು ಹಲವು ಸಂಪ್ರದಾಯಗಳನ್ನು ಪಾಲಿಸಲೇ ಬೇಕಾಗುತ್ತದೆ. ಅಂಶವುಗಳೆಂದರೆ.

೧. ಹೆಂಡತಿಗೆ ಮುಟ್ಟು, ಮೈಲಿಗೆಯಾದರೆ ೫ ದಿನಗಳವರೆಗೆ ಹೆಂಡತಿ ಸಂಪರ್ಕದಿಂದ ದೂರವಿರಬೇಕು. ಈ ರೀತಿ ಮಂತ್ರಾದವರ ಕೈಯಿಂದ ತಯಾರು ಮಾಡಿದ ಆಹಾರ ಸೇವಿಸುವಂತಿಲ್ಲ ನೀರು ಕುಡಿಯುವಂತಿಲ್ಲ.

೨. ಮಹನವಮಿಯ ೯ ದಿನಗಳು ಆಹಾರ ಸೇವಿಸದೆ ದ್ರವರೂಪದ ಆಹಾರ ಹಣ್ಣುಗಳನ್ನು ತಿಂದು ಜೀವಿಸಬೇಕು.

೩. ಯಾರಾದಾರೂ ತೀರಿಕೊಂಡರೆ ಅವರನ್ನು ಮಣ್ಣುಮಾಡಿದ ಮತ್ತು ಬಾವಿ ಅಥವಾ ನದಿಯಿಂದು ನೀರು ತಂದು ಆ ನೀರಿನಲ್ಲಿಯೇ ಸ್ನಾನ ಮಾಡಿ ಅಡುಗೆ ಮಾಡಿಕೊಂಡು ಊಟಮಾಡಬೇಕು (ಬಾಯಲ್ಲಿ ನೀರು ಕೂಡ ಹಾಕುವಂತಿಲ್ಲ).

೪. ಮೂರು ವರ್ಷಕ್ಕೊಮ್ಮೆಯಾದರೂ ಬೀರದೇವರ ಜಾತ್ರೆಗೆ ಹೋಗಿ ಹಾಲುಗೈದು ಭಂಡಾರು ಹಾರಿಸಿ ಬರಬೇಕು.

೫. ರವಿವಾರ ಗುರುವಾರ ಕರಿಕಂಬಳಿಯಿಂದ ಗದ್ದುಗೆ ಮಾಡಿ ಭೀರ ಮಳಿಂಗರಾಯ ಮಾಯಮ್ಮ ಪಾಸಿಖಾನ್ (ತಮ್ಮಲ್ಲಿರು ದೇವರುಗಳು). ದೇವರುಗಳನ್ನಿಟ್ಟು ನೀರನಿಂದ ತೊಳೆದು ಪೂಜೆಮಾಡಬೇಕು. ಹೀಗೆ ತೊಳೆಯ ನೀರನ್ನು ಕುರಿಗಳಿಗೆ ಚಿಮಿಸಿ ೫ ಹಿಡಿ ಭಂಡಾರವನ್ನು ಕುರಿಗಳ ಮೇಲೆ ಹಾರಿಸಬೇಕು.

**ಮಳೆ**

ಕೃಷಿ ಪ್ರಧಾನವಾದ ನಮ್ಮ ದೇಶದಲ್ಲಿ ಮಳೆ ಸರ್ವರ ಕಲ್ಯಾಣ ಮಾಡಬಲ್ಲ ಶಕ್ತಿಯನ್ನು ಹೊಂದಿದೆ. ಮಳೆ ಮುನಿಸಿಕೊಂಡರೆ ನಮ್ಮ ಬದುಕಿನ ನಿರ್ವಹಣೆ ಕಷ್ಟದಾಯಕವಾಗುವುದರ ಜೊತೆಗೆ ಆರ್ಥಿಕತೆ ಏರುಪೇರಾಗುತ್ತವೆ. ಕೃಷಿಯು ನೇರವಾಗಿ ಮಳೆಯನ್ನು ಅವಲಂಬಿಸಿದ್ದರೆ, ಕೈಗಾರಿಕೆ ಮತ್ತು ಸೇವಾವಲಯಗಳು ಕೃಷಿಯ ಮೂಲಕ ಪರೋಕ್ಷವಾಗಿ ಮಳೆಯನ್ನವ ಲಂಬಿಸಿವೆ. ಮಳೆಯು ದೇಶದ ಒಟ್ಟು ಉತ್ಪಾದನೆಯನ್ನು ಹೆಚ್ಚಿಸುವ ಮತ್ತು ಕ್ಷೀಣಿಸುವ

ಶಕ್ತಿಯನ್ನು ಹೊಂದಿದೆ. ಅಂದರೆ ಉತ್ತಮ ಮಳೆಯಾದಾಗ ದೇಶದ ಆರ್ಥಿಕ ಅಭಿವೃದ್ಧಿಯು ವೇಗದ ಧರದಲ್ಲಿ ಮುನ್ನಡೆದರೆ ಮಳೆಯ ಅಭಾವದಿಂದ ಅಭಿವೃದ್ಧಿ ಕುಂಠಿತಗೊಳ್ಳುತ್ತದೆ.

ಅಲೆಮಾರಿ ಕುರುಬರು ಸದಾ ಪ್ರಕೃತಿಯ ಮಡಿಲಲ್ಲಿರುವುದರಿಂದ ನಿಸರ್ಗದ ಸೂಕ್ಷ್ಮ ನಿರೀಕ್ಷಣೆ, ಆಕಾಶದಲ್ಲಾಗುವ ವ್ಯತ್ಯಾಸ, ಮೋಡಗಳ ಚಲನವಲನ, ಪ್ರಾಣಿ ಪಕ್ಷಿಗಳ ಕ್ರಿಯ ಇತ್ಯಾದಿಗಳನ್ನು ಗಮನಿಸಿ ಮಳೆಯ ಕುರಿತಾಗಿ ಒಂದು ತೀರ್ಮಾನಕ್ಕೆ ಬಂದು ಹೇಳಿಕೆ ಕೊಡುವುದರಲ್ಲಿ ನಿಸ್ಸೀಮರು. ಏಕೆಂದರೆ ಮಳೆ ಚಳಿಯನ್ನದೇ ಗಾಳಿ ಬಿಸಿಲಿಗೆ ಮೈಯೊಡ್ಡಿ ತಮ್ಮ ಕುರಿಹಿಂಡಿನೊಂದಿಗೆ ಬದುಕು ಸಾಗಿಸುತ್ತಾರೆ. ಸದಾ ಪ್ರಕೃತಿಗೆ ಕಣ್ಣು ತೆರೆದವರಾಗಿ ಅದರ ರಮ್ಯ ರುದ್ರಗಳಿಗೆ ತುತ್ತಾಗಿರುತ್ತಾರೆ. ನಿಸರ್ಗದ ಚೆಲುವು, ಭೀಕರತೆ ಕಂಡರಿತಿರುತ್ತಾರೆ. ಹೀಗಾಗಿ ಅನಿವಾರ್ಯ ಅಪ್ರಜ್ಞಾಪೂರ್ವಕವಾಗಿ ನೈಸರ್ಗಿಕ ವ್ಯತ್ಯಾಸ ಮತ್ತು ಅದರ ಪರಿಣಾಮದ ಬಗ್ಗೆ ಜ್ಞಾನ ಅಥವಾ ಅನುಭವ ಅವರಿಗಿರುತ್ತದೆ. ಈ ಜ್ಞಾನದ ಫಲ ಇಂದು ನಿನ್ನೆಯದಲ್ಲ, ತಲೆಮಾರಿನಿಂದ ತಲೆಮಾರಿಗೆ ಬಂದಿದ್ದಾಗಿರುತ್ತದೆ. ಮಳೆಯ ಬಗೆಗೆ ಅಲೆಮಾರಿ ಕುರುಬನಿಗಿರುವ 'ವಿಶೇಷ' ಜ್ಞಾನವನ್ನು ಜನಪದ ಹಾಡು, ಕಥೆಗಳಲ್ಲಿ ಕಂಡುಕೊಳ್ಳುತ್ತೇವೆ. ಇವರ ನೈಸರ್ಗಿಕ ಅನುಭವಗಳ ಆಧಾರದ ಮೇಲೆ "ಕುರುಬ ಕಂಬಳಿ ಬೀಸಿದರೆ ಮಳೆ ಬರುತ್ತೆ" ಎಂಬ ಜನಸಾಮಾನ್ಯರ ಮಾತು ಅಲೆಮಾರಿ ಕುರುಬರ ನಿಸರ್ಗದ ಅನುಭವಗಳನ್ನು ಬಿಚ್ಚಿಡುತ್ತದೆ.

ಅಲೆಮಾರಿ ಕುರುಬನ ನಿಸರ್ಗದ ಅನುಭವದ ಮೂಲಕ ಮಳೆ ಬರುವ ಸಂಕೇತಗಳನ್ನು ಈ ಕೆಳಗಿನಂತೆ ಗುರುತಿಸಬಹುದು.

೧. ಕುರಿಗಳು ಒಂದಕ್ಕೊಂದು ಗುಂಪಾಗಿ ನಿಂತರೆ
೨. ಕುರಿಗಳು ಗಾಳಿ ವಾಸನೆಯನ್ನು ಹಿಡಿದು ಮಳೆಬರುವ ದಿಕ್ಕಿನ ಕಡೆ ಮೇಯುತ್ತ ಹೋಗುವುದು
೩. ಕುರಿಗಳಿಗೆ ಮಳೆ ಬರುವುದು ಗೊತ್ತಾದರೆ ಚಿನ್ನಾಟವಾಡುತ್ತವೆ
೪. ಕಪ್ಪೆ ಎಡಬಿಡದೆ ವಟಗುಟ್ಟುವುದು
೫. ಮೊಟ್ಟೆಗಳೊಂದಿಗೆ ಇರುವೆ ಸಾಲುಗಟ್ಟಿ ಗೂಡಿನಿಂದ ಹೊರಬಿದ್ದರೆ
೬. ಹದ್ದು ಆಕಾಶದೆತ್ತರಕ್ಕೆ ಹಾರಿ ಅಲ್ಲಿಯೇ ಆಡುತ್ತಿದ್ದರೆ
೭. ಹಕ್ಕಿಗಳು ಗಿಡಗಂಟೆಗಳ ಆಸರೆಗೆ ಮನೆ ಮಾಡಿಕೊಂಡಿದ್ದರೆ
೮. ಮಿಡತೆಗಳು ಮಳೆಹುಳಗಳು ಎದ್ದು ಆಡಿದರೆ
೯. ಮುಸ್ಸಂಜೆಯಲ್ಲಿ ಗೂಬೆ ಕೂಗಿದರೆ
೧೦. ಗಾಳಿಯ ವಿರುದ್ಧ ದಿಕ್ಕಿನಲ್ಲಿ ಮೋಡಗಳು ಚಲಿಸಿದರೆ

ಹೀಗೆ ಅನುಭವದ ಪಟ್ಟಿ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗುತ್ತ ಹೋಗಬಹುದು. ಆದರೆ ಇವು ಅನುಭವಗಳು ಹೌದು, ನಂಬಿಕೆಗಳು ಹೌದು. ಮಳೆಯ ಬಗ್ಗೆ ಅಲೆಮಾರಿ ಕುರುಬರಲ್ಲಿ ಕೆಲವು ನಂಬಿಕೆ ಉಳಿದುಕೊಂಡಿವೆ.

## ಧಾರ್ಮಿಕ ವಿಧಿ ವಿಧಾನಗಳು

ಪ್ರತಿಯೊಂದು ಸಮುದಾಯದಲ್ಲಿ ತಮ್ಮದೇ ಆದ ರೂಢಿ, ಸಂಪ್ರದಾಯ, ಸಂಸ್ಕೃತಿ, ಆಚಾರ, ವಿಚಾರ, ವೇಷಭೂಷಣ, ಊರದೇವತೆ, ನಾಡದೇವತೆ, ಆರಾಧ್ಯದೇವರು, ಕುಲ ದೇವರುಗಳೆಂದು ಹಲವಾರು ರೀತಿಯಲ್ಲಿ ತಮ್ಮ ತಮ್ಮ ಸಂಪ್ರದಾಯಕ್ಕನುಗುಣವಾಗಿ ಹಬ್ಬ, ಪೂಜೆ, ಪುರಸ್ಕಾರ, ಸಂಭ್ರಮವನ್ನು ನಡೆಸಿಕೊಂಡು ಉಳಿಸಿಕೊಂಡು ಬಂದಿರುವುದನ್ನು ಕಾಣುತ್ತೇವೆ. ಅದೇ ರೀತಿಯಾಗಿ ಅಲೆಮಾರಿ ಕುರುಬರು ದೈವಾಚರಣೆ ಮತ್ತು ರೂಢಿ, ಸಂಪ್ರದಾಯ, ಪೂಜೆ, ಪುರಸ್ಕಾರಗಳನ್ನು ಮುಂದುವರಿಸಿಕೊಂಡಿರುವುದರಲ್ಲಿ ಭಿನ್ನವಾಗಿಲ್ಲ. ಪ್ರಸ್ತುತ ಅಧ್ಯಯನದಲ್ಲಿ ಅಲೆಮಾರಿ ಕುರುಬರು ಆಚರಿಸುವ ಎಲ್ಲಾ ದೇವರುಗಳ ಮತ್ತು ಅವುಗಳ ಆಚರಣೆಯ ರೀತಿ-ನೀತಿಗಳನ್ನು ಸಂಪೂರ್ಣವಾಗಿ ವಿಶ್ಲೇಷಿಸದೆ, ಕೆಲವು ಪ್ರಮುಖ ಆರಾಧ್ಯ ದೈವಗಳನ್ನು ಕುರಿತು ಸಂಕ್ಷಿಪ್ತವಾಗಿ ವಿಶ್ಲೇಷಿಸಲಾಗುವುದು. ಒಂದೊಂದು ಆರಾಧ್ಯ ದೈವಗಳಿಗೂ ಒಂದೊಂದು ಪುರಾಣವಿರುವುದರಿಂದ ಅವರ ಸಂಪೂರ್ಣ ಮಾಹಿತಿ ನನ್ನ ಅಧ್ಯಯನದ ಉದ್ದೇಶಕ್ಕೆ ಅನಾವಶ್ಯಕವೆನಿಸುತ್ತದೆ. ಅವರ ಆರಾಧ್ಯ ದೈವಗಳ ಆಚರಣೆಯಲ್ಲಿ ಆರ್ಥಿಕ ಅಂಶಗಳು ಒಳಗೊಂಡಿರುವುದರಿಂದ ಬೀರೇಶ್ವರ, ಮಾಳಿಂಗರಾಯ, ಚಿಂಚಲಿ ಮಾಯಮ್ಮ, ಕರಿಸಿದ್ಧ ಮತ್ತು ಅಮೋಘಸಿದ್ಧರವರನ್ನು ಕುರಿತು ಸಂಕ್ಷಿಪ್ತವಾಗಿ ಹೇಳಲಾಗಿದೆ.

### ಬೀರೇಶ್ವರ

ಪ್ರತಿಯೊಂದು ಮತ ಧರ್ಮದವರು ತಮ್ಮದೇ ಆದ ದೇವರನ್ನು ಸೃಷ್ಟಿಸಿಕೊಂಡು ಕುಲ ದೇವರೆಂದು ಆರಾಧಿಸುತ್ತಾ ಬಂದ ಸಂಗತಿ ಪ್ರಾಚೀನವಾದದು. ಆ ದೇವರುಗಳು ಮಾನವರು ಸಾಧಿಸಲಾರದ್ದನ್ನು ಸಾಧಿಸಿ, ತೋರಿಸಿ ಪವಾಡ ಪುರುಷರಾಗಿ ಕೊನೆಗೆ ದೇವರಾಗಿ ಪೂಜಾರ್ಹರಾಗಿದ್ದಾರೆ.

ನಮ್ಮ ರಾಷ್ಟ್ರದಲ್ಲಿ ಮನೆದೇವರು, ಕುಲದೇವರು, ಗ್ರಾಮದೇವರು, ನಾಡದೇವರು ಎಂದು ಇತ್ಯಾದಿಯಾಗಿ ವರ್ಗೀಕರಿಸಿ ಅವರನ್ನು ಪೂಜಿಸುತ್ತಾ ಬಂದಿರುವುದನ್ನು ಕಾಣುತ್ತೇವೆ. ಈ ರೀತಿಯಾಗಿ ಪ್ರತಿಯೊಂದು ಗುಂಪು, ಜನಾಂಗಕ್ಕೂ ಒಬ್ಬೊಬ್ಬ ಆರಾಧ್ಯ ದೇವರಿರುವುದನ್ನು ನೋಡುತ್ತೇವೆ. ಆ ಸಮುದಾಯ ಅಥವಾ ಜನಾಂಗಕ್ಕೆ ದೇವರಾದವರು, ಅವರನ್ನು ರಕ್ಷಿಸಿ, ಕಾಪಾಡಿದ ಸಂಕೇತವಾಗಿ, ಮುಂದಿನ ಸಂತತಿ ಅವರ ಅದ್ಭುತ ಲೀಲೆಗಳನ್ನು ಕೊಂಡಾಡಿ, ಪುರಾಣ ವ್ಯಕ್ತಿಗಳನ್ನಾಗಿಸಿ, ಅವರಿಗೆ ಸಂಬಂಧಪಟ್ಟ ಪುರಾಣವನ್ನು ರಚಿಸಿಕೊಂಡು, ಅವರ ಮಹಿಮೆಯನ್ನು ಕೊಂಡಾಡಿಕೊಳ್ಳುತ್ತ, ತಮ್ಮ ಸಮುದಾಯದ ಮಹತ್ವವನ್ನು ಹೇಳಿಕೊಳ್ಳುತ್ತಾ ಬಂದಿರುವುದು ಸರ್ವೇಸಮಾನ್ಯವಾದ ಸಂಗತಿಯಾಗಿದೆ.

ಈ ನಿಟ್ಟಿನಲ್ಲಿ ಯೋಚಿಸುವುದಾದರೆ ಕರ್ನಾಟಕದ ಹಾಗೂ ನಾಡಿನ ಇತರ ಭಾಗದ ಕುರುಬರು ಅದರಲ್ಲೂ ವಿಶೇಷವಾಗಿ ಬೆಳಗಾಂ ಜಿಲ್ಲೆಯ ಅಲೆಮಾರಿ ಕುರುಬರ ಆರಾಧ್ಯ ದೇವರೆಂದರೆ ಬೀರದೇವರು. ಈ ದೇವರ ಗುಡಿ ಅಲೆಮಾರಿ ಕುರುಬ ಕುಟುಂಬಗಳ ಸಂಖ್ಯೆ ಹೆಚ್ಚಿರುವ ಬೆಳಗಾಂ ಜಿಲ್ಲೆಯ ಬಹಳಷ್ಟು ಗ್ರಾಮಗಳಲ್ಲಿ ಬೀರದೇವರ ದೇವಸ್ಥಾನಗಳಿರುವುದು

ಸರ್ವೆಸಾಮಾನ್ಯ. ಈ ದೈವ ಅಲೆಮಾರಿ ಕುರುಬರ ಆರಾಧ್ಯ ಮತ್ತು ಗ್ರಾಮದೇವರೆಂದು ಪರಿಗಣಿಸಲ್ಪಟ್ಟಿದೆ. ಕೆಲವು ಗ್ರಾಮಗಳಲ್ಲಿ ಊರ ಒಳಗೆ ಮತ್ತು ಊರ ಹೊರಗೆ ಎರಡು ದೇವಾಲಯಗಳಿರುವುದು ಕಂಡು ಬರುತ್ತದೆ. ಉದಾಹರಣೆಗೆ ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲೂಕಿನ 'ಸೌಂದಲಗ' ಹಾಗೂ 'ಯಕ್ಸಂಬ' ಗ್ರಾಮಗಳು ಈ ದೇವರು ಆ ಸಮುದಾಯದ ಮೇಲೆ ಅತಿಯಾದ ಪ್ರಭಾವ ಬೀರಿರುವುದು ಅವನ ಜೀವನ ಚರಿತ್ರೆ ಹಾಗೂ ಡೊಳ್ಳಿನ ಹಾಡುಗಳಿಂದ ದೊರೆಯುತ್ತದೆ. ಹಾಲುಮತ ಪುರಾಣ ಹಾಗೂ ಡೊಳ್ಳಿನ ಹಾಡುಗಳ ಪ್ರಕಾರ ಕುರುಬರ ಮೂಲ ಪುರುಷ ಪದ್ಮಗೊಂಡ. ಕುರಿಗಳ ರಕ್ಷಣೆಗೆ ಶಿವನು ಬೀರ ದೇವರನ್ನು ಅವನ ಜೊತೆ ಕಳುಹಿಸಿದ್ದಾನೆ. ಬೀರದೇವರು ಹಾಲುಕರೆದು ಹೈನು ಮಾಡುವುದನ್ನು ಕಲಿಸಿರುವುದಲ್ಲದೆ, ತಮಗೆ ತೊಂದರೆ ಕೊಡುತ್ತಿದ್ದ ಕೋಣ ಸೂರನನ್ನು ಕೊಂದು ತನ್ನ ಶಕ್ತಿಪ್ರದರ್ಶಿಸಿ ದೈವೀಪುರುಷನಾಗಿದ್ದಾನೆ ಎಂಬ ಗಾಢ ನಂಬಿಕೆಯಿಂದ ಈ ಸಮುದಾಯ ದವರು ಹಬ್ಬ, ಜಾತ್ರೆ-ಉತ್ಸವಗಳಲ್ಲಿ ಆತನ ಪವಾಡವನ್ನು ಕೊಂಡಾಡುತ್ತಾರೆ. ಇಲ್ಲಿ ಪ್ರಮುಖವಾಗಿ ಗಮನಿಸಬೇಕಾದ ಅಂಶವೆಂದರೆ ಅಲೆಮಾರಿ ಕುರುಬರು ಕುರಿಗಳಿಗೆ ಮೇವು-ನೀರು ಹುಡುಕಿಕೊಂಡು ಹೊಲ-ಗದ್ದೆ, ಕಾಡು-ಮೇಡುಗಳಲ್ಲಿ ಅಲೆದಾಡುವ ಸ್ಥಳಗಳಲ್ಲಿಯೇ ಬೀರದೇವರ ಮೂರ್ತಿ ಇಟ್ಟು ಪ್ರತಿದಿನ ಮುಂಜಾನೆ ನಮಸ್ಕಾರ ಮಾಡಿ ಹಣೆಯ ತುಂಬಾ ಭಂಡಾರ ಹಚ್ಚಿಕೊಳ್ಳುವುದನ್ನು ಕಾಣುತ್ತೇವೆ. ಅಮವಾಸ್ಯೆ, ಹುಣ್ಣಿಮೆ, ಅದಿತ್ಯವಾರ ಹಾಗೂ ಹಬ್ಬದ ದಿನಗಳಲ್ಲಿ ಎಡೆ ಮಾಡಿ ಪೂಜೆ ಸಲ್ಲಿಸುವುದನ್ನು ನೋಡಿದಾಗ ಆ ದೇವರ ಮೇಲೆ ಇವರಿಗಿರುವ ನಂಬಿಕೆ ಮತ್ತು ಅವರ ಮೇಲೆ ಬೀರದೇವರು ಬೀರಿರುವ ಪ್ರಭಾವ ಎಷ್ಟರ ಮಟ್ಟಿಗೆ ಇದೆ ಎಂಬುದು ಸ್ಪಷ್ಟವಾಗುತ್ತದೆ.

ಬೀರದೇವರು ತಮ್ಮ ಇಷ್ಟಾರ್ಥಗಳನ್ನು ಪೂರೈಸುತ್ತಾನೆಂಬ ನಂಬಿಕೆಯಿಂದ ಅವನ ಸಮೀಪ ಇರುವ ಹೆಣ್ಣು ದೇವತೆಗೆ ಕುರಿಬಲಿ ಕೊಡುತ್ತಾರೆ. ಮಾಂಸದ ಅಡಿಗೆಯನ್ನು ಬೀರದೇವರ ಪೂಜೆಗೆ ಸಲ್ಲಿಸುವುದಿಲ್ಲ. ಈ ದೇವರನ್ನು ಗುಡಿಯಲ್ಲಿ ಪೂಜೆಗೈಯುವಾಗ ಪೂಜಾರಿ ಹಣೆಯ ಮೇಲೆ ಭಂಡಾರ ಹಚ್ಚಿಕೊಂಡು ಕೈಯಲ್ಲಿ ಭಂಡಾರದ ಚೀಲ ಹಾಕಿಕೊಂಡು ತಲೆಯ ಮೆಲೆ ಎರಡೂವರೆ (೨ ½) ಪಡಿನ ಕಂಬಳಿ ಹಾಕಿಕೊಂಡು ದಿನಕ್ಕೆ ಎರಡು ಸಲ ಅಂದರೆ ಮುಂಜಾನೆ ಮತ್ತು ಸಾಯಂಕಾಲ ಪೂಜೆ ಮಾಡಬೇಕು. ಪೂಜೆ ಮಾಡುವುದು ಪೂಜಾರಿಗಳಿಗೆ ವಂಶಪರಂಪರೆಯಿಂದ ಬಂದಿದ್ದಾಗಿದೆ. ಇವರು ಕೈಯಲ್ಲಿ ನಾಗಬೆತ್ತ ಕೊಂಕಳದಲ್ಲಿ ಭಂಡಾರ ಚೀಲ, ಹೆಗಲ ಮೇಲೆ ಕರಿಯ ಕಂಬಳಿ ಹಾಕಿಕೊಂಡು ಅಲೆಮಾರಿ ಕುರುಬರು ಅಲೆದಾಡುವ ಪ್ರದೇಶಗಳಿಗೆ ಬಂದು ಕುರಿಮರಿಯನ್ನು ಕಾಣಿಕೆ ರೂಪದಲ್ಲಿ ಪಡೆದುಕೊಂಡು ಹೋಗುತ್ತಾರೆ. ಭಕ್ತರು ಪೂಜಾರಿಯನ್ನು ಕಂಡಕೂಡಲೆ ಬೀರದೇವರೇ ಬಂದಿದ್ದಾನೆಂದು ಭಾವಿಸಿ ಕಾಲಿಗೆ ಬಿದ್ದು ನಮಸ್ಕಾರ ಮಾಡುತ್ತಾರೆ. ಪ್ರತಿಯಾಗಿ ಪೂಜಾರಿಗಳು ಆಶೀರ್ವಾದ ಸಂಕೇತವಾಗಿ ಭಂಡಾರವನ್ನು ಹಣೆಗೆ ಹಚ್ಚುವದನ್ನು ಕಾಣುತ್ತೇವೆ. ಅಲೆಮಾರಿ ಕುರುಬರು ತಮ್ಮವನೇ ಆದ ದೇವರನ್ನು ಸೃಷ್ಟಿಸಿಕೊಂಡು ಬಂದಂತೆ ಕಾಣುತ್ತದೆ. ಈಗಲೂ

ಇವರು ಹಾಡಿ-ಹೊಗಳಿ, ಹಬ್ಬ, ಜಾತ್ರೆ-ಉತ್ಸವಾದಿಗಳಲ್ಲಿ ನೆಡೆಸಿಕೊಂಡು ಬಂದಿರುವ ಪದ್ಧತಿ, ಆ ಸಮುದಾಯದ ಸಂಸ್ಕೃತಿಯ ಪ್ರತೀಕವಾಗಿದೆ.

ಮಾಳಿಂಗರಾಯ

ಅಲೆಮಾರಿ ಕುರುಬ ಸಮುದಾಯದ ಹಲವಾರು ಕುಟುಂಬಗಳ ಮನೆದೇವರಾದ ಹಾಗೂ ಬಹಳಷ್ಟು ಕುರುಬರಿಂದ ಪೂಜೆಗೊಳ್ಳುವ ದೇವರುಗಳಲ್ಲಿ ಹುಲಿಜಂತಿ ಮಾಳಿಂಗರಾಯ ಕೂಡ ಒಬ್ಬ. ಇವರ ಜೀವಿತ ಕಾಲ ಮತ್ತು ಚರಿತ್ರೆಯ ಬಗ್ಗೆ ನಿರ್ದಿಷ್ಟ ದಾಖಲೆಗಳು ಅಲಭ್ಯವಾಗಿವೆ. ಆದರೆ ಈ ದೇವರ ಬಗ್ಗೆ ಚರಿತ್ರೆ ಕಟ್ಟಿ ಹಾಡಿಕೊಂಡು ಬಂದ ಜನಪದ ಕಥೆ ಹಾಗೂ ಅವನ ಬಗ್ಗೆ ಹಾಡಲ್ಪಡುವ ಡೊಳ್ಳಿನ ಹಾಡುಗಳು ಸಮಗ್ರ ಮಾಹಿತಿ ಒದಗಿಸುತ್ತವೆ. ಈ ದೇವರ ಬಗೆಗೆ ಮಾಹಿತಿ ದೊರೆಯುವ ಡೊಳ್ಳಿನ ಪದ ಹೀಗಿದೆ.

ಅಚ್ಚಭಕುತಿಯ ಮಾಳಿಂಗನು
ನಿಚ್ಚನಿಚ್ಚಲು ಪವಾಡ ಮಾಡುತ
ಬಿಚ್ಚಿ ಕಂಬಳಿ ಬೀಸಿ ಮಳೆಯನು ಕರೆಯುತ್ತಿದ್ದನು!
ಮೆಚ್ಚಿ ದೇವನು ಇವನ ಭಕ್ತಿಗೆ
ಉಚ್ಚ ಮಟ್ಟದ ವರವ ಕೊಟ್ಟನು
ಹೆಚ್ಚು ಹೇಳುವುದೇನು ಬೇಡಿದ ವರಹ ಕೊಟ್ಟಿಹನು!!

(*ನಾಯ್ಕರ, ಬಪ: ೨೦೦೩: ೫೨*)

ಈ ರೀತಿಯಲ್ಲಿ ಕೇಳಿ ಬರುವ ಪ್ರಸ್ತುತ ಅಲೆಮಾರಿ ಕುರುಬರ ಆರಾಧ್ಯ ದೈವಗಳಲ್ಲಿ ಒಬ್ಬನಾದ ಮಾಳಿಂಗರಾಯನಿಗೆ ಮಹಾರಾಷ್ಟ್ರ ರಾಜ್ಯದ ಸೋಲ್ಲಾಪುರ ಜಿಲ್ಲೆಯ ಮಂಗಳ ವಾಡ ತಾಲ್ಲೂಕಿನ ಹುಲಿಜಂತಿ ಗ್ರಾಮದಲ್ಲಿ ದೇವಸ್ಥಾನ ಕಟ್ಟಿಸಲಾಗಿದೆ. ಈತ ಕರ್ನಾಟಕ, ಮಹಾರಾಷ್ಟ್ರ ಹಾಗೂ ಆಂಧ್ರಪ್ರದೇಶದಿಂದ ಭಕ್ತರನ್ನು ಹೊಂದಿದ್ದಾನೆ. ಈತನ ಚರಿತ್ರೆಯನ್ನು ಅನೇಕ ಹಾಡುಗಾರರು ತಮ್ಮದೇ ಆದ ಶೈಲಿಯಲ್ಲಿ ಹಾಡಿಕೊಂಡು ಬಂದಿದ್ದಾರೆ. ಹುಲಿಜಂತಿಯ ಪೂಜ್ಯರಾದ ಅಡಿವೆಪ್ಪ ಮಾಳಪ್ಪ ಸೋಮುತ್ತೆ ಬರೆದ "ಹಾಲುಮತ ಪುರಾಣ" ಮಹತ್ವದ ಸಂಗ್ರಹವಾಗಿದೆ. ಇವರ ಚರಿತ್ರೆಯ ಬಗೆಗೆ ಅನೇಕ ಹಾಡುಗಾರರು ಹೇಳುವ ಪ್ರಕಾರ ಹಾಗೂ ಬರೆಯಲ್ಪಟ್ಟ ಪುರಾಣದಲ್ಲಿ ಮಾಳಿಂಗರಾಯ ತುಕ್ಕಪ್ಪನ ಹಿರಿಯ ಮಗನೆಂದೂ ಇನ್ನೊಂದು ಹಾಡಿನ ಪ್ರಕಾರ ಬೀರದೇವನು ಹನ್ನೆರಡು ವರ್ಷ ತಪ್ಪಸ್ಸು ಮಾಡಿ ಶಿವನನ್ನೊಲಿಸಿಕೊಂಡು ಪಡೆದನೆಂದು ತಿಳಿದುಬರುತ್ತದೆ.

"ಬಾರಾ ವರ್ಷ ಭಯಂಕರ ತಪಮಾಡಿ
ಅಮ್ಯಾಲ ಮಹಾದೇವ ಬಂದಾನ ಓಡಿ
ಏನ್ ಬೇಡತಿ ಬೇಡಪ್ಪ ಬಂದೀನಿ ನಿನ್ನ ಭಕ್ತಿ ನೋಡಿ"

(ಚೆನ್ನಪ್ಪಕಟ್ಟಿ:೧೯೭೭:೨೧)

ಈ ಪ್ರಕಾರ ಬೀರದೇವರು ಬಾರಾಮತಿಯಲ್ಲಿ ಹುಟ್ಟಿದ ಮಾಳಿಂಗರಾಯನನ್ನು

ಸವಿಯಲಾರದ ಶಿಷ್ಯ ಮಗನನ್ನು ದಯಪಾಲಿಸು ಎಂದು ಬೇಡಿ ಪಡೆದನೆಂಬ ನಂಬಿಕೆಯೂ ಇದೆ. ಬೀರೇಶ್ವರ ತನ್ನ ಶಿಷ್ಯನನ್ನು ವಿವಿಧ ಪರೀಕ್ಷೆಗೆ ಒಳಗಾಗುವಂತೆ ಮಾಡಿರುವ ಸನ್ನಿವೇಶಗಳು ನಾಡಿನ ಡೊಳ್ಳು ಹಾಡುಗಳ ತುಂಬಾ ಹರಡಿಕೊಂಡಿವೆ.

**ಸಾಹಸ ಕಾರ್ಯಗಳು**

**ಏಳುನೂರು ಬೇಡರನ್ನು ಕೊಂದದ್ದು** : ಬೇಡರು ದನ-ಕುರಿಗಳನ್ನು ಅಪಹರಿಸಿ ಜನರಿಗೆ ತೊಂದರೆಯನ್ನು ನೀಡುತ್ತಿದ್ದರು. ಇಂತಹ ಪ್ರಸಂಗದಲ್ಲಿ ಸೋಮರಾಜನಿಗೆ ವಚನ ನೀಡಿ, ತನ್ನ ತಮ್ಮ ಚಕ್ಕರಾಯನೊಡಗೂಡಿ ಬೇಡರನ್ನು ಸದೆಬಡಿದು ಅವರ ರುಂಡಗಳನ್ನು ಚೆಂಡಾಡಿ ರಾಶಿ ಹಾಕಿಕೊಂಡು ಚಕ್ರ ಕಟ್ಟೆಯನ್ನು ಕಟ್ಟಿದನು. ಈ ಸ್ಥಳವನ್ನು ಉಮೇದಿಯಲ್ಲಿ ಈಗಲೂ ತೋರಿಸಿ ವಿವರಿಸುತ್ತಾರೆ. ಅನಂತರ ಬೀರದೇವರು ತನ್ನ ಶಿಷ್ಯನಿಗೆ ಮದುವೆ ಮಾಡಿಸಿ ಜಂತಿನಾರಾಯಣಪುರದಲ್ಲಿ ವಾಸ ಮಾಡಿರೆಂದು ಅಜ್ಞಾಪಿಸಿದನು.

**ಹುಲಿಗಿಣ್ಣ ಕಾಸಿಕೊಟ್ಟಿದ್ದು** : ಬೀರೇಶನು ಮಾಳಿಂಗರಾಯನ ಸಾಹಸ, ಶೌರ್ಯವನ್ನು ಜನತೆಗೆ ತೋರಿಸಲು ತನಗೆ ಹುಲಿಗಿಣ್ಣವನ್ನು ಮಾಡಿಕೊಡಲು ಅಜ್ಞಾಪಿಸುವನು. ಅದರಲ್ಲೂ ಕರಿ ಹುಲಿಯ ಗಿಣ್ಣ ಬೇಕೆಂದು ಬಯಸುತ್ತಾನೆ. ಗುರುವಿನ ಆದೇಶದಂತೆ ಮಾಳಿಂಗರಾಯ ಹುಲಿಗಿಣ್ಣದ ಹಾಲನ್ನು ಅರ್ಪಿಸಿ, ಗುರುವಿನ ಆದಾರಭಿಮಾನಗಳಿಗೆ ಪಾತ್ರನಾಗುತ್ತನೆ. ಇದಕ್ಕೆ ಸಂಬಂಧಿಸಿದ ಡೊಳ್ಳಿನ ಹಾಡು ಹೀಗಿದೆ.

"ಹುಲಿಹಾಲ ಹೊತಗೊಂಡ ಗುರುವಿನ ಸೇವಕ ಬಂದಾನಾಗ
ಹೊರಗೆ ಹೋಮ ಮಾಡಿ ಸಿದ್ಧಮಾಳಪ್ಪ ಗಿಣ್ಣ ಕಾಸ್ಯಾನಾಗ
ಮಾಳಪ್ಪ ಗುರುವಿಗೆ ಉಣಿಸಾನ ಆಗ
ಗುರುವಿನ ಉಣಿಸಿ ಸಿದ್ಧಮಾಳಪ್ಪ ಅಲಗ ಹಾದಾನಾಗ"

(*ನಾಯ್ಕರ,ಬ ಪ:೨೦೦೩:೫೩*)

ಮಾಳಿಂಗರಾಯನನ್ನು ಪವಾಡ ಪುರುಷನನ್ನಾಗಿ ಮಾಡಿದ ಸಂಗತಿ ಡೊಳ್ಳಿನ ಹಾಡಿನಿಂದ ಸ್ಪಷ್ಟವಾಗುತ್ತದೆ. ಸಾಮಾನ್ಯವಾಗಿ ಹಸಿವಿನಿಂದ ಬಳಲಿದ ಹುಲಿಗಿಂತಲೂ ಮರಿ ಹಾಕಿದ ಹುಲಿಯು ಹೆಚ್ಚು ಅಘಾತಕಾರಿ. ಇಂಥ ಹುಲಿಯ ಮೊಲೆಯನ್ನು ಕರೆದು ಗುರುವಿಗಾಗಿ ಗಿಣ್ಣದ ಹಾಲು ತಂದ ಮಾಳಿಂಗರಾಯನ ಧೈರ್ಯ ಮತ್ತು ಸಾಹಸ ಒಂದು ಕಡೆಯಾದರೆ, ಇನ್ನೊಂದು ಕಡೆಗೆ ಕ್ರೂರ ಮೃಗಗಳನ್ನು ತನ್ನ ವಶ ಮಾಡಿಕೊಳ್ಳುವಂತಹ ಅಗಾದ ಶಕ್ತಿ ಹೊಂದಿದ್ದಕ್ಕಾಗಿ ಅವನೊಬ್ಬ ಪವಾಡ ಪುರುಷನಾಗಿ ಗ್ರಾಮೀಣ ಜನರ ಆರಾಧ್ಯದೈವನಾಗಿ ರೂಪಾಂತರಗೊಂಡನೆಂದು ಹೇಳಬಹುದು.

ಮಾಳಿಂಗರಾಯನು ಹುಲಿಯ ಮರಿಗಳನ್ನು ತಂದು ಸಲುಹಿದಂತೆ, ಎಡ-ಬಲಕ್ಕೊಂದು ಹುಲಿ ಮರಿಗಳನ್ನು ತಬ್ಬಿಕೊಂಡಿರುವ ಚಿತ್ರ ಈಗಲೂ ಹುಲಿಜಂತಿಯಲ್ಲಿ ಹಾಗೂ ವಿವಿಧ ಬೀರದೇವರ ದೇವಸ್ಥಾನಗಳ ಗೋಡೆಗಳ ಮೇಲೆ ರಾರಾಜಿಸುವುದನ್ನು ಕಾಣಬಹುದು. ಆ ಗ್ರಾಮಕ್ಕೆ ಹುಲಿಜಂತಿ ಎಂದು ಹೆಸರು ಬರಲು ಮಾಳಿಂಗರಾಯ ಹುಲಿಗಳ ಜೊತೆಗೆ

ಇದ್ದುದೇ ಕಾರಣವಾಗಿರಬೇಕು. ಹುಲಿಯ ಗಿಣ್ಣದ ಹಾಲನ್ನು ಹಿಂಡಿ, ಗುರುವಿಗೆ ಅರ್ಪಿಸಿ, ಹುಲಿಯ ಮರಿಗಳನ್ನು ಎತ್ತಿಕೊಂಡು ಬಂದು ಹುಲಿಯ ಜಯಂತಿಯನ್ನು ಆಚರಿಸಿದ್ದಕ್ಕಾಗಿ ಮಾಳಿಂಗರಾಯ ನೆಲೆಸಿದ ಗ್ರಾಮಕ್ಕೆ "ಹುಲಿಯ ಜಯಂತಿಪುರ" ಎಂದು ಹೆಸರು ಬಂದಿರುವುದಾಗಿ 'ಅಡಿವೆಪ್ಪ ಒಡೆಯರು' ತಮ್ಮ ಗ್ರಂಥದಲ್ಲಿ ಉಲ್ಲೇಖಿಸಿದ್ದಾರೆ. ಇದಕ್ಕೆ ಭಾಷಾಶಾಸ್ತ್ರದ ಪುಷ್ಟಿಯು ದೊರೆಯುತ್ತದೆ. ಅದರ ಪ್ರಕಾರ ಹುಲಿಜೊತೆ> ಹುಲಿಜತಿ> ಹುಲಿಜತ್ತಿ> ಹುಲಿಜಂತಿ ಎಂದಾಗಿರಬೇಕು.

**ಮುಂಡಾಸದ ಸಾಹಸ :** ಹುಲಿಜಂತಿಯಲ್ಲಿ ಪ್ರತಿವರ್ಷ ದೀಪಾವಳಿ ಅಮಾವಾಸ್ಯೆಗೆ ಮಾಳಿಂಗ ರಾಯನ ಜಾತ್ರೆ ಜರುಗುತ್ತದೆ. ಆ ಜಾತ್ರೆಯ ವಿಶೇಷವೆಂದರೆ ಅಮಾವಾಸ್ಯೆಯ ಮಧ್ಯರಾತ್ರಿಯಲ್ಲಿ ಮಾಳಿಂಗರಾಯನ ಸಮಾಧಿಯ ಪಕ್ಕದಲ್ಲಿರುವ ಬನ್ನಿಗಿಡ ಹಾಗೂ ಅವನ ಗುಡಿಯ ಪಂಚಕಳಸಗಳಿಗೆ ಶಿವನೆ ಬಂದು ಮುಂಡಾಸು ಸುತ್ತುತ್ತಾನೆ. ಈ ಪವಾಡವು ಕ್ಷಣಾರ್ಧದಲ್ಲಿ ನಡೆದು ಹೋಗುತ್ತದೆ. ಈ ಪವಾಡವನ್ನು ನೋಡಲೆಂದೆ ಸಾವಿರಾರು ಭಕ್ತರು ಅಲ್ಲಿ ಸೇರುತ್ತಾರೆ. ವಿಚಿತ್ರವೆಂದರೆ ಪವಾಡ ಜರಗುವ ರಾತ್ರಿ ಗುಡಿಯ ಆವರಣದಲ್ಲಿ ಯಾರಿಗೂ ಪ್ರವೇಶವಿರುವುದಿಲ್ಲ. "ಪವಾಡವನ್ನು ನೋಡಿದರೆ ನೋಡುವವರ ಕಣ್ಣು ಹೋಗುತ್ತದೆ ಎಂಬ ಭಯ ಭಕ್ತರಲ್ಲಿದೆ. ಕಾರಣ ಬ್ರಿಟೀಷ್ ಅಧಿಕಾರಿಗಳಲ್ಲಿ ಓರ್ವ ಅಧಿಕಾರಿ ಮುಂಡಾಸ ಸುತ್ತುವುದನ್ನು ನೋಡಲು ಹೋಗಿ ಕಣ್ಣು ಕಳೆದು ಕೊಂಡನೆಂದು ಹೇಳಲಾಗುತ್ತದೆ"(ಶಿವಾನಂದ ಗುಬ್ಬಣ್ಣನವರ:೧೯೯೩:೬೮). ಪವಾಡ ಹೇಗೆ ಘಟಿಸುತ್ತದೆ ಎಂಬ ರಹಸ್ಯವನ್ನು ಇಂದಿನ ಆಧುನಿಕ ಯುಗದಲ್ಲಿ ಇಂದಿನವರೆಗೂ ಈ ಗುಡಿಯ ಪೂಜಾರಿಗಳು ಕಾಪಾಡಿಕೊಂಡು ಬಂದಿದ್ದಾರೆ.

ಜಾತ್ರೆಯಲ್ಲಿ ಭಂಡಾರ ಹಾಗೂ ಕುರಿಯ ಉಣ್ಣೆಯನ್ನು ದೇವರ ಗುಡಿ ಹಾಗೂ ಜಾತ್ರೆ ಸಮಯದಲ್ಲಿ ಪಾಲ್ಗೊಳ್ಳುವ ಪಲ್ಲಕ್ಕಿಗಳ ಮೇಲೆ ಹಾರಿಸುವುದರ ಮೂಲಕ ಕುರಿಯ ಉಣ್ಣೆಯನ್ನು ದೇವರಿಗೆ ಸಮರ್ಪಿಸಲಾಗುತ್ತದೆ. ಉಣ್ಣೆ ಮತ್ತು ಭಂಡಾರ ಎಸೆಯುವಿಕೆಯು ನೋಡುಗರನ್ನು ಮಂತ್ರಮುಗ್ಧರನ್ನಾಗಿ ಮಾಡುತ್ತದೆ.

ದೀಪಾವಳಿ ಪಾಡ್ಯದಂದು ಪಲ್ಲಕ್ಕಿ ಉತ್ಸವ ನಡೆಯುತ್ತವೆ. ಈ ಪಲ್ಲಕ್ಕಿ ಉತ್ಸವ ನೋಡಲು ಮಹಾರಾಷ್ಟ್ರ, ಕರ್ನಾಟಕ ಹಾಗೂ ಆಂಧ್ರಪ್ರದೇಶದಿಂದ ಸಾವಿರಾರು ಸಂಖ್ಯೆಯಲ್ಲಿ ಭಕ್ತರು ಬಂದಿರುತ್ತಾರೆ. ಡೊಳ್ಳಿನ ಪೆಟ್ಟು ಹಾಗೂ ಡೊಳ್ಳಿನ ಹಾಡು ಹೇಳುವುದು ಹಾಗೂ ಅಲಗ ಹಾಯುವುದು ಜಾತ್ರೆಯ ವಿಶೇಷವಾಗಿದೆ. ಜಾತ್ರೆಯ ದಿನದ ರಾತ್ರಿ ಮಾಳಿಂಗರಾಯನ ಕುರಿತು ನಾಟಕ ಪ್ರದರ್ಶಿಸಲಾಗುತ್ತದೆ. ಐದನೇ ದಿನದಂದು ಮುಂಡಾಸ ಇಳಿಸಿ ಪೂಜೆ ಮಾಡಿ ನದಿಯಲ್ಲಿ ಬಿಡುವರು. ನೀರಿನಲ್ಲಿ ಬಿಟ್ಟ ಕ್ಷಣ ಮಾತ್ರದಲ್ಲಿ ಮುಂಡಾಸ ಕಣ್ಣಿಗೆ ಕಾಣದಂತೆ ಮರೆಯಾಗುವು ದೆಂದು ಹೇಳಲಾಗುತ್ತದೆ.

**ಚಿಂಚಲಿ ಮಾಯಮ್ಮ**

ಬೆಳಗಾವಿ ಜಿಲ್ಲೆಯ ತಾಲೂಕು ಸ್ಥಳವಾದ ರಾಯಭಾಗದ ಉತ್ತರಕ್ಕೆ ಹತ್ತು ಕಿ.ಮೀ.ಗಳ ಅಂತರದಲ್ಲಿರುವ ಚಿಂಚಲಿ ಗ್ರಾಮದ ಮಾಯವ್ವ, ಅಲೆಮಾರಿ ಕುರುಬರ ಆದಿದೇವತೆ

ಹಾಗೂ ಗ್ರಾಮದೇವತೆಯಾಗಿದ್ದು ದೇವಿಯ ಮಹಿಮೆಯ ಫಲವಾಗಿ 'ಮಾಯಕ್ಕನ ಚಿಂಚಲಿ' ಎಂದೇ ಗುರುತಿಸಲ್ಪಡುತ್ತದೆ. ಮಾಯಕ್ಕ ದೇವಿಯ ದರ್ಶನಕ್ಕೆ ಕರ್ನಾಟಕದ ವಿವಿಧ ಜಿಲ್ಲೆಗಳ ಭಕ್ತರಲ್ಲದೆ ನೆರೆ ರಾಜ್ಯವಾದ ಮಹಾರಾಷ್ಟ್ರದಿಂದ ಭಕ್ತರೂ ಬಹಳಷ್ಟು ಆಗಮಿಸುತ್ತಾರೆ. ಈ ದೇವಿಗೆ ಎಲ್ಲಾ ಜಾತಿಯ ಭಕ್ತರಿದ್ದಾರೆ. ಆದರೆ ಅವಳೊಂದಿಗೆ ಹೆಚ್ಚು ನಿಕಟವಾದ ಸಂಬಂಧವನ್ನು ಕುರುಬರು ಹೊಂದಿರುವುದು ಕಂಡುಬರುತ್ತದೆ. ಮಾಯಕ್ಕನ ಬಗೆಗಿನ ಕಥೆಗಳಲ್ಲಿ, ಭಕ್ತರ ಸಂಖ್ಯೆಯ ದೃಷ್ಟಿಯಿಂದ, ಆಕೆಯ ಸೇವಕರ ಸಂಖ್ಯೆಯಿಂದ, ಅಲೆಮಾರಿ ಕುರುಬರು ಹೆಚ್ಚು ಮಾಯಕ್ಕನನ್ನು ಆರಾಧಿಸುವುದು ತಿಳಿದುಬರುತ್ತದೆ.

"ಮಾಯಕ್ಕದೇವಿಯ ಮೂಲ ಸ್ಥಳ, ಸ್ಥಳಾಂತರ ಇತ್ಯಾದಿಗಳ ಕುರಿತು ಪಾರಂಪರಿಕ ಹೇಳಿಕೆಗಳಿವೆ. ಅವಳು ಮಹಾರಾಷ್ಟ್ರದ ಮಾನದೇಶ(ಕೊಂಕಣ)ದಿಂದ ಬಂದವಳು ಎಂದು ಹೇಳುವುದಿದೆ. ಅಲ್ಲಿಯ ನಿಶ್ಚಿತವಾದ ಸ್ಥಳದ ಕುರಿತು ಸ್ಪಷ್ಟವಾಗುವುದಿಲ್ಲ. ಅವಳ ಸ್ಥಳಾಂತರಕ್ಕೆ ಕಾರಣಗಳನ್ನು ಜನ ಕೊಡುತ್ತಾರೆ. ಮಾಯಕ್ಕದೇವಿ ರಾಕ್ಷಸರನ್ನು ಬೆನ್ನಟ್ಟಿಕೊಂಡು ಇಲ್ಲಿಗೆ ಬಂದಳೆಂದೂ, ಇಲ್ಲಿ ರಾಕ್ಷಸರನ್ನು ಸಂಹಾರ ಮಾಡಿ ನೆಲೆ ನಿಂತಳೆಂದೂ ಕಥೆಗಳಿವೆ. ಮಾಯಕ್ಕನನ್ನು ಪಾರ್ವತಿಯ ಅವತಾರವೆಂದು ಹಲವಾರು ದೇವತೆಗಳನ್ನು ಹೋಲಿಸುವಂತೆ ಇಲ್ಲಿಯೂ ಹೋಲಿಸುವುದು ಕಂಡು ಬರುತ್ತದೆ. ಅವಳು ಕೊಂಕಣದ ಕಡೆಯಿಂದ ಬಂದವಳೆಂಬ ಅಭಿಪ್ರಾಯ ಹೆಚ್ಚು ಕಂಡುಬಂದು ಅವಳು ಇಲ್ಲಿಯ 'ವಿಷ್ಣುವಿನ ಅವತಾರ', 'ಅರ್ಧನಾರೀಶ್ವರಿಯ ಅವತಾರ' ಎಂಬ ನಂಬಿಕೆ ಕೇಳಿ ಬರುತ್ತದೆ"(ವಿಷ್ಣು ಎಂ. ಶಿಂದೆ: ೨೦೦೦:೯).

ಮಾಯಕ್ಕನ ಕುರಿತು ಹಲವಾರು ಪುರಾಣ ಕಥೆಗಳು ಪ್ರಚಾರದಲ್ಲಿವೆ. ಅವುಗಳಲ್ಲಿ ಒಂದು ಚಾಮರಾಯನ ಆರು ಸಾಕು ಮಕ್ಕಳಲ್ಲಿ ಒಬ್ಬಳಾದ ಮಾಯವ್ವ ತನ್ನ ಸೋದರಿಯರೊಂದಿಗೆ ಅಡವಿಯಲ್ಲಿ ಕುರಿ ಮೇಯಿಸುತ್ತಿರುವಾಗ ಆಕಸ್ಮಾತ್ ಆಕೆಗೆ 'ಮಗು' ಸಿಗುತ್ತದೆ. ಈ ಮಗುವೇ 'ಬೀರೇಶ್ವರ'. ಈತ ಅಲೆಮಾರಿ ಕುರುಬರ ಸಂಪತ್ತಾದ ಕುರಿಗಳನ್ನು ಸಂರಕ್ಷಿಸುವ ಮೂಲಕ ಹಾಲುಮತದ ಅಧಿದೈವವಾಗಿ ಕುರುಬರಿಂದ ಪೂಜಿಸಲ್ಪಡುತ್ತಿದ್ದಾನೆ. ಶಿವನ ಅಜ್ಞೆಯಂತೆ ಬೀರೇಶ್ವರ ಕೈಲಾಸಕ್ಕೆ ಹೊರಟು ನಿಂತಾಗ ಮಾಯವ್ವನನ್ನು ಕರೆದುಕೊಂಡು ಹೋಗುವುದು ಬೀರೇಶ್ವರನ ಜೀವನದಲ್ಲಿ ಮಾಯವ್ವನ ಮಹತ್ವ ಸೂಚಿಸುತ್ತದೆ.

"ಇನ್ನೊಂದು ಪುರಾಣ ಕಥೆಯ ಪ್ರಕಾರ ಶಿವನ ಸತಿಯಾದ ಪಾರ್ವತಿ ಮಾಯವ್ವನ ಅವತಾರ ಪಡೆದು ಭುವಿ ಜನರಿಗೆ ತೊಂದರೆ ಕೊಡುತ್ತಿದ್ದ ಮಧುಕೈಟಭರನ್ನು ಸಂಹರಿಸಿದ ಮೇಲೆ ಹಾಲುಹಳ್ಳಕ್ಕೆ ಹೋಗಿ ಸ್ನಾನ ಮಾಡುತ್ತಾಳೆ. ಅನಂತರ ಹಳ್ಳದ ಬದಿಯಲ್ಲಿ ಕುರಿಗಳನ್ನು ಮೇಯಿಸುತ್ತಿದ್ದ ಕುರುಬರಿಗೆ ಕುಡಿಯಲು ಸ್ವಲ್ಪ ಹಾಲು ಕೊಡುವಂತೆ ಕೇಳಿದಾಗ ಅವರು ನಿರಾಕರಿಸುತ್ತಾರೆ. ಕುಪಿತ ಗೊಂಡ ಮಾಯಕ್ಕ ನಿಮ್ಮಲ್ಲಿರುವ ಹಾಲು ನೀರಾಗಲಿ ಹಾಗೂ ಕುರಿಗಳು ಕಲ್ಲಾಗಲೆಂದು ಶಾಪವಿತ್ತು ಚಿಂಚಲಿಗೆ ಬಂದು ಕಲ್ಲಾಗಿ ಕುಳಿತಳೆಂದು ಹೇಳಲಾಗಿದೆ" (ಗುಬ್ಬಣ್ಣನವರ,ಶಿವಾನಂದ:೧೯೯೬:೭೧).

ಮಾಯಕ್ಕದೇವಿಯ ಜೊತೆಗೆ ಅಲೆಮಾರಿ ಕುರುಬ ಜನಾಂಗದವರು ಹೆಚ್ಚು ಸಂಬಂಧ ಹೊಂದಿರುವುದು ತಿಳಿದುಬರುತ್ತದೆ. ಆಕೆಯ ಪುರಾಣ ಅಥವಾ ದಂತಕಥೆಗಳಲ್ಲಿ ಕುರಿಗಳ ಪ್ರಸ್ತಾಪ ಬರುತ್ತದೆ. ತಮ್ಮ ಕುರಿಗಳಿಗೆ ರೋಗ ರುಜಿನಗಳು ಬಾರದಿರಲೆಂದು ತಮ್ಮ ಹಿಂಡಿನಲ್ಲಿ ಕೆಲವು ಕುರಿಗಳನ್ನು ಮೀಸಲು ಬಿಟ್ಟಿರುವುದು ಕಂಡುಬರುತ್ತದೆ. ದೇವಿಯ ಪಲ್ಲಕ್ಕಿ, ಕೆಳಗೆ ಹಾಸಲು ಕಂಬಳಿ ಡೊಳ್ಳಿನ ಚರ್ಮ, ಪಲ್ಲಕ್ಕಿಯ ಮೇಲೆ ಎಸೆಯಲು ಕುರಿಯ ಉಣ್ಣೆಯನ್ನು ಬಳಸಲಾಗುತ್ತದೆ. ದೇವಿಗೆ ಮಾಂಸ ಆಹಾರ ನಿಷಿದ್ಧವಾದ್ದರಿಂದ ಕುರಿಯ ಬಲಿ ನಡೆಯುವುದಿಲ್ಲ. ಕುರಿ ಹಾಲನ್ನು ದೇವತೆಗೆ ನೈವೇದ್ಯ ಮಾಡಿ ಅರ್ಪಿಸುವುದುಂಟು. ಹೀಗೆ ಕುರಿಗಳು ಮಾಯಕ್ಕನ ಸಂಪ್ರದಾಯದಲ್ಲಿ ಮಹತ್ವದ ಪಾತ್ರವಹಿಸಿವೆ.

ಕರಿಯ ಕಲ್ಲಿನಲ್ಲಿ ಕೆತ್ತಿದ ಮಾಯವ್ವನ ಮೂರ್ತಿಗೆ ನಾಲ್ಕು ಕೈಗಳಿದ್ದು ಕೈತುಂಬ ಹಸಿರು ಬಳೆಗಳಿವೆ. ಬಲಗೈಯಲ್ಲಿ ಖಡ್ಗ, ಇನ್ನೊಂದು ಕೈಯಲ್ಲಿ ತ್ರಿಶೂಲವು, ಎಡಗೈಯಲ್ಲಿ ಹಾವು ಕಂಡು ಬರುತ್ತದೆ. ತಲೆಯ ಮೇಲೆ ಐದು ತಲೆಯ ಸರ್ಪ ಹೆಡೆ ಎತ್ತಿ ನಿಂತಿದೆ. ಮೈಮೇಲೆ ತುಂಬಿದ ಬಂಗಾರದ ಒಡವೆಗಳು, ಹಣೆಯಲ್ಲಿ ಕುಂಕುಮ ಎದ್ದು ಕಾಣುತ್ತದೆ. ಹೆಚ್ಚಾಗಿ ಹಸಿರು, ಕೆಂಪು ಸೀರೆಗಳಲ್ಲಿ ಪೂಜೆ ಮಾಡುವ ದೇವಿಯು ಭಕ್ತರಿಗೆ ದರ್ಶನ ನೀಡಿ ಮಂತ್ರಮುಗ್ಧಗೊಳಿಸುತ್ತಾಳೆ.

ಮಾಯಕ್ಕನ ಪೂಜೆ ಬಹಳಷ್ಟು ಸರಳ ರೀತಿಯಲ್ಲಿ ಮೂಡಿಬರುತ್ತದೆ. ದಿನದಲ್ಲಿ ಎರಡು ಸಲ ನಡೆಯುವ ಪೂಜೆ ಬೆಳಗಿನ ಜಾವದಲ್ಲಿ ಮತ್ತು ಸಂಜೆಯ ಸಮಯದಲ್ಲಿ ನೆರವೇರುತ್ತದೆ. ದೇವಿಗೆ ಸಸ್ಯಾಹಾರವನ್ನೆ ಪೂಜೆಗೆ ನೈವೇದ್ಯ ಮಾಡಬೇಕು. ಪ್ರಾಣಿಬಲಿ ಕೊಡುವಂತಿಲ್ಲ. ದಿನನಿತ್ಯವೂ ಪೂಜಾಕಾರ್ಯ ನಡೆಯುತ್ತಿದ್ದರೂ ರವಿವಾರ ಹಾಗೂ ಹುಣ್ಣಿಮೆಯ ದಿನದಂದು ದೇವಿ ವಿಶಿಷ್ಟ ಅಲಂಕಾರಗೊಂಡಂತೆ ಕಂಡುಬರುತ್ತಾಳೆ. ಅಂದು ಆಕೆಯ ವಾರವಾದ್ದರಿಂದ ಭಕ್ತರ ಸಂಖ್ಯೆ ಹೆಚ್ಚಿರುತ್ತದೆ. ಅಂದು ಊರಲ್ಲಿಯ ಜನರು ಹಾಗೂ ಅಲೆಮಾರಿ ಕುರುಬರು ಉಪವಾಸವಿರುವ ಸಂಪ್ರದಾಯವಿದೆ. ಕುರುಬ ಮತ್ತು ಲಿಂಗಾಯತ ಜಾತಿಗೆ ಸೇರಿದವರು ೮ ದಿನಗಳ ಸರದಿಯಂತೆ ದೇವಿಯ ಪೂಜೆ ಮಾಡುತ್ತಾರೆ. ಪೂಜೆ ಮಾಡುವ ಸರದಿಯ ದಿನಗಳಲ್ಲಿ ಪೂಜಾರಿಯ ಸಹೋದರರಲ್ಲಿ ಯಾರಾದರೂ ತೀರಿಕೊಂಡರೆ ಅಥವಾ ಮಗು ಜನಿಸಿದರೆ ಮೈಲಿಗೆಯೆಂದು ಪೂಜೆ ಮಾಡುವಂತಿಲ್ಲ. ಆ ಸಮಯದಲ್ಲಿ ಮತ್ತೊಬ್ಬ ಸರದಿಯವರು ಪೂಜೆ ಮಾಡಬೇಕೆಂಬ ನೇಮವಿರುವುದು. ಪೂಜೆಗೈಯುವಾಗ ಪೂಜಾರಿ ತಲೆಯ ಮೇಲೆ ಕಂಬಳಿ ಹಾಕಿಕೊಳ್ಳಲೇಬೇಕು. ಕಂಬಳಿ ಇಲ್ಲದೇ ಯಾವುದೇ ಪೂಜೆ ಕಾರ್ಯ ಮಾಡುವಂತಿಲ್ಲ.

**ಶಕ್ತಿ ಆಚರಣೆ, ಹಬ್ಬಗಳು**

ವಾರ್ಷಿಕ ಆಚರಣೆಗಳು ಸಾಮಾನ್ಯವಾಗಿ ಹಬ್ಬಗಳಾಗಿರುತ್ತವೆ. ಇವು ಸಮುದಾಯದ ಬದುಕಿನಲ್ಲಿ, ಜನರ ಸುಖ ಸಾಧನೆಯಲ್ಲಿ, ಪರಲೋಕದ ಮುಕ್ತಿ ಪ್ರಾಪ್ತಿಗಳಲ್ಲಿ, ಹಬ್ಬಗಳು ಪ್ರಮುಖ ಪಾತ್ರವಹಿಸುತ್ತವೆ. ಈ ಹಬ್ಬಗಳು ಮಾನವ ಜೀವಜಗತ್ತು, ದೇವರುಗಳ ಸಂಬಂಧ,

ಹುಟ್ಟು, ಸಾವು, ಸುಖ-ದುಃಖ ಇತ್ಯಾದಿ ಜೀವನ ಸಂಬಂಧಿ ವಿಚಾರಗಳ ಬಗೆಗೆ ಮಾನವನನ್ನು ಸಮರ್ಪಕ ರೀತಿಯಲ್ಲಿ ಯೋಚಿಸಿ ಮುನ್ನಡೆಸುವುದರ ಜೊತೆಗೆ ಸಂಕುಚಿತ ಭಾವನೆಗಳನ್ನು ದೂರಮಾಡುತ್ತವೆ. ಇವು ಮಾನವನನ್ನು ದಿನನಿತ್ಯದ ಲೌಕಿಕ ಜೀವನದಿಂದ ಪಾರಮಾರ್ಥಿಕ ಜೀವನದತ್ತ ಯೋಚಿಸಲು ಹಾಗೂ ಸಮುದಾಯಗಳ ಇತಿಹಾಸವನ್ನು ಕಟ್ಟಿಕೊಡುವಲ್ಲಿ ಪ್ರಮುಖ ಆಕರಗಳಾಗುತ್ತವೆ. ಸಾಮಾನ್ಯವಾಗಿ ಬಹುತೇಕ ಬುಡಕಟ್ಟು ಹಬ್ಬಗಳು ಫಲೋತ್ಪತ್ತಿ ಸಂಬಂಧಿಯಾಗಿದ್ದು, ಸೂರ್ಯ-ಚಂದ್ರರ ಚಲನೆಯನ್ನು ಅವಲಂಬಿಸಿವೆ. ಹಬ್ಬಗಳ ಆಚರಣೆಯು ಆಧ್ಯಾತ್ಮಿಕ, ಆರೋಗ್ಯ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಹಾಗೂ ಧಾರ್ಮಿಕ ಅಂಶಗಳನ್ನು ಒಳಗೊಂಡಿರುತ್ತವೆ. ಪ್ರಾರ್ಥನೆ ಮನಸ್ಸನ್ನು ಶುದ್ಧಿಗೊಳಿಸಿದರೆ, ವಿಶೇಷ ಆಹಾರ ಸೇವನೆ ದೇಹದ ಆರೋಗ್ಯವನ್ನು ಕಾಪಾಡುತ್ತದೆ. ಹಬ್ಬಗಳ ಆಚರಣೆಯಲ್ಲಿ ಬಂಧು-ಮಿತ್ರರು, ಸಮುದಾಯದವರು ಬೆರೆಯುವುದರಿಂದ ಸಾಮಾಜಿಕ ಸಾಮರಸ್ಯವನ್ನು ಕಾಪಾಡುವುದರ ಜೊತೆಗೆ ತಿಳುವಳಿಕೆಯನ್ನು ಹೆಚ್ಚಿಸುತ್ತವೆ.

ಅಲೆಮಾರಿ ಕುರುಬರು ಸಾಮಾನ್ಯವಾಗಿ ಪ್ರಮುಖವಾದ ಎಲ್ಲ ಹಿಂದು ಹಬ್ಬಗಳನ್ನು ಆಚರಿಸುತ್ತಾರೆ. ಇವರು ಆಚರಿಸುವ ಹಬ್ಬಗಳಿಗೆ ಅವುಗಳದೇ ಆದ ಹಿನ್ನೆಲೆ ಇದೆ. ಈ ಹಿನ್ನೆಲೆಯನ್ನು ಗ್ರಹಿಸಿದರೆ ಯುಗಾದಿ, ನಾಗರಪಂಚಮಿ, ಮಹಾನವಮಿ, ದೀಪಾವಳಿ, ಹಿಸ್ಕಾಳಿ, ಮಲಪುರಿ ಇತ್ಯಾದಿ ಹಬ್ಬಗಳ ಮೂಲಕ ಅಲೆಮಾರಿ ಕುರುಬರ ಧಾರ್ಮಿಕ ಜೀವನದ ತಳಹದಿಯನ್ನು ಅರಿತುಕೊಳ್ಳುವುದು ಸುಲಭವಾಗುತ್ತದೆ ಈ ದೃಷ್ಟಿಯಿಂದ ಇವರ ಹಬ್ಬಗಳು ಮಾನವನ ಬದುಕಿನಲ್ಲಿ ವೈಶಿಷ್ಟ್ಯತೆಯನ್ನು ಪಡೆದುಕೊಂಡಿವೆ.

**ಯುಗಾದಿ**

ಪ್ರತಿವರ್ಷ ಚೈತ್ರಮಾಸದ ಆರಂಭದ ಅಮವಾಸ್ಯೆಯ ಮರುದಿನದಂದು ಬರುವ ಯುಗಾದಿ ಯನ್ನು ಹೊಸವರ್ಷವೆಂದು ಕರೆಯುತ್ತಾರೆ. ಬಹುತೇಕವಾಗಿ ಹಿಂದೂಗಳೆಲ್ಲರೂ ಸಂತೋಷ, ಸಂಭ್ರಮದಿಂದ ಆಚರಿಸುವ ಹಬ್ಬ ಇದಾಗಿದೆ. ವರ್ಷಕ್ಕೊಮ್ಮೆ ಬರುವ ಈ ಹಬ್ಬ ಸುಖ-ದುಃಖ, ಸಿಹಿ-ಕಹಿ, ನೋವು-ನಲಿವುಗಳನ್ನು ಸಮನಾಗಿ ಕಾಣಬೇಕೆನ್ನುವ ದಿವ್ಯ ಸಂದೇಶವನ್ನು ಸಾರುತ್ತದೆ. ನಾಗರಿಕತೆ ಹಾಗೂ ಜಾಗತೀಕರಣದ ಬಿರುಗಾಳಿ ಗ್ರಾಮೀಣ ಪ್ರದೇಶವನ್ನು ಪ್ರವೇಶಿಸಿ ಜನ ಜೀವನದ ಮೇಲೆ ಪ್ರಭಾವ ಬೀರಿದ್ದರೂ ಅಲೆಮಾರಿ ಕುರುಬರು ತಾವು ಹೂಡಿದ ಗುಡಾರದಲ್ಲಿ ಮೊದಲಿ ನಿಂದಲೂ ಆಚರಿಸಿಕೊಂಡು ಬಂದಿರುವ ಯುಗಾದಿ ಹಬ್ಬದಲ್ಲಿ ಯಾವುದೇ ಬದಲಾವಣೆ ಮಾಡಿರುವುದು ಕಂಡುಬರುತ್ತಿಲ್ಲ. ಈ ಹಬ್ಬವನ್ನು ಒಬ್ಬ ಭೂಮಾಲಿಕನ ಜಮೀನಿನಲ್ಲಿ ಕುರಿತಬ್ಬಿದ ಕುಟುಂಬಗಳು ಸಾಮೂಹಿಕವಾಗಿ ಆಚರಿಸುತ್ತಾರೆ. ಈ ಹಬ್ಬ ಬೇಸಿಗೆಕಾಲದಲ್ಲಿ ಬರುವುದರಿಂದ ಕುರಿಗಳನ್ನು ಹೊಲಗದ್ದೆಗಳಲ್ಲಿ ತಬ್ಬಿರುತ್ತಾರೆ. ಆ ಹಬ್ಬಕ್ಕೆ ಬೇಕಾಗುವ ಖರ್ಚು-ವೆಚ್ಚಗಳನ್ನು ಆ ಜಮೀನಿನ ಮಾಲೀಕನಿಂದ ಪಡೆದು, ಕುರಿ ತಬ್ಬಿದ್ದಕ್ಕೆ ಕೊಡುವ ಹಣದಲ್ಲಿ ಮುರಿದುಕೊಳ್ಳುವಂತೆ ಹೇಳುತ್ತಾರೆ. ಒಂದು ವೇಳೆ ಭೂಮಾಲೀಕ ಖುಷಿಗೆ ಕೊಡಿಸಿದರೆ ಸ್ವೀಕರಿಸುತ್ತಾರೆ.

ಅಲೆಮಾರಿ ಕುರುಬರ ಮಹಿಳೆಯರು ಈ ಹಬ್ಬ ಆಚರಣೆಯ ಸಿದ್ಧತೆಯನ್ನು ಅಮವಾಸ್ಯೆ ದಿನದ ರಾತ್ರಿಯಿಂದಲೇ ಆರಂಭಿಸುವರು. ಅಂದು ರಾತ್ರಿ ಸುಮಾರು ೧೨.೦೦ ಗಂಟೆಯ ನಂತರ ತಮ್ಮ ತಮ್ಮ ಗುಡಾರಗಳ ಮುಂದೆ ನೀರಿನಲ್ಲಿ ಕುರಿಹಿಕ್ಕೆಗಳಿಂದ ಕಲಿಸಿದ ನೀರನ್ನು ಹಾಕುವರು ಅಥವಾ ಸಾರಿಸುವರು. ಅಡುಗೆ ಪಾತ್ರೆಗಳನ್ನು ಸ್ವಚ್ಛಗೊಳಿಸಿಕೊಳ್ಳುವರು. ನಂತರ ಸ್ನಾನ ಮಾಡಿ, ಶುಭ್ರವಾದ ಬಟ್ಟೆ ಧರಿಸಿ ೪.೦೦ ಗಂಟೆ ಸುಮಾರಿಗೆ ಅಡುಗೆ ಮಾಡುವ ಗುಡಾರ ಸೇರುತ್ತಾರೆ. ಅಂದಿನ ಅಡುಗೆ ಹೋಳಿಗೆ, ಬದನೆಕಾಯಿ, ಅನ್ನ, ಸಾರು, ಸೆಂಡಿಗೆ ಇತ್ಯಾದಿಯಾಗಿರುತ್ತವೆ. ಇವನ್ನು ಹೆಚ್ಚು-ಕಮ್ಮಿ ಬೆಳಗಿನ ಜಾವದೊಳಗೆ ಮಾಡಿ ಮುಗಿಸುತ್ತಾರೆ.

ದಿನದ ವಿಶೇಷವೆಂದರೆ ಒಂದು ವರ್ಷದೊಳಗಿನ ಕುರಿ ಮೇಕೆ ಮರಿಗಳಿಗೆ ಲಾಕು(ಗುರುತು) ಹಾಕಲಾಗುತ್ತದೆ (ಈಗಾಗಲೇ ಕುರಿಗಳ ಗುರುತಿಸುವಿಕೆಯಲ್ಲಿ ವಿಶ್ಲೇಷಿಸಲಾಗಿದೆ). ಆದ್ದರಿಂದ ಪುರುಷರು ಬೇಗನೆ ಎದ್ದು ಮರಿಗಳಿಗೆ ಹಾಲುಣಿಸಿ, ಸ್ನಾನ ಮಾಡಿ, ಹೊಸ ಬಟ್ಟೆ ಧರಿಸಿ, ಲಾಕು ಹಾಕುವ ಕಾರ್ಯದಲ್ಲಿ ತೊಡಗುತ್ತಾರೆ. ಲಾಕು ವಂಶಪರಂಪರೆಯಾಗಿ ಮುಂದುವರಿಸಿಕೊಂಡು ಬಂದ ಗುರುತನ್ನೆ ಹಾಕುವರು. ಲಾಕು ಹಾಕುವ ಉದ್ದೇಶ ತಮ್ಮ ಕುರಿ-ಮೇಕೆಗಳನ್ನು ಎಲ್ಲಿದ್ದರೂ ಸುಲಭವಾಗಿ ಗುರುತಿಸಲು ಅನುಕೂಲವಾಗುವ ದೃಷ್ಟಿಯಿಂದ ಈ ಪದ್ಧತಿಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ.

ಲಾಕು ಹಾಕುವಾಗ ಗಂಡು ಮರಿಗಳಿಗೆ ಬಾಲದ ತುದಿಯನ್ನು ಮಾತ್ರ ಕತ್ತರಿಸಿದರೆ ಹೆಣ್ಣು ಮರಿಗಳಿಗೆ ಬಾಲದ ತುದಿ ಹಾಗೂ ಕಿವಿ, ಹಣೆ ಅಥವಾ ಬೆನ್ನಿನ ಮೇಲೆ ತಮ್ಮ ಗುರುತು ಹಾಕುವ ಮೂಲಕ ಮೇಲಿನ ಚರ್ಮ ತೆಗೆಯುತ್ತಾರೆ. ಹೀಗೆ ಲಾಕು ಹಾಕಿದ ನಂತರ ಬಾಲದ ತುದಿ ಹಾಗೂ ಕಿವಿಯ ಚರ್ಮದ ತುಂಡುಗಳನ್ನು ವಿಭಾಗಿಸಿ ಎಣಿಸುವರು. ಇದರಿಂದ ಹೆಣ್ಣು ಮರಿಗಳು ಹಾಗೂ ಗಂಡು ಮರಿಗಳು ಎಷ್ಟಿವೆ ಎಂಬುದು ತಿಳಿಯುತ್ತದೆ. ಹೆಣ್ಣು ಮರಿಗಳು ಮುಂದಿನ ಅಭಿವೃದ್ಧಿಯನ್ನು ಸೂಚಿಸಿದರೆ, ಗಂಡು ಮರಿಗಳು ಕುಟುಂಬದ ವಾರ್ಷಿಕ ಖರ್ಚು-ವೆಚ್ಚಗಳನ್ನು ಹೇಗೆ ಸರಿದೂಗಿಸಬೇಕೆಂಬುದನ್ನು ಸ್ಪಷ್ಟಪಡಿಸುತ್ತವೆ. ಹಿಂದಿನ ವರ್ಷ ಎಷ್ಟು ಗಂಡು ಮತ್ತು ಹೆಣ್ಣು ಮರಿಗಳಿದ್ದವು? ಈ ವರ್ಷ ಎಷ್ಟಿವೆ? ಎಂಬುದನ್ನು ಹೋಲಿಕೆ ಮಾಡಿ ನೋಡುತ್ತಾರೆ. ಇವರ ದೃಷ್ಟಿಯಲ್ಲಿ ಈ ಹಬ್ಬ ಹೀಗೆ ಸಮೃದ್ಧಿಯ ಸಂಕೇತವೆನಿಸುತ್ತದೆ. ಏಕೆಂದರೆ ಇಡೀ ವರ್ಷ (ಯುಗಾದಿಯಿಂದ ಯುಗಾದಿಯವರೆಗೆ) ತಮ್ಮ ಬದುಕುಗಳನ್ನು ಸಾಕಿ-ಸಲುಹಿ, ಸಂಗೋಪನೆ ಮಾಡಿ ದುಡಿಮೆಯ ಪ್ರತಿಫಲವಾಗಿ ಲೆಕ್ಕ ಹಾಕುವರು. ಮರಿಗಳ ಸಂಖ್ಯೆಯಲ್ಲಿ ಹೆಚ್ಚಳವಾದರೆ ಅಭಿವೃದ್ಧಿ ಎಂದು ತೀರ್ಮಾನಿಸುವರು, ಕಡಿಮೆಯಾದರೆ ಅನಭಿವೃದ್ಧಿ ಎಂದು ತಿಳಿದುಕೊಳ್ಳುವರು. ಅಭಿವೃದ್ಧಿ ಅಥವಾ ಅನಭಿವೃದ್ಧಿ ನಿರ್ಧಾರವಾಗುವುದು ಇವರ ಶ್ರಮದ ಜೊತೆಗೆ ತಾವು ಅಲೆದಾಡುವ ಪ್ರದೇಶದಲ್ಲಿ ಕುರಿ-ಮೇಕೆಗಳಿಗೆ ದೊರೆಯುವ ಮೇವು-ನೀರು ಹಾಗೂ ಅವುಗಳಿಗೆ ಬರುವ ರೋಗ-ರುಜಿನಗಳನ್ನು ಅವಲಂಬಿಸಿರುತ್ತದೆ.

ಮರಿಗಳ ಬಾಲದ ತುದಿ ಹಾಗೂ ಕಿವಿಯ ಚರ್ಮದ ತುಂಡುಗಳನ್ನು ಲೆಕ್ಕ ಹಾಕಿದ ನಂತರ ಅವುಗಳನ್ನು ಒಂದು ಕೈಚೀಲದೊಳಗೆ ಹಾಕಿ ಭಂಡಾರದಿಂದ ಕಲಿಸಿ ಮಿಶ್ರಮಾಡುತ್ತಾರೆ. ಹೀಗೆ ಮಾಡಿದ ನಂತರ ಕರಿಯ ಕಂಬಳಿ ಹಾಸಿ ಗದ್ದುಗೆ ತಯಾರು ಮಾಡುತ್ತಾರೆ. ಗದ್ದುಗೆ ಮೇಲೆ ಮನೆದೇವರು ಹಾಗೂ ಆರಾಧ್ಯದೇವರುಗಳ ಫೋಟು ಇಡುವರು. ಫೋಟೋ ಮುಂದೆ ಭಂಡಾರದ ಚೀಲ, ಲಾಕಿನ (ಚರ್ಮದ) ತುಂಡುಗಳು, ಕತ್ತರಿ ಇಡುವರು. ಅಂದು ಮಾಡಿದ ಸಿಹಿ ಅಡುಗೆ, ತುಪ್ಪ ಕರಿಕುರಿಯ ಹಸಿ ಹಾಲನ್ನು ನೈವೇದ್ಯ ಮಾಡಿ ಕಾಯಿ ಒಡೆಯುವುದರ ಮೂಲಕ ಪೂಜೆ ಮಾಡುವರು.

ಬಿಡಾರ ಹೂಡಿದ ಕುರಿಮಂದೆಯಲ್ಲಿ ಪೂಜೆ ಮಾಡಿದ ನಂತರ ಚೀಲದಲ್ಲಿರುವ ಬಾಲದ ತುದಿಗಳು, ಕಿವಿಯ ತುಂಡುಗಳು, ಭಂಡಾರ, ತುಪ್ಪ, ಹೋಳಿಗೆ, ಹಾಲು ತೆಗೆದುಕೊಂಡು ತಮಗೆ ಸಮೀಪವಿರುವ ನಾಗರ ಹುತ್ತಿಗೆ ಹೋಗಿ ನೈವೇದ್ಯ ಮಾಡಿ ಕಾಯಿ ಒಡೆಯುತ್ತಾರೆ. ನಂತರ ಲಾಕು ಹಾಕಿ ಕತ್ತರಿಸಿದ ಬಾಲದ ಹಾಗೂ ಕಿವಿಯ ಚರ್ಮದ ತುಂಡುಗಳನ್ನು ಹುತ್ತಿನೊಳಗೆ ಹಾಕುವರು. ಒಂದು ವೇಳೆ ಹುತ್ತು ಕುರಿಮಂದೆ ತಬ್ಬಿದ ಸ್ಥಳದ ಸಮೀಪ ವಿರದಿದ್ದರೆ, ಬನ್ನಿಗಿಡಕ್ಕೆ ಹೋಗಿ ಗಿಡದ ಪೂರ್ವ ದಿಕ್ಕಿಗೆ ಪೂಜೆ ಮಾಡಿ, ಗಿಡದ ಬುಡವನ್ನು ಅಗೆದು ಲಾಕು ಹಾಕಿದ ತುಂಡುಗಳನ್ನು ಅದರಲ್ಲಿ ಹಾಕಿ ಮಣ್ಣು ಮುಚ್ಚುವರು. ನಂತರ ಬಿಡಾರಕ್ಕೆ ಬಂದು ಊಟವನ್ನು ಮಾಡುವರು. ಈ ಮೇಲೆ ತಿಳಿಸಿದ ಎಲ್ಲಾ ಕಾರ್ಯಗಳನ್ನು ಮುಂಜಾನೆ ಹತ್ತು ಗಂಟೆಯೊಳಗೆ ಮುಗಿಸಿ ಕುರಿಮೇಯಿಸಲು ಅಡವಿಗೆ ಹೋಗುವರು.

ಹಿರಿಯರ ಹಬ್ಬ : ಯುಗಾದಿ ಹಬ್ಬದ ದಿನ ಮುಸ್ಸಂಜೆಯ ವೇಳೆಗೆ ಹಿರಿಯರ ಹಬ್ಬ ಆಚರಣೆ ಮಾಡುತ್ತಾರೆ. ಆ ದಿನದಂದು ಸಾಯಂಕಾಲ ಸುಮಾರಿಗೆ ಟಗರು ಮರಿಯನ್ನು ಕೊಯ್ದು, ಮಾಂಸದ ಅಡಿಗೆಯನ್ನು ಮಾಡುತ್ತಾರೆ. ತೀರಿಕೊಂಡ ಹಿರಿಯರು ಯಾವ ಬಟ್ಟೆಗಳನ್ನು ಧರಿಸುತ್ತಿದ್ದರೋ ಅಂತಹ ಹೊಸ ಬಟ್ಟೆ ಅಂದರೆ ಸೀರೆ, ಕುಪ್ಪಸ, ಧೋತರ, ಟೋಪಿ, ಮುಂಡಾ, ಪಟಗಗಳನ್ನು ತರುವರು. ಕುರಿಗಳು ಗುಡಾರಕ್ಕೆ ಬಂದ ನಂತರ ಕಂಬಳಿ ಹಾಸಿ ಗದ್ದಿಗೆ ಹಾಕುವರು. ಅದರ ಮೇಲೆ ನೀರು ತುಂಬಿದ ತಂಬಿಗೆ, ತಂಬಿಗೆಯ ಮೇಲೆ ತೆಂಗಿನ ಕಾಯಿ ಇಡುವರು. ತಂದ ಹೊಸ ಬಟ್ಟೆಗಳನ್ನು ಕಂಬಳಿಯ ಮೇಲಿಟ್ಟು ಅವುಗಳಿಗೆ ಭಂಡಾರ, ಕುಂಕುಮ ಹಚ್ಚಿ ಪೂಜೆ ಮಾಡುವರು. ಹಿರಿಯರ ನೈವೇದ್ಯಕ್ಕೆ ಮಾಂಸ ಹಾಗೂ ಹೋಳಿಗೆ ಇಟ್ಟು ಕಾಯಿ ಹೊಡೆಯುವರು. ಸಿಹಿ ಮತ್ತು ಮಾಂಸ ಎರಡನ್ನು ನೈವೇದ್ಯಕ್ಕೆ ಏಕೆ ಇಡುತ್ತೀರೆಂದು ಪ್ರಶ್ನಿಸಿದಾಗ ಅವರು ಈ ರೀತಿಯ ಉತ್ತರ ನೀಡಿದರು. "ಮಾಂಸ ಅಜ್ಜಿಯ ನೈವೇದ್ಯಕ್ಕಾದರೆ ಹೋಳಿಗೆ ತಾತನ ನೈವೇದ್ಯಕ್ಕೆನ್ನುವರು. ಇದರ ಅರ್ಥ ಹೆಣ್ಣು(ಅಜ್ಜಿ) ರಾಕ್ಷಸಿ ಕುಲದವಳು, ಅವಳಿಗೆ ಕುರಿಮರಿ ಬಲಿ ಕೊಟ್ಟು ಮಾಂಸದ ಅಡುಗೆ ಮಾಡಿ ನೈವೇದ್ಯ ಮಾಡುತ್ತೇವೆ. ಗಂಡು(ತಾತ) ದೇವರ ಸಮಾನದವರು ಅವರಿಗೆ ಸಿಹಿ ಅಡುಗೆಯನ್ನು ಮಾಡಿ ನೈವೇದ್ಯ ಮಾಡುತ್ತೇವೆ" (ಮಾಹಿತಿ: ಬೀರಪ್ಪನ ನಸಲಾಪುರೆ: ನವಲಿಹಾಳ್). ನಂತರ ಕುರಿಮಂದೆಯಿಂದ ೯ ಕುರಿಗಳನ್ನು ಆರಿಸಿ ಅವುಗಳನ್ನು ಸ್ವಲ್ಪ ದೂರ

ನಿಲ್ಲಿಸಿ ಅವುಗಳಿಗೆ ಪೂಜೆ ಮಾಡುವರು. ಕುರಿಗಳಿಗೆ ನೈವೇದ್ಯ ಮಾಡಿದ ನೀರನ್ನು ಚಿಮುಕಿಸುವರು. ಪೂಜೆಯಾದ ನಂತರ ನಿಲ್ಲಿಸಿದ ಕುರಿಗಳನ್ನು ಕಂಬಳಿಯಿಂದ ಬೆದರಿಸುವ ಮೂಲಕ ಓಡಿಸುವರು. ಇದನ್ನು 'ಕುರಿ ಕರಿ ಬಿಡುವುದು' ಎನ್ನುವರು. ಯಾವ ಕುರಿ ಮೊದಲು ಬಂದು ಸೇರುತ್ತದೆಯೋ ಆ ಬಣ್ಣದ ಹಾಗೂ ಆ ತಳಿಯ ಕುರಿಗಳು ಅಭಿವೃದ್ಧಿ ಹೊಂದುತ್ತವೆಂಬ ನಂಬಿಕೆ ಅಲೆಮಾರಿ ಕುರುಬರಲ್ಲಿ ಕಾಣುತ್ತೇವೆ.

ನಾಗರ ಪಂಚಮಿ

ಈ ಹಬ್ಬದ ಸಮಯದಲ್ಲಿ ಮಳೆಗಾಲ ಜೋರಾಗಿರುವುದರಿಂದ ಅಲೆಮಾರಿ ಕುರುಬರು ಗುಡ್ಡಗಾಡು ಪ್ರದೇಶದಲ್ಲಿ ನಾಗರ ಪಂಚಮಿ ಆಚರಿಸುತ್ತಾರೆ. ಈ ಹಬ್ಬವನ್ನು ಒಂದು ಕಡೆ ಗುಡಾರ ಹೂಡಿದವರೆಲ್ಲಾ ಕೂಡಿ ಮಾಡದೆ, ಪ್ರತಿ ಕುಟುಂಬಗಳು ಪ್ರತ್ಯೇಕವಾಗಿ ಆಚರಿಸುತ್ತವೆ. ಅಂದು ನಾಗರ ಹುತ್ತಿನ ಮಣ್ಣನ್ನು ತೆಗೆದುಕೊಂಡು ಬಂದು ಎರಡು ನಾಗರ ಮೂರ್ತಿಗಳನ್ನು ಮಾಡಿ, ಹತ್ತಿಯಿಂದ ಅಂಗುಲ (ಸರ)ಮಾಡಿ, ಭಂಡಾರ-ಕುಂಕುಮ ಹಚ್ಚಿ ನಾಗಮೂರ್ತಿಗಳ ಕೊರಳಿಗೆ ಹಾಕುವರು. ಹೆಣ್ಣು ಮಕ್ಕಳು ಹತ್ತಿಯಿಂದ ಅಂಗುಲ ಮಾಡಿ ಕೊರಳಿಗೆ ಹಾಕಿ ಕೊಂಡರೆ, ಪುರುಷರು ಮುಂಗೈಗೆ ಕಟ್ಟಿಕೊಳ್ಳುವರು. ಆ ದಿನದ ದೇವರ ನೈವೇದ್ಯಕ್ಕೆ ಅಕ್ಕಿ-ಗೋಧಿ ಹಿಟ್ಟನ್ನು ಮಿಶ್ರಮಾಡಿ ಉಂಡೆ ತಯಾರಿಸುತ್ತಾರೆ. ದೇವರ ನೈವೇದ್ಯಕ್ಕೆ ಹಾಗೂ ತಮಗೆ ಊಟಕ್ಕೆಂದು ಗೋಧಿಯ ಹುಗ್ಗಿಯನ್ನು ಮಾಡುತ್ತಾರೆ. ಇವನ್ನು ದೇವರಿಗೆ ನೈವೇದ್ಯ ಮಾಡಿ ಊಟ ಮಾಡುವರು. ಮೂರನೆಯ ದಿನದಂದು ನಾಗಮೂರ್ತಿಗಳನ್ನು ಹುತ್ತಿನ ಸಮೀಪ ಅಥವಾ ಬನ್ನಿ ಮರದ ಕೆಳಗೆ ಇಟ್ಟು ಬರುವರು. ಪಂಚಮಿ ಹಬ್ಬವಾದ ನಂತರ ವಿವಿಧ ಆಹಾರ ಧಾನ್ಯಗಳಿಂದ ಉಂಡೆಗಳನ್ನು ಮಾಡಿಕೊಂಡು ಶ್ರಾವಣ ಮಾಸ ಮುಗಿಯು ವವರೆಗೆ ತಿನ್ನುವರು.

**ಶಿವನ ಸೋಮವಾರ :** ಇವರು ಶ್ರಾವಣ ಮಾಸದ ಮೂರನೆ ಸೋಮವಾರವನ್ನು ಶಿವನ ವಾರವೆಂದು ಆಚರಿಸುತ್ತಾರೆ. ಈ ವಾರವನ್ನು ಹಲವಾರು ಕುಟುಂಬಗಳು ಮಾತ್ರ ಮಾಡುತ್ತವೆ. ಇದರಿಂದ ಅಲೆಮಾರಿ ಕುರುಬರು ಶೈವ ಮತಸ್ಥರೆಂಬುದು ತಿಳಿದುಬರುತ್ತದೆ. ಆ ದಿನದಂದು ಸ್ತ್ರೀಯರು ಹಾಗೂ ಕೆಲವೊಂದು ಪುರುಷರು ಒಂದ್ಹೊತ್ತಿನ ಉಪವಾಸ ಇದ್ದು ಭಕ್ತಿಯಿಂದ ಪೂಜೆಗೈಯುತ್ತಾರೆ. ಸ್ತ್ರೀಯರು ಬೆಳಿಗ್ಗೆಯೇ ಸ್ನಾನ ಮಾಡಿ ಶುಭ್ರವಾದ ಬಟ್ಟೆ ಧರಿಸಿ ದೇವರ ನೈವೇದ್ಯಕ್ಕೆ ಹಾಗೂ ಊಟಕ್ಕೆ ಹೋಳಿಗೆ ಮಾಡುತ್ತಾರೆ. ಈ ಆಚರಣೆಯ ವಿಶೇಷತೆ ಅಭಿವೃದ್ಧಿಯ ಸಂಕೇತವನ್ನು ಸೂಚಿಸುತ್ತದೆ. "ಹೋಳಿಗೆ ಮಾಡಲು ಹಾಕುವ ಬೇಳೆಯ ಪ್ರಮಾಣ ಪ್ರತಿವರ್ಷ ಹೆಚ್ಚು ಮಾಡುತ್ತಾ ಹೋಗಬೇಕು. ಹಿಂದಿನ ವರ್ಷ ಒಂದು ಸೇರು ಹಾಕಿದ್ದರೆ, ಈ ವರ್ಷ ಒಂದು ಕಾಲು ಸೇರು, ಮುಂದಿನ ವರ್ಷ ಒಂದೂವರೆ ಸೇರು. ಹಾಗೆಯೇ ಇನ್ನೂ ಮುಂದಿನ ವರ್ಷಗಳಲ್ಲಿ ಹೆಚ್ಚು ಮಾಡುತ್ತಾ ಹೋಗಬೇಕು. ಈ ರೀತಿ ಮಾಡುವ ಉದ್ದೇಶವೆಂದರೆ ಬೀರ ದೇವರು (ಶಿವ) ಪ್ರತಿವರ್ಷ ಕುರಿಗಳ ಸಂಖ್ಯೆ ಹಾಗೂ ಕುಟುಂಬದ ಜನಸಂಖ್ಯೆಯ ಪ್ರಮಾಣವನ್ನು ಬೇಳೆ ಹಾಕಿದ ಪ್ರಮಾಣದಲ್ಲಿ ಹೆಚ್ಚಿಸ

ಬೇಕೆನ್ನುವುದು"(ಮಾಹಿತಿದಾರಳು: ಶಾರದಮ್ಮ ಲಿಂಗಪ್ಪ ಸಾವಿರಕುರಿ:ನವಲಿಹಾಳ್). ಸಂಜೆಯ ಹೊತ್ತಿಗೆ ಕುರಿಗಳು ಗುಡಾರಕ್ಕೆ ಬಂದ ನಂತರ ಕರಿಕಂಬಳಿ ಗದ್ದುಗೆ ಮಾಡಿ ಬೀರದೇವರ ಫೋಟೋ ಇಟ್ಟು ಫೋಟೋದ ಮುಂದೆ ಅನ್ನದ ರಾಶಿ ಹಾಕಿ, ಅದರ ಮೇಲೆ ಎಲ್ಲ ಹೋಳಿಗೆಗಳನ್ನಿಡುವರು. ಐದು ತರಹದ ಹಣ್ಣು, ಹೂವುಗಳು ಹಾಗೂ ಉಡಿ ಅಕ್ಕಿ, ಎಲೆ, ಅಡಿಕೆ, ಉತ್ತುತ್ತಿ, ಕೊಬ್ಬರಿಗಳನ್ನಿಡುವರು. ಹೋಳಿಗೆ ರಾಶಿ ಸುತ್ತ ಮೋಂಬತ್ತಿ ಹಾಗೂ ಊದಿನ ಕಡ್ಡಿ ಹಚ್ಚುವರು. ನಂತರ ದೇವರಿಗೆ ಕಾಯಿ ಒಡೆದು ಕುರಿಗಳಿಗೆ ನೈವೇದ್ಯ ತೋರಿಸಿ ಊಟ ಮಾಡುವರು.

ಮಹಾನವಮಿ

ಇದು ಅಶ್ವೀಜ (ಅಕ್ಟೋಬರ್) ಮಾಸದಲ್ಲಿ ಬರುವ ಹಬ್ಬವಾಗಿದ್ದು ಹಿಂದೂಗಳ ವಿಶೇಷ ಹಬ್ಬವಾಗಿದೆ. ಈ ಸಮಯವು ಮಳೆಗಾಲವಾದ್ದರಿಂದ ಅಲೆಮಾರಿ ಕುರುಬರು ಗುಡ್ಡಗಳಲ್ಲಿ ಬಿಡಾರ ಹೂಡಿ ಗುಡ್ಡಗಾಡು ಪ್ರದೇಶದಲ್ಲಿ ಕುರಿಗಳನ್ನು ಮೇಯಿಸುತ್ತಿರುತ್ತಾರೆ. ಗುಡಾರ ಹೂಡಿದ ಸ್ಥಳಗಳಲ್ಲಿ ಹಾಗೂ ಸ್ವ-ಗ್ರಾಮಗಳಲ್ಲಿ ಒಂಬತ್ತು ದಿನಗಳವರೆಗೆ ಮನೆದೇವರ ಹೆಸರಿನ ಮೇಲೆ ದೀಪ ಹಚ್ಚುತ್ತಾರೆ. ನವರಾತ್ರಿ ಅಥವಾ ಮಹಾನವಮಿ ದಿನ ತಮ್ಮ ಕುಲ ಕಸುಬಿಗೆ ಬಳಸುವ ಸಲಕರಣೆಗಳಾದ ಕೋಲು, ಕೊಡಲೆ, ಜ್ಯೋತಿ, ಕತ್ತರಿ, ವಡೆಚೀಲ ಇತ್ಯಾದಿ ವಸ್ತುಗಳನ್ನು ತೊಳೆದು ಕರಿಯ ಕಂಬಳಿಯಿಂದ ಗದ್ದುಗೆ ಮಾಡಿ ಅದರ ಮೇಲೆ ಸಾಮಾನುಗಳನ್ನಿಡುವರು. ಹಬ್ಬದ ಪ್ರಯುಕ್ತ ಹೋಳಿಗೆ ಮಾಡುವರು. ಕುರಿಗಳು ಮೇವು ಮೆಯ್ದು ಅಡವಿಯಿಂದ ಸಾಯಂಕಾಲ ಗುಡಾರಕ್ಕೆ ಬಂದ ನಂತರ ವೃತ್ತಿ ಸಲಕರಣೆಗಳಿಗೆ ಭಂಡಾರ ಹಚ್ಚಿ ದೀಪ ಬೆಳಗಿ, ಕಾಯಿಒಡೆದು, ಕರ್ಪೂರದಿಂದ ಮಂಗಳಾರತಿಯನ್ನು ಬೆಳಗುವರು. ಸ್ವಗ್ರಾಮದಲ್ಲಿರುವ ಇವರ ಕುಟುಂಬದವರು ಎಲ್ಲಾ ದೇವರುಗಳಿಗೆ ಎಣ್ಣೆ ದೀಪ ಹಚ್ಚುತ್ತಾರೆ. ಪ್ರತಿಯೊಂದು ದೇವರಿಗೆ ಹೋಳಿಗೆ ನೈವೇದ್ಯ ತೋರಿಸಿ ಕಾಯಿ ಒಡೆಯುವ ಸಂಪ್ರದಾಯ ಇದೆ.

ದೀಪಾವಳಿ

ದೀಪಾವಳಿ ಹಬ್ಬವು ಇವರ ಪಾಲಿಗೆ ಅಂಧಕಾರವನ್ನು ಹೊಗಲಾಡಿಸಿ ಬೆಳಕನ್ನು ತಂದು ಕೊಡುವ ಹಬ್ಬವಾಗಿದೆ. ಕುರಿಗಳನ್ನು ಲಕ್ಷ್ಮಿ ಎಂದು ಭಾವಿಸಿ ಕುರಿಗಳಿಗೆ ಪೂಜೆ ಸಲ್ಲಿಸುವ ಮೂಲಕ ಕುರಿಲಕ್ಷ್ಮಿ ಪೂಜೆಯನ್ನು ಆಚರಿಸುತ್ತಾರೆ. ನಾಗರ ಪಂಚಮಿಯಿಂದ ದೀಪಾವಳಿ ಯವರೆಗೆ ಗುಡ್ಡಗಾಡು ಪ್ರದೇಶದಲ್ಲಿದ್ದು, ಕುರಿಗಳಿಗೆ ಮೇವು-ನೀರು ಹುಡುಕಿಕೊಂಡು ಒಂದು ಪ್ರದೇಶದ ಗುಡ್ಡದಿಂದ ಮತ್ತೊಂದು ಪ್ರದೇಶದ ಗುಡ್ಡಕ್ಕೆ ವಲಸೆ ಹೋಗಿ ಅಲೆದಾಡುವುದನ್ನು ಕಾಣುತ್ತೇವೆ. ಈ ಅವಧಿ ಮಳೆಗಾಲವಾದ್ದರಿಂದ ಗಟ್ಟಿ ಹಾಗೂ ಗುಡ್ಡಗಾಡು ಪ್ರದೇಶಗಳಲ್ಲಿ ಅಲೆದಾಡಬೇಕು. ಹೊಲಗದ್ದೆಗಳಲ್ಲಿ ಬೆಳೆದ ಫಸಲನ್ನು ಕೊಯ್ಲು ಮಾಡುವುದರಿಂದ ಕುರಿಮಂದೆಯನ್ನು ಯಾವ ದಿಕ್ಕು ಅಥವಾ ಪ್ರದೇಶದ ಕಡೆ ಹೊಡೆದುಕೊಂಡು ವಲಸೆ ಹೋಗಬೇಕೆಂಬುದು ಈ ಹಬ್ಬದ ಆಚರಣೆಯಿಂದ ನಿರ್ಧಾರವಾಗುತ್ತದೆ. ಮೂರು ತಿಂಗಳು

(ನಾಗರಪಂಚಮಿಯಿಂದ - ದೀಪಾವಳಿಯವರೆಗೆ) ಗುಡ್ಡಗಾಡು ಪ್ರದೇಶದಲ್ಲಿದ್ದು ಹೊರಗಿನ ಪ್ರಪಂಚವನ್ನೇ ನೋಡದ ಈ ಸಮುದಾಯ ತಮಗೆ ದೀಪಾವಳಿ ಹಬ್ಬ ಅಂಧಕಾರವನ್ನು ಹೋಗಲಾಡಿಸಿ ಬೆಳಕನ್ನು ತಂದು ಕೊಡುತ್ತದೆ ಎಂದು ನಂಬುತ್ತಾರೆ.

ಒಂದು ಕಡೆ ಗುಡಾರ ಹೂಡಿ ಕುರಿ ತಬ್ಬಿದ ಕುಟುಂಬಗಳೆಲ್ಲಾ ಸೇರಿಕೊಂಡು ಸಾಮೂಹಿಕವಾಗಿ ಈ ಹಬ್ಬವನ್ನು ಆಚರಿಸುತ್ತಾರೆ. ಹಬ್ಬದ ಸಲುವಾಗಿ ಹೆಣ್ಣು ಮಕ್ಕಳನ್ನು ಗಂಡನ ಮನೆಯಿಂದ ತವರು ಮನೆಗೆ ಅದರಲ್ಲೂ ಹೊಸದಾಗಿ ಮದುವೆಯಾದವರನ್ನು ಕಡ್ಡಾಯವಾಗಿ ಕರೆದುಕೊಂಡು ಬಂದು ಸೀರೆ ಉಡಿಸುತ್ತಾರೆ. ಸ್ಥಿತಿವಂತರಿದ್ದರೆ ಬಂಗಾರದ ಒಡವೆಗಳನ್ನು ತಂದು ಕೊಡುತ್ತಾರೆ. ಈ ಹಬ್ಬದ ಆಚರಣೆಯನ್ನು ಬೆಳಿಗ್ಗೆ ಕುರಿಗಳು ಅಡವಿಗೆ ಹೋಗುವುದರೊಳಗೆ ಮಾಡಬೇಕಾಗಿರುವು ದರಿಂದ ರಾತ್ರಿಯಿಂದಲೇ ಸಿದ್ಧತೆ ಶುರುವಾಗುತ್ತದೆ. ರಾತ್ರಿ ಹನ್ನೆರಡು ಗಂಟೆಯ ನಂತರದ ಸುಮಾರಿಗೆ ಸ್ತ್ರೀಯರು ತಮ್ಮ ಗುಡಾರದಲ್ಲಿಯ ಕಸಕಡ್ಡಿಯನ್ನು ತೆಗೆದು ಕುರಿ ಹಿಕ್ಕೆಯಿಂದ ಸಾರಿಸಿ, ಅಡುಗೆ ಪಾತ್ರೆಗಳನ್ನೆಲ್ಲಾ ತೊಳೆದಿಟ್ಟುಕೊಳ್ಳುವರು. ನಂತರ ನೀರು ಕಾಯಿಸಿಕೊಂಡು ಸ್ನಾನ ಮಾಡಿ ಶುಭ್ರವಾದ ಬಟ್ಟೆ ಧರಿಸಿ ಅಂದು ಹಬ್ಬದ ಅಡುಗೆ ಮಾಡುವ ಗುಡಾರಕ್ಕೆ ಬಂದು ಕೂಡುವರು. ಹಬ್ಬಕ್ಕೆ ಹೋಳಿಗೆ ಮಾಡುತ್ತಾರೆ. ಅದಕ್ಕೆ ತಗಲುವ ಖರ್ಚು ವೆಚ್ಚಗಳನ್ನು ಸಮನವಾಗಿ ಹಂಚಿಕೊಳ್ಳುತ್ತಾರೆ.

ಲಕ್ಷ್ಮೀಪೂಜೆ ಮಾಡುವ ಸ್ಥಳವು ಎಲ್ಲಾ ಗುಡಾರಗಳಿಗೆ ಹತ್ತಿರವಿರುವಂತೆ ಮಧ್ಯದ ಸ್ಥಳವನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ಆ ಸ್ಥಳದಲ್ಲಿ ವೃತ್ತಾಕಾರದಲ್ಲಿ ಕುರಿ ಹಿಕ್ಕೆಯಿಂದ ಸಾರಿಸಿ ಶುಭ್ರಗೊಳಿಸುತ್ತಾರೆ. ಅದರ ಮೇಲೆ ಕುರಿ ಹಿಕ್ಕೆಯಿಂದ ೫ ಪಾಂಡವರ ಮೂರ್ತಿಗಳನ್ನು ಮಾಡಿ ಇಡುವರು. ಇವುಗಳ ಗಾತ್ರವು ಇಳಿಕೆಯ ಕ್ರಮದಲ್ಲಿರುತ್ತದೆ. ಕುರಿ ಹಿಕ್ಕೆಯಿಂದ ಸಾರಿಸಿ ಶುಭ್ರಗೊಳಿಸಿದ ಸ್ಥಳಕ್ಕೆ ಅಂಟಿಕೊಂಡಂತೆ ಕಬ್ಬಿನ ಅಥವಾ ಜೋಳದ ಹಸಿರು ದಂಟುಗಳನ್ನು ನಾಲ್ಕು ಕಡೆ ನೆಟ್ಟು ದೇವರ ಗುಡಿಯ ಗೋಪುರದ ಆಕಾರದಂತೆ ಮೇಲ್ ತುದಿಯಲ್ಲಿಯ ಎಲ್ಲಾ ದಂಟುಗಳನ್ನು ಜೋಡಿಸಿ ಕಟ್ಟುವರು. ಹಾಗೆಯೇ ಮುಖದ್ವಾರದ ದಂಟುಗಳಿಗೆ ಎರಡು ಬಾಳೆದಿಂಡುಗಳನ್ನು ಕಟ್ಟುವರು. ಅದನ್ನು ಹೂವುಗಳಿಂದ ಶೃಂಗಾರ ಗೊಳಿಸುವರು. ಗುಡಿಯಾಕಾರದ ಕಬ್ಬಿನ ದಂಟಿನ ಮುಂದೆ ಕಂಬಳಿ ಹಾಸಿ, ಅಕ್ಕಿಯನ್ನು ಹಾಕಿ ಗದ್ದುಗೆ ತಯಾರು ಮಾಡುತ್ತಾರೆ. ಆ ಗದ್ದುಗೆಯು ಯಾವ ದಿಕ್ಕಿನಿಂದ ನೋಡಿದರೂ. ಶಿವನ ತ್ರಿಶೂಲಾಕಾರವಾಗಿ ಕಾಣಿಸುತ್ತದೆ. ಗದ್ದುಗೆಯ ಮೇಲೆ ಯಾವುದಾದರೊಂದು ಆರಾಧ್ಯ ದೇವರ (ಬೀರ, ಮಾಳಿಂಗರಾಯ) ಭಾವಚಿತ್ರವನ್ನು (ಫೋಟೋ) ಇಟ್ಟು ಅದಕ್ಕೆ ಬಂಗಾರದ ಬೋರಾಮಣಿ ಸರ ಹಾಕಲಾಗುತ್ತದೆ. ಆ ಗದ್ದುಗೆಯ ಪಕ್ಕದಲ್ಲಿ ಮತ್ತೊಂದು ಕಂಬಳಿ ಹಾಸಿ ಅದರ ಮೇಲೆ ನೀರು ತುಂಬಿದ ತಂಬಿಗೆ ಇಟ್ಟು, ತಂಬಿಗೆಯ ಮೇಲೆ ತೆಂಗಿನಕಾಯಿ ಇಟ್ಟು ಹೂವುಗಳಿಂದ ಶೃಂಗಾರಗೊಳಿಸುವರು. ಇದೇ ಲಕ್ಷ್ಮಿ. ತಂಬಿಗೆಯ ಅಕ್ಕಪಕ್ಕದಲ್ಲಿ ಅವರಲ್ಲಿರುವ ಎಲ್ಲಾ ದೇವರ ಫೋಟೋಗಳನ್ನಿಡುವರು. ನಂತರ ಎಲ್ಲಾ ದೇವರುಗಳಿಗೆ, ಪಾಂಡವರಿಗೆ, ತಂಬಿಗೆಗೆ ಭಂಡಾರ ಮತ್ತು ಕುಂಕುಮ ಹಚ್ಚುವರು.

ಕಂಬಳಿ ಗದ್ದುಗೆಯ ಮುಂದೆ ಸ್ವಲ್ಪ ದೂರದಲ್ಲಿ ಕುರಿಯ ಹಿಕ್ಕೆಯಿಂದ ತಯಾರಿಸಿದ ಕುಳ್ಳನ್ನು ದಪ್ಪವಾಗಿ ಹಾಕಿ ಅದರ ಮೇಲೆ ಹಾಲಿನ ಮಗಿಯನ್ನು ಸಮಾನವಾಗಿಟ್ಟು ಕುಳ್ಳಿಗೆ ಬೆಂಕಿ ಹಚ್ಚುವರು. "ಮಗಿಯಲ್ಲಿರುವ ಹಾಲು ಯಾವ ಕಡೆ ಉಕ್ಕುತ್ತದೆಯೋ ಆ ದಿಕ್ಕಿನಲ್ಲಿ ಮಳೆ-ಬೆಳೆ ಚೆನ್ನಾಗಿರುವುದಲ್ಲದೆ, ಕುರಿಗಳಿಗೆ ಮೇವು-ನೀರು ದೊರೆಯುತ್ತದೆ. ಆದ್ದರಿಂದ ಕುರಿಗಳನ್ನು ಆ ದಿಕ್ಕಿನ ಕಡೆ ಹೊಡೆದುಕೊಂಡು ವಲಸೆ ಹೋದರೆ ನಮಗೆ ಹಾಗೂ ನಮ್ಮ ಬದುಕುಗಳಿಗೆ ಒಳ್ಳೆಯದಾಗುತ್ತದೆ"(ಮಾಹಿತಿ: ಹಾಲಪ್ಪ ಪೂಜಾರಿ:ಕಡಕಲಾಟ). ಕ್ಷೇತ್ರ ಕಾರ್ಯ ಸಂದರ್ಭದಲ್ಲಿ ಉತ್ತರ ದಿಕ್ಕಿನ ಕಡೆ ಹಾಲು ಉಕ್ಕಿತ್ತು. ಈ ಪ್ರಕಾರವೇ ಅಲೆಮಾರಿ ಕುರುಬರು ವಲಸೆ ಹೋಗುತ್ತಾರೆ.

ಆ ದಿನದಂದು ಸ್ತ್ರೀ ಪುರುಷರು ಹಾಗೂ ಮಕ್ಕಳು ಶುಭ್ರ ಅಥವಾ ಹೊಸ ಬಟ್ಟೆಗಳನ್ನು ಧರಿಸಿ ಹಣೆಗೆ ಭಂಡಾರವನ್ನು ಹಚ್ಚಿಕೊಳ್ಳುವರು. ಪೂಜೆ ಮಾಡಲು ಎಲ್ಲಾ ಸಿದ್ಧತೆಯಾದ ನಂತರ ಕುಟುಂಬಕ್ಕೊಂದರಂತೆ ಕುರಿ ಅಥವಾ ಟಗರನ್ನು ಹಿಡಿದುಕೊಂಡು ಬಂದು ಗುಡಿಯಾಕಾರದ ಕಬ್ಬಿನ ದಂಟನ್ನು ಅಕ್ಕಪಕ್ಕದಲ್ಲಿ ನಿಲ್ಲಿಸುವರು. ಕುರಿ ಮತ್ತು ಟಗರುಗಳಿಗೆ ಭಂಡಾರ ಹಚ್ಚಿ ಹೂವಿನ ಹಾರ ಹಾಕುವರು. ಅಂದು ದೇವರಿಗೆ ನೈವೇದ್ಯ ಮಾಡಿದ ಹೋಳಿಗೆ, ತುಪ್ಪ, ಹಾಲು, ಅನ್ನ, ಸೆಂಡಿಗೆ ಇತ್ಯಾದಿಗಳನ್ನು ಬಾಳೆಯ ಎಲೆ ಅಥವಾ ಪತ್ರಾಳಿ ಮೇಲಿಟ್ಟು ಊದಿನಕಡ್ಡಿ ಹಚ್ಚಿ, ಕಾಯಿ ಒಡೆಯುವರು. ನಂತರ ಹೂವಿನ ಮಾಲೆ ಹಾಕಿ ನಿಲ್ಲಿಸಿದ ಕುರಿ, ಟಗರುಗಳನ್ನು ಗುಡಿಯ ಸುತ್ತ ಐದು ಸುತ್ತ ತಿರುಗಿಸುವರು. ತಿರುಗಿಸುವಾಗ ಮರಾಠಿ ಭಾಷೆಯಲ್ಲಿ "ಅಡಿಪಿಡಿ ಜಾಂದೆ ಬಾಡ್ರ ಜಾ ಯವುಂಡೆ" ಎಂದು ಜೋರಾಗಿ ಕೂಗುವರು. ತಮ್ಮಲ್ಲಿರುವ ಎಲ್ಲಾ ಪೀಡೆಗಳು ನದಿ ಅಥವಾ ಹೊಳೆ ಆಚೆಕಡೆ ಹೋಗಲಿ ಎಂಬ ಅರ್ಥ ನೀಡುತ್ತದೆ. ಹೆಣ್ಣು ಮಕ್ಕಳು ಆರತಿ ಹಿಡಿದು ಕುರಿಗಳಿಗೆ ಬೆಳಗುತ್ತಾರೆ. ಹೀಗೆ ಬೆಳಗುವಾಗ ಲಕ್ಷ್ಮೀ (ಕುರಿ) ಪೀಡೆಗಳೆಲ್ಲ (ರೋಗ-ರುಜಿನಗಳೆಲ್ಲ) ಹೊಳೆ ಆಕಡೆ ಹೋಗಲಿ ಎಂದು ಸಂಬೋಧಿಸುತ್ತಾರೆ. ಇದಾದ ನಂತರ ದೇವರ ನೈವೇದ್ಯಕ್ಕಿಟ್ಟಿರುವ ಎಲ್ಲಾ ಎಡೆಯನ್ನು ಕಲಿಸಿ ಪ್ರತಿಯೊಂದು ಕುಟುಂಬದ ಕುರಿಗಳಲ್ಲಿ ಸರಗ ಚೆಲ್ಲುತ್ತಾರೆ. ಸರಗ ಚೆಲ್ಲುವವನ ಹಿಂದೆ ಇನ್ನೊಬ್ಬ ತಂಬಿಗೆಯಲ್ಲಿರುವ ನೀರು ಚಿಮುಕಿಸುತ್ತಾನೆ. ಕುರಿಗಳು ಸಂಖ್ಯೆ ಚೆರಗ ಚೆಲ್ಲಿದ ಹಾಗೆ ಮುಂದಿನ ವರ್ಷದೊಳಗೆ ಬೆಳೆಯಬೇಕು ಎಂಬ ನಂಬಿಕೆಯಿಂದ ಈ ರೀತಿಯಾಗಿ ಮಾಡುತ್ತಾರೆ.

ಇದಾದ ಮೇಲೆ ತವರು ಮನೆಗೆ ಬಂದ ಹೆಣ್ಣು ಮಕ್ಕಳು ಕುರಿಗಳಿಗೆ ಆರತಿ ಬೆಳಗಿ ತಮ್ಮ ತಂದೆಯ ಕುರಿಗಳ ಸಂಖ್ಯೆ ಸಮೃದ್ಧಿಯಾಗಿ ಬೆಳೆಯಲಿ ಎಂದು ಹಾರೈಸುವರು. ಹಾಗೆಯೇ ಅಪ್ಪ, ಅಣ್ಣಾ, ತಮ್ಮನಿಗೂ ಆರತಿ ಬೆಳಗಿ ಅವರಿಗೆ ಮತ್ತು ಅವರ ಕುಟುಂಬಕ್ಕೆ ಒಳ್ಳೆಯದಾಗಲೆಂದು ಹಾರೈಸುತ್ತಾರೆ. ಆರತಿ ಬೆಳಗಿದ್ದಕ್ಕೆ ಆರತಿಯ ತಟ್ಟೆಯಲ್ಲಿ ಖುಷಿಗಾಗಿ ೧೦, ೫೦, ೧೦೦ ರೂ.ಗಳವರೆಗೆ ನೀಡುವರು. ಇವೆಲ್ಲಾ ಕಾರ್ಯಗಳು ಮುಗಿದ ನಂತರ ಸಾಮೂಹಿಕವಾಗಿ ಕುಳಿತು ಕೊಂಡು ಊಟ ಮಾಡುವರು.

## ವಿಶೇಷ ಆಚರಣೆಗಳು

ಪ್ರಕೃತಿಯ ಮಡಿಲಲ್ಲಿ ಬದುಕುವ ಅಲೆಮಾರಿ ಕುರುಬರು ಮೊದಲಿನಿಂದಲೂ ತಾವು ಅಲೆದಾಡುವ ಪ್ರದೇಶಗಳಲ್ಲಿ ಕಣ್ಣಿಗೆ ಕಾಣುವ ಮರ, ಬಳ್ಳಿ, ನೆಲ, ಜಲ, ಕಲ್ಲು, ಮಣ್ಣು ಇತ್ಯಾದಿ ವಸ್ತುಗಳಲ್ಲಿ ಒಂದಲ್ಲ ಒಂದು ಶಕ್ತಿ ಅಡಗಿದೆ ಎಂದು ನಂಬಿದ್ದಾರೆ. ತಮ್ಮ ಬದುಕುಗಳಿಗೆ ರೋಗ-ರುಜಿನ ಬಂದಾಗ, ತಮಗೆ ಕಷ್ಟಗಳು ಎದುರಾದಾಗ ತಮ್ಮ ಕಣ್ಣಿಗೆ ಕಾಣದ ನಿಗೂಢ ಶಕ್ತಿ ಅಥವಾ ದೈವದ ಮೊರೆ ಹೋಗುವುದು ಸಾಮಾನ್ಯವಾಗಿದೆ. ಇಂತಹ ಸಮಯದಲ್ಲಿ ಭಕ್ತಿಯ ಜೊತೆಗೆ ಭಯವು ದೇವರಲ್ಲಿ ನಂಬಿಕೆ ಬರುವಂತೆ ಮಾಡುತ್ತದೆ. ಈ ವಿಚಾರವಾಗಿ ಎಲ್ಲ ಸಮುದಾಯದವರು ಆಚರಣೆ ಮಾಡದಿರುವ ಕೆಲವು ವಿಶೇಷ ಆಚರಣೆಗಳಾದ ಹಿಸ್ಕಾಳೆ ಅಮವಾಸ್ಯೆ, ಮಲಪುರಿ ಹಬ್ಬ, ಕತ್ತೆಬಿಡುವುದು ಇತ್ಯಾದಿಗಳನ್ನು ವಿಶೇಷವಾಗಿ ಆಚರಣೆ ಮಾಡುತ್ತಾರೆ.

### ಹಿಸ್ಕಾಳೆ ಅಮವಾಸ್ಯೆ

ಅಲೆಮಾರಿ ಕುರುಬರು ಹಬ್ಬ ಜಾತ್ರೆಗಳಲ್ಲಿ ಮಾತ್ರ ತಮ್ಮ ದೇವರುಗಳನ್ನು ನೆನೆದು ಪೂಜೆ ಮಾಡದೆ ಅಮವಾಸ್ಯೆ, ಹುಣ್ಣಿಮೆ, ಭಾನುವಾರಗಳಂದು ಕೂಡ ಮಡಿಯಿಂದ ತಮ್ಮ ಮನೆದೇವರು ಹಾಗೂ ಆರಾಧ್ಯ ದೇವರುಗಳಿಗೆ ಪೂಜೆ ಸಲ್ಲಿಸುತ್ತಾರೆ. ಇಂತಹ ಪೂಜೆ, ಆಚರಣೆ ಅವರಾತ್ರಿ ಅಮವಾಸ್ಯೆ ಪ್ರಮುಖವಾಗಿದೆ. ಇದು ಜನವರಿ ತಿಂಗಳಲ್ಲಿ ಬರುತ್ತಿದ್ದು ಇದನ್ನು ಅಲೆಮಾರಿ ಕುರುಬರು 'ಹಿಸ್ಕಾಳೆ ಅಮವಾಸ್ಯೆ' ಎಂದು ಕರೆಯುತ್ತಾರೆ. ಈ ವೇಳೆಗಾಗಲಿ ಬಹಳಷ್ಟು ಕುರಿ ಮೇಕೆಗಳು ಈಯ್ದುರಿತ್ತವೆ. ಈಯ್ದ ಕುರಿ ಮೇಕೆಗಳ ಹಾಲು ತುಪ್ಪವನ್ನು ಮನೆದೇವರಿಗೆ ಹಾಗೂ ಆರಾಧ್ಯ ದೇವರಿಗೆ ನೈವೇದ್ಯ ಮಾಡಿ ದೀಪ ಹಚ್ಚುವ ಸಂಪ್ರದಾಯ ಪೂರ್ವಜರಿಂದ ನಡೆದುಕೊಂಡು ಬಂದ ಪದ್ಧತಿಯಾಗಿದೆ. ಇಂತಹ ಹಾಲನ್ನು ಬಳಸದೆ ದೇವರಿಗೆ ಅರ್ಪಿಸುವವರೆಗೆ ತೆಗೆದಿಡುವುದಕ್ಕೆ 'ಮೀಸಲು ಹಾಲು', 'ಮೀಸಲು ತುಪ್ಪ', 'ದೇವರ ಮೀಸಲು' ಎಂದು ಕರೆಯುತ್ತಾರೆ.

ಈ ಆಚರಣೆ ಕುರಿಗಾಯಿ ಹಾಗೂ ದನಗಾಯಿಗಳಲ್ಲಿ ಸಾಮ್ಯತೆ ಕಾಣುತ್ತೇವೆ. ದನಗಾಯಿಗಳು ಆಕಳು ಅಥವಾ ಎಮ್ಮೆ ಈಯ್ದಾಗ ಮೂರು ದಿನ ಅಥವಾ ಐದು ದಿನಗಳವರೆಗೆ ಕರುವಿಗೆ ಗಿಣ್ಣಹಾಲು ಕುಡಿಸಿ ಮಿಕ್ಕವನ್ನು ದೇವರಿಗೆ ಗಿಣ್ಣ ಮಾಡಿ ಅರ್ಪಿಸಿ ಉಳಿದಿದ್ದನ್ನು ತಾವು ಊಟ ಮಾಡುವರು. ಐದನೆ ದಿನದಿಂದ ಒಂಬತ್ತು ದಿನಗಳವರೆಗೆ ಹಾಲನ್ನು ಬಳಸದೆ ಹಾಗೆಯೇ ಕಾಯಿಸಿ ಹೆಪ್ಪಿಡುವುದಕ್ಕೆ 'ಮೀಸಲು' ಎನ್ನುವರು. ಹೆಪ್ಪಿಟ್ಟ ಹಾಲನ್ನು ಒಂಬತ್ತನೆಯ ದಿನದಂದು ಕಡೆಗೋಲಿನಿಂದ ಮೊಸರು ಕಡಿದು ಬೆಣ್ಣೆ ತೆಗೆಯುವರು. ಈ ಬೆಣ್ಣೆಯನ್ನು ಕಾಯಿಸಿ ತುಪ್ಪವನ್ನು ಬಳಸದೆ ದೇವರುಗಳಿಗೆ ದೀಪ ಹಚ್ಚುವರು. ಇದನ್ನು 'ಮೀಸಲು ತುಪ್ಪ' ಎನ್ನುವರು. ಹಾಗೆಯೇ ಅಲೆಮಾರಿ ಕುರುಬರು ಸಹ ಹಿಸ್ಕಾಳೆ ಅಮವಾಸ್ಯೆ ಐದು, ಏಳು, ಅಥವಾ ಒಂಬತ್ತು ದಿನಗಳಿರುವುದಕ್ಕಿಂತ ಮುಂಚಿತವಾಗಿ ದಿನಾಲು ಕುರಿ-ಮೇಕೆಗಳ ಹಾಲನ್ನು ಹಿಂಡಿ, ಆ ಹಾಲನ್ನು ಬಳಸದೆ, ಕಾಯಿಸಿ, ಹೆಪ್ಪು ಹಾಕಿ, ಮಜ್ಜಿಗೆ

ಮಾಡಿ, ಬೆಣ್ಣೆ ತೆಗೆಯುವರು. ಈ ಬೆಣ್ಣೆಯನ್ನು ಬಳಸದೆ ತೆಗೆದಿಡುವರು. ನಾಳೆ ಅಮವಾಸ್ಯೆ ಎನ್ನುವಾಗ ಮೀಸಲಿಟ್ಟ ಬೆಣ್ಣೆಯನ್ನು ಕಾಯಿಸಿ ತುಪ್ಪ ಹಾಗೂ ಆ ದಿನದ ಹಾಲನ್ನು ತೆಗೆದುಕೊಂಡು ತಮ್ಮ ಸ್ವಗ್ರಾಮಗಳಲ್ಲಿರುವ ಮನೆದೇವರು ಹಾಗೂ ಆರಾಧ್ಯ ದೇವರುಗಳಿಗೆ ಹಾಲಿನ ನೈವೇದ್ಯ ಮಾಡಿ, ತುಪ್ಪದ ದೀಪ ಹಚ್ಚುತ್ತಾರೆ. ಬೀರದೇವರನ್ನು ಮನೆದೇವರಾಗಿ ಮಾಡಿಕೊಂಡ ಪ್ರತಿಯೊಂದು ಅಲೆಮಾರಿ ಕುರುಬ ಕುಟುಂಬಗಳು ಇದನ್ನು ಆಚರಿಸುತ್ತಾರೆ. ಮಾಳಿಂಗ ರಾಯನನ್ನು ಮನೆದೇವರು ಮಾಡಿಕೊಂಡವರು ಶಿವರಾತ್ರಿಯ ಅಮಾವಾಸ್ಯೆಯಿಂದು ಆಚರಿಸುವರು. ಈ ರೀತಿಯ ಆಚರಣೆಯಲ್ಲಿರುವ ವ್ಯತ್ಯಾಸಕ್ಕೆ ಕಾರಣ ಮಾಳಿಂಗರಾಯನು ಬೀರೇಶ್ವರನ ಶಿಷ್ಯನಾದ್ದರಿಂದ ಒಂದು ತಿಂಗಳು ತಡವಾಗಿ ಮಾಡಿರಬೇಕೆನಿಸುತ್ತದೆ.

ಕುಲದೇವರುಗಳಿಗೆ ಹಾಲಿನ ನೈವೇದ್ಯ ಮತ್ತು ತುಪ್ಪದ ದೀಪ ಹಚ್ಚಿದ ನಂತರ ಅಲೆಮಾರಿ ಕುರುಬರು ಕುರಿಗಳ ಹಾಲು, ಮೊಸರು, ತುಪ್ಪ ಉಣ್ಣಲು ಅರ್ಹರಾಗುತ್ತಾರೆ. ಅಲ್ಲಿಯವರೆಗೆ "ಈಯ್ದು ಕುರಿಗಳ ಪಂಚಾಮೃತಗಳನ್ನು ಉಣ್ಣುವಂತಿಲ್ಲ. ಆದರೆ ಮೇಕೆಯ ಹಾಲು, ಮರಿ ಸತ್ತ ಕುರಿಯ ಹಾಲು, ತೋಳ ಹೊಯ್ದು ಮರಿ ಕುರಿಯ ಹಾಲು ಉಣ್ಣಬಹುದು" (ಮಾಹಿತಿ: ಖಾನಪ್ಪ ಪೂಜಾರಿ:ಕಡಕಲಾಟ).

ಹೊಸ್ತಾಳೆ ಅಮವಾಸ್ಯೆ ದಿನದ ರಾತ್ರಿ ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲೂಕಿನ ಯಕ್ಸಂಬ ಗ್ರಾಮದಲ್ಲಿ ಬೀರದೇವರ ಜಾತ್ರೆ ಜರುಗುತ್ತದೆ. ಈ ಜಾತ್ರೆಗೆ ಬರುವವರು ತಮ್ಮ ಗ್ರಾಮಗಳಲ್ಲಿರುವ ಬೀರದೇವರಿಗೆ ಹಾಲಿನ ನೈವೇದ್ಯ ಮತ್ತು ತುಪ್ಪದ ದೀಪ ಹಚ್ಚಿದ ನಂತರ ಸಾಯಂಕಾಲದೊಳಗೆ ಯಕ್ಸಂಬ ಗ್ರಾಮಕ್ಕೆ ಬಂದು ಹಾಲಿನ ನೈವೇದ್ಯ ಹಾಗೂ ತುಪ್ಪದ ದೀಪ ಹಚ್ಚಬೇಕೆನ್ನುವುದು ಸಂಪ್ರದಾಯವಾಗಿದೆ. ರಾತ್ರಿ ಸುಮಾರು ೮ ಗಂಟೆಯ ನಂತರ ಬೀರದೇವರ ಪಲ್ಲಕ್ಕಿ, ಗುಡಿಯಿಂದ ಹೊರಬಂದು ಗುಡಿಯ ಸುತ್ತ ಐದು ಸುತ್ತು ತಿರುಗುವುದು. ಅಲೆಮಾರಿ ಕುರುಬರು ತಲೆಯ ಮೇಲೆ ಕರಿಯ ಕಂಬಳಿ ಗೊಪ್ಪೆ ಹಾಕಿಕೊಂಡು ತಾವು ಕುರಿ ತಬ್ಬಿದ ಸ್ಥಳದಿಂದ ತಂದ ಹಾಲು ಮತ್ತು ತುಪ್ಪದ ಬಿಂದಿಗೆಯನ್ನು ತಲೆಯ ಮೇಲೆ ಹೊತ್ತುಕೊಂಡು ದೇವರ ಪಲ್ಲಕ್ಕಿಯ ಹಿಂದೆ ಐದು ಸುತ್ತು ಪ್ರದಕ್ಷಿಣೆ ಹಾಕುವರು. ಬೀರದೇವರ ಪೂಜಾರಿಯು ಹಾಲು ತುಂಬಿದ ಬಿಂದಿಗೆಗಳಿಗೆ ಪೂಜೆ ಮಾಡಿದ ಮೇಲೆ ಹಾಲನ್ನು ದೊಡ್ಡದಾದ ಕೊಪ್ಪರಿಕೆಯಲ್ಲಿ ಹಾಕುವರು. ಅಂದು ಜಾತ್ರೆಗೆ ಬಂದ ಎಲ್ಲ ಭಕ್ತಾದಿಗಳಿಗೆಲ್ಲಾ ಗೋಧಿಯ ಹುಗ್ಗಿ, ಹಾಲು, ಮೊಸರು, ಅನ್ನ, ಸಾರು ಊಟಕ್ಕೆ ಹಾಕುವರು.

ಅಮಾವಾಸ್ಯೆಗಿಂತ ಮೊದಲು ಐದು ಅಥವಾ ಒಂಬತ್ತು ಊರುಗಳ ಬೀರದೇವರುಗಳಿಗೆ ಭಂಡಾರ ಕೊಟ್ಟಿರುತ್ತಾರೆ. ಭಂಡಾರ ಪಡೆದ ಊರುಗಳ ದೇವರ ಪಲ್ಲಕ್ಕಿಗಳು ಅಮಾವಾಸ್ಯೆಯ ದಿನ ರಾತ್ರಿಯ ವೇಳೆಗೆಲ್ಲಾ ಯಕ್ಸಂಬ ಗ್ರಾಮದಲ್ಲಿರುವ ನದಿಗೆ ಬಂದು ಸೇರುವವು. ಅಮಾವಾಸ್ಯೆಯ ದಿನ ರಾತ್ರಿಯೆಲ್ಲ ಡೊಳ್ಳು ಮತ್ತು ಪಾಲ್ಕೆಗಳಿಂದ ಹಾಡುಗಳ ಕುಣಿತ ಏರುತ್ತದೆ. ಡೊಳ್ಳಿನ ಹಾಡುಗಳನ್ನು ಸಂದರ್ಭದ ದೃಷ್ಟಿಯಿಂದ ಎರಡು ರೀತಿಯಾಗಿ ಹಾಡುತ್ತಾರೆ. ಮೊದಲನೆಯದು ಊರಾಡುವ ಸಂದರ್ಭದಲ್ಲಿ ಹಾಡುವ ಹರಕೆ ಹಾಡು.

ಇದು ಸಂಪ್ರದಾಯವಾಗಿ ಬೆಳೆದು ಬಂದಿದೆ. ಎರಡನೆಯದು ದಿಮ್ಮಿಟ್ಟು ಹಾಡುವ ಗೋಷ್ಠಿ ವಿಧಾನ. ಇದು ದೇವರ ಸೇವೆಗಾಗಿ ಬಂದಿದೆ. ಈ ಎರಡು ಸಂದರ್ಭಗಳಲ್ಲಿ ಪ್ರತಿಯೊಂದು ಹಾಡು "ಸ್ವಾಮಿ ನಮ್ಮಯ್ ದೇವರ್ ಬಂದಾವ್ಕ ಬನ್ನಿರೇ" ಎಂಬ ಪಲ್ಲವಿಯಿಂದ ಪ್ರಾರಂಭವಾಗುತ್ತದೆ. ಅಂತಹ ಸಂದರ್ಭದ ಅರ್ಥಪೂರ್ಣತೆಗೆ ಹಾಡೊಂದನ್ನು ಗಮನಿಸ ಬಹುದು.

"ಸ್ವಾಮಿ ನಮ್ಮಯ್ ದೇವರ್ ಬಂದಾವ ಬನ್ನಿರೇ
ಗುರುವೇ ನಮ್ಮಯ್ ದೇವರು ಬಂದಾವ ಬನ್ನಿರೇ
ಬಾಂವುಳ್ಳ ಭಕ್ತನ ಮನೆಯಲ್ಲಿ ರಾಯಭಾರಿಯ ಮರವೇನ
ರಾಯಭಾರಿಯ ಮರಕಪ್ಪ ರಾಜಪಕ್ಷಿಗಳ ಕೂಡ್ಯಾವ
ಲೆಕ್ಕವಿಲ್ಲದೆ ಗಿಣಿ ಹಿಂಡ ಕೂಡಿ ಕಾಲ ಹಣ್ಣಾವ ಮೇದಾವ
ಹಾಲಹಣ್ಣವ ಮೇದಾವಲ್ಲೋ ಭಕ್ತಗ ಹರಕಿಯ ಕೊಟ್ಟಾವೊ
ಆಳಮಕ್ಕಳ ಉಂಡಮಸಿಯಾಗ ಹಾಲ ಕಾವಲ್ಯಾಗಿ ಹರಿಯಲಿ
ಪೂಜೇರಿ ಉಂಡಮನಿಯೊಳಗೆ ತುಪ್ಪದ ಕಾವಲಿ ಹರಿಯಲಿ
ನನ್ನ ಗುರುವ್ಕ ಉಂಡ ಮನಿಯಾಗ ಹೊನ್ನರಾಶಿಯಾ ಹೊಯ್ಕಲೊ
ಕರ್ರಿ ಕಂಬಳಿ ಧರಮಾರೋ ಭಕ್ತಗ್ವರಕಿಯ ಕೊಟ್ಟಾರೊ"

(*ಚನ್ನಪ್ಪ ಕಟ್ಟಿ: ೧೯೯೭: ೭೮, ೭೯*)

ಈ ಡೊಳ್ಳಿನ ಹಾಡು "ಭಂಡಾರ ಬಂದಾವ ನಿಂದರಾಕ್ ನಾವ್ ಬಾರದೊ" ಎಂದು ಮುಕ್ತಾಯವಾಗುತ್ತದೆ. ಇಡೀ ರಾತ್ರಿಯೆಲ್ಲ ವೈವಿಧ್ಯ ಸ್ವರೂಪದ ಹಾಡುಗಳನ್ನು ಡೊಳ್ಳು ಬಡಿಯುತ್ತ ಕುಣಿಯುತ್ತ ಹಾಡುತ್ತಾರೆ. ಬೆಳಗಿನಜಾವ ನದಿಯಿಂದ ಬೀರದೇವರ ಪಲ್ಲಕ್ಕಿ ಯನ್ನು ಡೊಳ್ಳು ಬಡಿಯುತ್ತ ದೇವರ ಗುಡಿಗೆ ತರಲಾಗುವುದು. ಇದಾದ ನಂತರ ಮುಂಜಾನೆ ಒಂಬತ್ತು ಗಂಟೆ ಸುಮಾರಿಗೆ ಬೀರದೇವರ ತೇರು ಎಳೆಯುತ್ತಾರೆ. ಅಂದು ಮಾತ್ರ ದೇವರಿಗೆ ಹೂವು, ಹಣ್ಣು, ಭಂಡಾರ ಹೊಗೆಯದೆ ತಮ್ಮ ಭಕ್ತಿಗನುಸಾರ ತೆಂಗಿನಕಾಯಿಗಳನ್ನು ತೇರಿಗೆ ಹೊಡೆಯುವರು. ಈ ರೀತಿ ಭಕ್ತರು ದೇವರ ತೇರಿಗೆ ಹೊಡೆದ ತೆಂಗಿನಕಾಯಿಗಳನ್ನು 'ಯಕ್ಸಂಬ'ದಲ್ಲಿ ಭೀರದೇವರ ಪೂಜೆ ಮಾಡುವ ಪೂಜಾರಿ ಕುಟುಂಬಗಳು ಹಂಚಿಕೊಳ್ಳುವ ಸಂಪ್ರದಾಯ ಇಂದಿಗೂ ಮುಂದುವರೆದಿರುವುದನ್ನು ಕಾಣಬಹುದಾಗಿದೆ.

ಮಲಪುರಿ ಹಬ್ಬ

ಪ್ರತಿವರ್ಷ ಶ್ರಾವಣ ಮಾಸದಲ್ಲಿ ಸೋಮವಾರ ಅಥವಾ ಶುಕ್ರವಾರ ದಿನಗಳಂದು ಗಂಗಾಪೂಜೆ ಯನ್ನು ಆಚರಿಸುತ್ತಾರೆ. ಇದನ್ನು 'ಮಲಪುರಿ ಹಬ್ಬ' ಎಂದು ಕರೆಯುತ್ತಾರೆ. ಇದು ನಿಸರ್ಗ ಮತ್ತು ಆಲೆಮಾರಿ ಕುರುಬರಿಗೆ ಇರುವ ಸಂಬಂಧವನ್ನು ವ್ಯಕ್ತಪಡಿಸುತ್ತದೆ. ಈ ಹಬ್ಬವನ್ನು ಆಚರಿಸುವ ಹಿನ್ನೆಲೆಯೆಂದರೆ "ಶ್ರಾವಣ ಮಾಸದಲ್ಲಿ ಅತಿಹೆಚ್ಚು ಮಳೆಯಾಗಿ ಬಹಳ ದಿನಗಳವರೆಗೆ ಮಲಪ್ರಭ ನದಿ ತುಂಬಿ ಎರಡು ದಡ ಸೇರಿ ಹರಿಯುತ್ತಿತ್ತಂತೆ. ಆ

ಸಮಯದಲ್ಲಿ ಕುರಿಗಳಿಗೆ ಮೇವು ಹಾಗೂ ತಮಗೆ ಆಹಾರ ದೊರೆಯದೆ ಕ್ಲಿಷ್ಟ ಪರಿಸ್ಥಿತಿ ನಿರ್ಮಾಣವಾಯಿತಂತೆ. ಅಲೆಮಾರಿ ಕುರುಬರು ತಮ್ಮ ಬದುಕುಗಳನ್ನು ಹೊಡೆದುಕೊಂಡು ಗುಡ್ಡಗಾಡು ಪ್ರದೇಶಕ್ಕಾಗಲಿ ಅಥವಾ ಬಯಲು ಪ್ರದೇಶಕ್ಕಾಗಲಿ ವಲಸೆ ಹೋಗುವುದು ಸಾಧ್ಯವಿಲ್ಲದಾಯಿತಂತೆ. ಆಗ ಪ್ರಕೃತಿ ದೇವಿಯಾದ ಗಂಗಾದೇವಿ ಯನ್ನು ಪ್ರಾರ್ಥಿಸಿ ನಮಗೆ ದಾರಿ ತೋರಿಸಿ ನಿನಗೆ ಪ್ರತಿವರ್ಷ ಶ್ರಾವಣಮಾಸದಲ್ಲಿ ಪೂಜೆ ಸಲ್ಲಿಸುತ್ತೇವೆಂದು ಬೇಡಿ ಕೊಂಡರಂತೆ. ಅವರ ಬೇಡಿಕೆಗೆ ಮನ್ನಿಸಿದ ಗಂಗಾದೇವಿ ತಕ್ಷಣ ಹರಿಯುವ ನೀರು ಎರಡು ಭಾಗವಾಗಿ ನಿಂತು ಕುರಿಗಳು ಹೋಗಲಿಕ್ಕೆ ದಾರಿ ಮಾಡಿಕೊಟ್ಟಳಂತೆ. ಆದ್ದರಿಂದ ಅಂದಿನಿಂದ ಇಂದಿನವರೆಗೆ ಮಲಪ್ರಭ ನದಿಯ ಹೆಸರಿನಲ್ಲಿ ಗಂಗಾದೇವಿಗೆ ಪೂಜೆ ಸಲ್ಲಿಸುವುದನ್ನು 'ಮಲಪ್ರಭ ಹಬ್ಬ' ಎನ್ನುವ ಬದಲಾಗಿ 'ಮಲಪುರಿ ಹಬ್ಬ'ವೆಂದು ಕರೆಯುತ್ತಾರೆ"(ಮಾಹಿತಿ: ಅಪ್ಪಣ್ಣ ಪೂಜಾರಿ: ಅಪ್ಪನಹಟ್ಟಿ). ಈ ಹಬ್ಬವನ್ನು ಅಲೆಮಾರಿ ಕುರುಬರು ತಪ್ಪದೆ ಆಚರಿಸುತ್ತಾರೆ.

ಶ್ರಾವಣ ಮಾಸ ಮಳೆಗಾಲವಾದ್ದರಿಂದ ಕುರಿ ಮಂದೆಗಳು ಗುಡ್ಡಗಾಡು ಪ್ರದೇಶ ದಲ್ಲಿರುತ್ತವೆ. ಈ ಹಬ್ಬವನ್ನು ಒಂದೇ ಕಡೆ ತಬ್ಬಿದ ಕುಟುಂಬಗಳು ಸೇರಿ ಸಾಮೂಹಿಕವಾಗಿ ಆಚರಣೆ ಮಾಡುತ್ತವೆ. ಅದ ಖರ್ಚು-ವೆಚ್ಚಗಳನ್ನು ಸಮನಾಗಿ ಹಂಚಿಕೊಳ್ಳುವರು. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಪಾಪಿನಾಯಕನಳ್ಳಿ ಮತ್ತು ಕಮಲಾಪುರ ಮಧ್ಯದಲ್ಲಿ ಬರುವ ಗುಡ್ಡದಲ್ಲಿ ಚಿಕ್ಕೋಡಿ ತಾಲೂಕು ಅಪ್ಪನಹಟ್ಟಿ ಅಣ್ಣಪ್ಪ ಗುಂಪಿನವರು ಈ ಹಬ್ಬದ ಆಚರಣೆಯನ್ನು ಮಾಡಿದರು. ಈ ಹಬ್ಬ ಆಚರಣೆಗೆ ಮಹಿಳೆಯರು ಉಪವಾಸ ಇರುವರು. ಕುರಿಮಂದೆಗಳು ಮೇವು ಮೇಯಲು ಅಡವಿಗೆ ಹೋದನಂತರ ತಲೆ ಸ್ನಾನ ಮಾಡಿ ಅನುಕೂಲವೆನಿಸಿದ ಗುಡಾರದ ಸ್ಥಳಕ್ಕೆ ಸೇರಿಕೊಳ್ಳುತ್ತಾರೆ. ಆ ದಿನದ ಗಂಗಾದೇವಿಯ ನೈವೇದ್ಯಕ್ಕೆ ಹಾಗೂ ತಮಗೂ ವಿಶೇಷ ಅಡುಗೆಯನ್ನಾಗಿ ಹೋಳಿಗೆ ಮಾಡುತ್ತಾರೆ. ಕುಟುಂಬಗಳ ಸಂಖ್ಯೆ ಹೆಚ್ಚು ಇರುವುದರಿಂದ ಮಾಡಿದ ಹೋಳಿಗೆಗಳನ್ನು ಕಟ್ಟಿಗೆ ಮತ್ತು ಕಂಬಳಿಗಳ ಸಹಾಯದಿಂದ ತಯಾರು ಮಾಡಿದ ಮಂಚದ ಮೇಲೆ ಹಾಕಿರುತ್ತಾರೆ. ಅದು ನೋಡುಗರಿಗೆ ವಿಶೇಷ ಹಾಗೂ ಹೊಸತನವಾಗಿ ಕಾಣಿಸುತ್ತದೆ. ಕುರಿ ಹಿಂಡುಗಳು ಸಾಯಂಕಾಲ ಗುಡಾರಕ್ಕೆ ಮರಳಿದ ನಂತರ ಪುರುಷರೆಲ್ಲರು ಸೇರಿ ಪರಡಗಿ (ಬಾಗೀನಾ) ತಯಾರು ಮಾಡುತ್ತಾರೆ. ಕೆಳಗಡೆ ಕರಿಯ ಕಂಬಳಿ ಹಾಸಿ ಅದರ ಮೇಲೆ ಗದ್ದುಗೆ ಚೌಕಕಾರದಲ್ಲಿ ಜೋಳದ ಅಥವಾ ಸಜ್ಜೆಯ ದಂಟುಗಳನ್ನಿಟ್ಟು ದಾರದಿಂದ ಕಟ್ಟುತ್ತಾರೆ. ಪರಡಗಿ ತಯಾರು ಮಾಡಿದ ನಂತರ ಅದಕ್ಕೆ ಭಂಡಾರ ಕುಂಕುಮ ಹಚ್ಚಿ ಹೋಳಿಗೆ ಇಟ್ಟು ಪೂಜೆ ಮಾಡುವರು.

ಗುಡಾರದಲ್ಲಿ ಪೂಜೆ ಮುಗಿದ ನಂತರ ಯಾರಾದರೊಬ್ಬರು ತಲೆಗೆ ಪೇಟಾ ಸುತ್ತಿಕೊಂಡು, ತಲೆಯ ಮೇಲೆ ಕರಿ ಕಂಬಳಿ ಹಾಕಿಕೊಳ್ಳುವರು. ನಂತರ ಪರಡಗಿಯನ್ನು ತಲೆಯ ಮೇಲೆ ಹೊತ್ತು ನದಿ, ಹಳ್ಳ, ಹಗರಿ, ಹೊಳೆ ಅಥವಾ ಕಾಲುವೆ ಇರುವ ಸ್ಥಳಕ್ಕೆ ಪುರುಷರೆಲ್ಲಾ ಹೋಗುವರು. ಹೊತ್ತು ತಂದ ಪರಡಗಿ ಹಾಗೂ ಉಣ್ಣಲು ತಂದ ಬುತ್ತಿಯನ್ನು ಕಾಲುವೆ

ದಡದಲ್ಲಿ ಇಳಿಸುವರು. ಗಂಗಾದೇವಿಯ ಪೂಜೆಗೆಂದು ತಂದ ೫ ಬಾಳೆಹಣ್ಣು, ೫ ನಿಂಬೆಹಣ್ಣು, ೫ ಹಸಿರುಬಳೆ, ೫ ಉತ್ತುತ್ತಿ ಹಾಗೂ ಬೆಲ್ಲವನ್ನು ಪರಡಗಿಯ ಮೇಲಿಟ್ಟು ಭಂಡಾರ, ಕುಂಕುಮ ಹಚ್ಚುವರು. ನಂತರ ಪರಡಗಿ ಸುತ್ತ ಮೋಂಬತ್ತಿ ದೀಪಹಚ್ಚಿ, ಊದಿನಕಡ್ಡಿ ಬೆಳಗಿಸಿ, ಕಾಯಿ ಹೊಡೆಯುವರು. ಇದಾದ ಮೇಲೆ ೫ ಜನರು ಪರಡಗಿಯನ್ನು ಎತ್ತಿಕೊಂಡು ಹರಿಯುವ ನೀರಿಗೆ ಬಿಡುವರು. ಬಿಡುವಾಗ 'ಜೈ ಗಂಗಮ್ಮ', 'ಜೈ ಗಂಗಮ್ಮ' ಎಂದು ಜೋರಾಗಿ ಹೇಳುವರು. ಅಲೆಮಾರಿ ಕುರುಬರು ಗಂಗಾದೇವಿಗೆ ಅರ್ಪಿಸಿದ ಪರಡಗಿ ಮುಣಗದೆ ಹಾಗೂ ಮೊಂಬತ್ತಿಯ ದೀಪಗಳು ನಂದದೆ ಬಹಳ ದೂರದವರೆಗೆ ಹರಿದು ಹೋದರೆ ಆ ವರ್ಷ ತಮಗೆ ಮತ್ತು ತಮ್ಮ ಕುರಿಮಂದೆಗೆ ಯಾವ ರೋಗ-ರುಜಿನ ಬಾರದೆ ಸಮೃದ್ಧಿಯಾಗುತ್ತದೆ ಎಂಬ ನಂಬಿಕೆ ಇಂದಿಗೂ ಬಲವಾಗಿ ಬೇರೂರಿದೆ. ಒಂದು ವೇಳೆ ಪರಡಗಿ ಮುಣಗಿ ಮುಂಬತ್ತಿ ದೀಪಗಳು ನಂದಿದರೆ ಮುಂದಿನ ದಿನಗಳಲ್ಲಿ ಕೆಡಕು ಸಂಭವಿಸುತ್ತವೆಂದು ನಂಬುವರು. ಆ ವರ್ಷ ಅತಿವೃಷ್ಟಿ, ಅನಾವೃಷ್ಟಿ ಅಥವಾ ನೆರೆಹಾವಳಿಗಳು ಸಂಭವಿಸುವುದರ ಜೊತೆಗೆ ಕುರಿಗಳಿಗೆ ಹೆಚ್ಚು ರೋಗ-ರುಜಿನಗಳು ಬಂದು ಆರ್ಥಿಕ ನಷ್ಟ ಸಂಭವಿಸುತ್ತೇವೆಂಬ ನಂಬಿಕೆ ಇದೆ.

ಗಂಗಾದೇವಿಗೆ ಪರಡಗಿ ಅರ್ಪಿಸಿದ ನಂತರ ಗುಡಾರದಿಂದ ತಂದ ಹೋಳಿಗೆ ಬುತ್ತಿಯನ್ನು ಕಾಲುವೆ ದಂಡೆಯ ಮೇಲೆ ಕುಳಿತು ಊಟ ಮಾಡುತ್ತಾರೆ. ಒಂದುವೇಳೆ ಊಟ ಮಾಡಲಾಗಿಯೂ ಬುತ್ತಿ ಉಳಿದರೆ ಅದನ್ನು ಗುಡಾರದ ಸ್ಥಳಕ್ಕೆ ತರದೆ ಗಂಗಾದೇವಿಗೆ ಬಿಟ್ಟು ಬರುತ್ತಾರೆ. ಕಾರಣ ತಮಗೂ ಮತ್ತು ಕುರಿಗಳಿಗೂ ಬರುವ ರೋಗರುಜಿನಗಳನ್ನು ಗಂಗಾದೇವಿಗೆ ಅರ್ಪಿಸಿರುತ್ತಾರೆ. ಬುತ್ತಿಯನ್ನು ಹಿಂದಕ್ಕೆ ತಂದರೆ ಬುತ್ತಿಯ ಜೊತೆಗೆ ರೋಗಗಳು ಬಂದು, ಕುರಿಗಳನ್ನು ಕಾಡುತ್ತವೆಂಬ ಭಯವಿದೆ. ಗುಡಾರಕ್ಕೆ ಬಂದ ನಂತರ ಮಹಿಳೆಯರು ಊಟ ಮಾಡುತ್ತಾರೆ. ಈ ಆಚರಣೆಗಳೆಲ್ಲಾ ಕತ್ತಲಲ್ಲಿಯೇ ಅಂದರೆ ಸುಮಾರು ೭ ಗಂಟೆಯಿಂದ ೧೦ ಗಂಟೆಯವರೆಗೆ ಜರುಗುತ್ತವೆ.

**ಕತ್ತೆ ಬಿಡೋದು**

ಭಾರತದ ಆರ್ಥಿಕತೆಯಲ್ಲಿ ವಿವಿಧ ಸಮುದಾಯಗಳು ತಮ್ಮ ಜೀವನೋಪಾಯಕ್ಕಾಗಿ ವಿವಿಧ ವೃತ್ತಿಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ವೃತ್ತಿಯನ್ನು ವಂಶಪರಂಪರೆಯಾಗಿ ಮುಂದುವರೆಸಿ ಕೊಂಡು ಬಂದ ಜನಸಮುದಾಯಗಳು ತಮ್ಮ ವೃತ್ತಿಯಲ್ಲಿ ನಿರೀಕ್ಷೆಗೆ ಮೀರಿ ಪ್ರತಿಫಲ ದೊರೆತಾಗ ಹರಕೆ ಅಥವಾ ಆಚರಣೆಗಳ ಮೂಲಕ ಆಪ್ತರೊಂದಿಗೆ ಹಾಗೂ ಬಂಧು ಬಳಗದವರೊಂದಿಗೆ ಸಂಭ್ರಮ ಸಂತೋಷವನ್ನು ಹಂಚಿಕೊಳ್ಳುತ್ತಾರೆ. ಹಾಗೆಯೆ ಅಲೆಮಾರಿ ಕುರುಬರು ತಮ್ಮ ಕುಲ ಕಸುಬಿನಲ್ಲಿ ಸಾಧನೆಗೈದಾಗ ಕುರಿಗಳಲ್ಲಿ ಕತ್ತೆ ಬಿಡುವ ಸಂಪ್ರದಾಯದ ಮೂಲಕ ಸಂಭ್ರಮಿಸುವರು. ಒಂದು ಕುಟುಂಬದ ಕುರಿಗಳ ಸಂಖ್ಯೆ ಒಂದು ಸಾವಿರ ದಾಟಿದ ನಂತರ ಈ ಆಚರಣೆ ಮಾಡುತ್ತಾರೆ. ಇದು ಅನಾದಿ ಕಾಲದಿಂದಲೂ ನಡೆದುಕೊಂಡು ಬಂದ ಸಂಪ್ರದಾಯವಾಗಿದೆ.

ಕುರಿಗಳ ಸಂಖ್ಯೆ ಒಂದು ಸಾವಿರ ದಾಟಿದ ನಂತರ ಅಪ್ತರೊಂದಿಗೆ ಹಾಗೂ ಬಂಧು ಗಳೊಂದಿಗೆ ಚರ್ಚಿಸುವರು. ನಂತರ ಪುರೋಹಿತರಲ್ಲಿಗೆ ಹೋಗಿ ಶುಭದಿನ ಕೇಳಿ ಕತ್ತೆ ಬೀಡುವ ದಿನ ನಿಗದಿ ಮಾಡುತ್ತಾರೆ. ದಿನ ನಿಗದಿ ಮಾಡಿದ ಮೇಲೆ ಅಗಸರಲ್ಲಿಗೆ ಹೋಗಿ ಒಂದು ಅಥವಾ ಎರಡು ಸೂಲು ಮರಿ ಹಾಕಿದ ಹೆಣ್ಣು ಕತ್ತೆಯನ್ನು ಕೊಂಡು ಅವರಲ್ಲಿಯೇ ಬಿಟ್ಟು ಬರುತ್ತಾರೆ. ಆಚರಣೆಯು ಒಂದೆರಡು ದಿನ ಬಾಕಿ ಇರುವಂತೆ ಕುರಿಮಂದೆಯ ಸ್ಥಳಕ್ಕೆ ಕತ್ತೆಯನ್ನು ಹೊಡೆದುಕೊಂಡು ಬರುವರು. ಆಚರಣೆಯ ದಿನದಂದು ಕತ್ತೆಗೆ ಬಟ್ಟೆಯನ್ನು ಉಡಿಸಲು ಅಥವಾ ಶೃಂಗಾರಗೊಳಿಸಲು ಬಣ್ಣ ಬಣ್ಣದ ಹೊಸ ಬಟ್ಟೆಯನ್ನು ತಂದು ಹೊಲಿಸುವರು. ಅಂದು ಕತ್ತೆಯನ್ನು ಮದುವಣಗಿತ್ತಿಯ ರೂಪದಲ್ಲಿ ಶೃಂಗಾರಗೊಳಿಸ ಲಾಗುವುದು.

ಕತ್ತೆ ಬೀಡುವ ವಿಚಾರವನ್ನು ಮನೆದೇವರ ಪೂಜಾರಿಗೆ, ಡೊಳ್ಳಿನವರಿಗೆ, ಆಪ್ತರಿಗೆ ಹಾಗೂ ಬಂಧುಬಳಗದವರಿಗೆ ತಿಳಿಸಿ ಆಹ್ವಾನಿಸುವರು. ಕುಟುಂಬದ ಸದಸ್ಯರೆಲ್ಲರಿಗೆ, ಅಳಿಯಂದಿರಿಗೆ, ಹೆಣ್ಣು ಮಕ್ಕಳಿಗೆ ಹಾಗೂ ಹತ್ತಿರದ ಸಂಬಂಧಿಗಳಿಗೆ ಬಟ್ಟೆ ತರುವರು. ಕೆಲವರು ಹೆಣ್ಣು ಮಕ್ಕಳಿಗೆ ಖುಷಿಗಾಗಿ ಬಂಗಾರದ ಒಡವೆಗಳನ್ನು ತಂದು ಹಾಕುತ್ತಾರೆ. ಒಟ್ಟಾರೆಯಾಗಿ ಈ ಆಚರಣೆಯು ಮದುವೆ ಯಂತೆಯೇ ಜರುಗುತ್ತದೆ.

ಈ ಸಂಭ್ರಮವು ಕುರಿಮಂದೆ ತಬ್ಬಿದ ಗುಡಾರದ ಸ್ಥಳದಲ್ಲಿ ಜರುಗುವುದು. ಆ ದಿನದ ಆಚರಣೆಯ ಸಿಹಿ ಊಟವಾಗಿ ಲಡ್ಡು ಮಾಡುತ್ತಾರೆ. ಆದ್ದರಿಂದ ಮುಂಜಾನೆಯಿಂದಲೇ ಸಿದ್ಧತೆಗಳು ಪ್ರಾರಂಭವಾಗುತ್ತವೆ. ಸಾಯಂಕಾಲದೊಳಗೆ ಬೀಗರು, ಬಂಧುಗಳು, ಆಪ್ತರು, ಪೂಜಾರಿ ಹಾಗೂ ಡೊಳ್ಳಿನವರು ಬಂದು ಸೇರುತ್ತಾರೆ. ಅಂದು ಮಾತ್ರ ಕುರಿಗಳು ಸಾಯಂಕಾಲದ ಹೊತ್ತಿಗೆ ಗುಡಾರಕ್ಕೆ ಆಗಮಿಸುತ್ತವೆ. ನಂತರ ಕತ್ತೆ ಬಿಡುವ ಕಾರ್ಯಕ್ರಮವು ಡೊಳ್ಳು ಬಡಿಯುವ ಮೂಲಕ ಆರಂಭವಾಗುತ್ತದೆ. ಆ ದಿನದ ಕೇಂದ್ರ ಬಿಂದು ಕತ್ತೆಯಾದ್ದರಿಂದ ಅದಕ್ಕೆ ಸ್ನಾನ ಮಾಡಿಸುವರು. ನಂತರ ಪೂಜಾರಿಯು ಕತ್ತೆಗೆ ಬಟ್ಟೆ ತೊಡಿಸಿ, ಭಂಡಾರ ಹಚ್ಚಿ, ಕುಲದೇವರು ಮತ್ತು ಮನೆದೇವರು ಹೆಸರು ಹೇಳಿ ಕತ್ತೆ ಬಿಟ್ಟು ಕುಟುಂಬದ ಕುರಿಗಳ ಸಂಖ್ಯೆ ಸಾವಿರದಿಂದ, ಐದು ಸಾವಿರವಾಗಲಿ; ಐದು ಸಾವಿರದಿಂದ ಹತ್ತು ಸಾವಿರವಾಗಲಿ ಎಂದು ಏರು ಧ್ವನಿಯಲ್ಲಿ ದೇವರನ್ನು ಪ್ರಾರ್ಥಿಸುವನು. ಈ ಸಮುದಾಯದಲ್ಲಿ ಐದು ಸಾವಿರ ಕುರಿಗಳಾದರೆ ಹಂದಿ ಬಿಡುವ ಸಂಪ್ರದಾಯವಿದೆ. ಆದರೆ ಕ್ಷೇತ್ರಕಾರ್ಯದ ಅವಧಿಯಲ್ಲಿ ಯಾರು ಹಂದಿ ಬಿಡುವ ಆಚರಣೆ ನಡೆಸಿದ್ದು ಕಂಡುಬರಲಿಲ್ಲ. ಬಿಟ್ಟ ಕತ್ತೆಯನ್ನು ವಾರ ಅಥವಾ ಹತ್ತು ದಿನಗಳವರೆಗೆ ಕಟ್ಟಿ ಹಾಕಿ ಗುಡಾರದ ಸಮೀಪ ಮೇಯಿಸುತ್ತಾರೆ. ನಂತರ ದಿನಗಳಲ್ಲಿ ಕುರಿಗಳ ಜೊತೆ ಮೇಯಲು ಹೊಡೆದುಕೊಂಡು ಹೋಗುವರು. ಕ್ಷೇತ್ರಕಾರ್ಯದ ಅವಧಿಯಲ್ಲಿ ಚಿಕ್ಕೋಡಿ ತಾಲೂಕಿನ ಅಪ್ಪನಹಟ್ಟಿ ಗ್ರಾಮದ ಸಾವಿರಕುರಿ ಅಣ್ಣಪ್ಪನವರ ಕುರಿಗಳಲ್ಲಿ ಕತ್ತೆ ಇದ್ದುದು ಕಂಡುಬಂದಿತು.

ಮನೆದೇವರು ಬೀರದೇವರಾಗಿದ್ದರೆ ಆಲಗ ಹಾಯುವ ಕಾರ್ಯಕ್ರಮವಿರುತ್ತದೆ. ಇಷ್ಟೆಲ್ಲ

ಆದ ಮೇಲೆ ಬಂಧುಗಳಿಗೆ ಬಟ್ಟೆ ಬರೆಗಳನ್ನು ಕೊಟ್ಟು ನಂತರ ಎಲ್ಲರನ್ನು ಸಾಲಾಗಿ ಕೂಡಿಸಿ ಊಟಕ್ಕೆ ಬಡಿಸುತ್ತಾರೆ. ಬಂದ ಪೂಜಾರಿಯನ್ನು ಬರಿಗೈಯಲ್ಲಿ ಕಳುಹಿಸಬಾರದೆಂಬ ಉದ್ದೇಶದಿಂದ ಅವನಿಗೊಂದು ಕುರಿಮರಿ ಕೊಟ್ಟು ಆಶೀರ್ವಾದ ಪಡೆದುಕೊಳ್ಳುತ್ತಾರೆ. ಒಟ್ಟಾರೆಯಾಗಿ ಅಲೆಮಾರಿ ಕುರುಬರು ಮದುವೆಯ ರೀತಿಯಲ್ಲಿ ಈ ಆಚರಣೆಯನ್ನು ಮಾಡಿ ಸುಮಾರು ಒಂದರಿಂದ ಒಂದೂವರೆ ಲಕ್ಷದವರೆಗೆ ಹಣವನ್ನು ವ್ಯಯ ಮಾಡುತ್ತೇವೆಂದು ಅಪ್ಪನಟ್ಟಿ ಅಪ್ಪಣ್ಣ ಹೇಳುತ್ತಾರೆ. ಈ ಸಂಪ್ರದಾಯದಿಂದ ಇವರ ಕೌಟುಂಬಿಕ ಆದಾಯದ ಮೇಲೆ ಎಷ್ಟರಮಟ್ಟಿಗೆ ಪರಿಣಾಮ ಬೀರುತ್ತ ದೆಂಬುದನ್ನು ಗ್ರಹಿಸಬಹುದಾಗಿದೆ.

**ಕತ್ತೆ ಬಿಡುವ ವಿಚಾರವಾಗಿ ಅಲೆಮಾರಿ ಕುರುಬರ ಅಭಿಪ್ರಾಯಗಳು**

• ಕುರಿಗಳ ಸಂಖ್ಯೆ ಒಂದು ಸಾವಿರ ದಾಟುವವರೆಗೆ ಬಿಡುವುದಿಲ್ಲ. ಆ ಸಂಖ್ಯೆಗಿಂತ ಕಡಿಮೆ ಇರುವಾಗಲೇ ವಯಸ್ಸಾದ, ರೋಗಗ್ರಸ್ಥ ಹಾಗೂ ಕೆಲವು ಗಟ್ಟಿಮುಟ್ಟಾದ ಕುರಿಗಳನ್ನು ಮಾರಾಟ ಮಾಡುತ್ತಾರೆ. "ಒಂದು ಸಾವಿರ ಕುರಿ ಆದ ನಂತರ ಕತ್ತೆ ಬಿಡಬೇಕು. ಕತ್ತೆ ಬಿಟ್ಟ ನಂತರ ಅದೃಷ್ಟ ಚೆನ್ನಾಗಿದ್ದರೆ ಮುಂದೆ ಒಳ್ಳೆಯ ದಾಗುತ್ತದೆ, ಇಲ್ಲವಾದರೆ ಕುರಿಗಳಿಗೆ ಮತ್ತು ನಮಗೆ ತೊಂದರೆಯಾಗುತ್ತದೆ. ಆದ್ದರಿಂದಲೇ ಕುರಿಗಳ ಸಂಖ್ಯೆ ೧೦೦೦ ದಾಟುವವರೆಗೆ ಬಿಡುವುದಿಲ್ಲವೆಂದು ಹೇಳುತ್ತಾರೆ" (ಮಾಹಿತಿ: ಅಪ್ಪಣ್ಣ ಪೂಜಾರಿ: ಸೌಂದಲಗ). ಈ ಹೇಳಿಕೆಯು ಅವರ ನಂಬಿಕೆ ಅಥವಾ ಕಲ್ಪನೆಯಿಂದ ಕೂಡಿದೆ. ಆದರೆ ಅವರ ನೈಜ ಬದುಕನ್ನು ಪ್ರಾಯೋಗಿಕವಾಗಿ ನೋಡಿದಾಗ ಹಗಲಿರುಳು ಕುರಿಗಳ ಜೊತೆಗೆ ಅಡವಿಯಲ್ಲೇ ಕಾಲ ಕಳೆಯಬೇಕು. ವಾರಕ್ಕೊಮ್ಮೆ ಅಥವಾ ವಾರಕ್ಕೆರಡು ಸಲ ಕುರಿ ತಬ್ಬುವ ಹೊಲ-ಗದ್ದೆಗಳನ್ನು ಬದಲಾಯಿಸಬೇಕು. ಮಳೆಗಾಲದಲ್ಲಿ ಅವುಗಳ ಸಂಗೋಪನೆ ಬಹಳ ಕಷ್ಟದಾಯಕವಾದುದಾಗಿದೆ. ಇದು ಶ್ರಮಸಾಂದ್ರ ಉದ್ಯೋಗವಾದ್ದರಿಂದ ಅಷ್ಟೊಂದು ಕುರಿಗಳನ್ನು ಸಾಕಿ ಸಲುಹಲು ಕುಟುಂಬದ ಸದಸ್ಯರನ್ನು ಹಾಗೂ ಆಳು ಮಕ್ಕಳನ್ನು ಸರಿದೂಗಿಸುವುದು, ರೋಗ ರುಜಿನಗಳು ಬಂದಾಗ ಔಷಧೋಪಚಾರ ಮಾಡುವುದು ಇತ್ಯಾದಿ ಸಮಸ್ಯೆಗಳಿರುವುದರಿಂದಲೇ ಕುರಿಗಳ ಸಂಖ್ಯೆಯನ್ನು ಸಾವಿರಕ್ಕೇರಿಸುವುದಿಲ್ಲ ಎಂದು ಕಾಣಿಸುತ್ತದೆ.

• ಬೆಳಗಾವಿ ಜಿಲ್ಲೆಯ ಅಲೆಮಾರಿ ಕುರುಬರ ಪ್ರಭಾವಿ ನಾಯಕರಾದ ಲಕ್ಷ್ಮಣರಾವ್ ಚಿಂಗಳೆ ಪ್ರಕಾರ "ಸುಂದರವಾದ ದೊಡ್ಡ ಕಟ್ಟಡ, ಕಾರ್ಖಾನೆ, ಮನೆ, ಅಂಗಡಿ ಇತ್ಯಾದಿಗಳಲ್ಲಿ ಬೆದರು ಗೊಂಬೆಯನ್ನು ಇಳಿಬಿಟ್ಟಿರುತ್ತಾರೆ. ಹಾಗೆಯೆ ಸುಂದರವಾದ ಸ್ತ್ರೀ-ಪುರುಷರು ಸಭೆ ಸಮಾರಂಭಗಳಲ್ಲಿ ಭಾಗವಹಿಸುವಾಗ ಮುಖದ ಯಾವುದಾದರೂ ಒಂದು ಭಾಗದಲ್ಲಿ ಕಪ್ಪು ಚುಕ್ಕೆಯನ್ನಿಟ್ಟಿರುತ್ತಾರೆ. ಈ ರೀತಿಯಾಗಿ ಗೊಂಬೆ ಇಳಿಬಿಡುವುದು, ಮುಖದ ಮೇಲೆ ಕಪ್ಪು ಚುಕ್ಕೆ ಇಡುವುದರ ಉದ್ದೇಶ ಜನರ ದೃಷ್ಟಿಯು ಗೊಂಬೆ ಅಥವಾ ಕಪ್ಪುಚುಕ್ಕೆಯ ಕಡೆಗೆ ಹರಿಯಲಿ. ಇಲ್ಲವಾದರೆ ಆಯುಷ್ಯ ಕಡಿಮೆಯಾಗುತ್ತದೆ ಅಥವಾ ತೊಂದರೆಯಾಗುತ್ತದೆಂಬ ಭಾವನೆ ಬಹಳಷ್ಟು ಜನರಲ್ಲಿದೆ. ಹಾಗೆಯೇ ಬಹಳಷ್ಟು ಕುರಿಗಳಲ್ಲಿ ಒಂದು ಕತ್ತೆ ಇದ್ದರೆ

ಅಥವಾ ಒಳ್ಳೆಯದರಲ್ಲಿ ಒಂದು ಕೆಟ್ಟದ್ದಿದ್ದರೆ (ಕತ್ತೆ) ಕುರಿಗಳನ್ನು ನೋಡುಗರ ದೃಷ್ಟಿ ಕತ್ತೆಯ ಕಡೆ ಹರಿಯುತ್ತದೆ. ಇದರಿಂದ ಕುರಿಗಳಿಗೆ ರೋಗ-ರುಜಿನಗಳು ಬಾರದೆ ಕಷ್ಟ-ನಷ್ಟ ವಾಗುವುದಿಲ್ಲ" ಎಂದು ಹೇಳುತ್ತಾರೆ.

• ಇನ್ನೂ ಕೆಲವರು ಕತ್ತೆ ಬಿಡೋದು ಮೊದಲಿನಿಂದಲೂ ನಡೆದು ಬಂದಿದ್ದು ಆ ಸಂಪ್ರದಾಯವನ್ನು ಯಾವ ಕಾರಣಕ್ಕೂ ಮುರಿಯುವುದಿಲ್ಲ. ಕುರಿಗಳ ಸಂಖ್ಯೆ ಹೆಚ್ಚಾಗುವುದು ಅಥವಾ ಕಡಿಮೆಯಾಗುವುದು ನಮ್ಮ ಕೈಯಲ್ಲಿ ಏನಿದೆ? ಎಲ್ಲ ಆ ಬೀರದೇವರದು ಎಂದು ಹೇಳುತ್ತಾರೆ.

ಈ ಮೇಲಿನ ಅಭಿಪ್ರಾಯಗಳು ಭಿನ್ನವಾಗಿವೆ. ಆದರೂ ಅಲೆಮಾರಿ ಕುರುಬರು ೧೦೦೦ ಕುರಿಗಳಾಗುವವರೆಗೆ ಅವುಗಳ ಸಂಖ್ಯೆಯನ್ನು ಇಂದಿನ ಕಾಲದಲ್ಲಿ ಹೆಚ್ಚಿಸುವುದೆಂದರೆ ಸಾಮಾನ್ಯ ಕೆಲಸವಲ್ಲ. ಏಕೆಂದರೆ ಕುರಿಗಳಿಗೆ ಬರುವ ರೋಗ ರುಜಿನಗಳು ಸಂಖ್ಯೆ ಹೆಚ್ಚಾಗಿವೆ.

## ಜನಪದ ವೈದ್ಯ

ಅಲೆಮಾರಿ ಕುರುಬನ ಖರ್ಚಿನ ಮೂಲಗಳಲ್ಲಿ ಪ್ರಮುಖವಾದದು, ಕುರಿಗಳ ಔಷಧ. ಕುರಿಗಳಿಗೆ ಬಂದೊದಗುವ ರೋಗರುಜಿನಗಳನ್ನು ನಿಯಂತ್ರಿಸಲು ವರ್ಷಪೂರ್ತಿ ಹಣ ಖರ್ಚು ಮಾಡುತ್ತಿರಬೇಕು. ಅಲೆದಾಡುತ್ತಿರುವ ಪ್ರದೇಶದಲ್ಲಿ ಮೇವು, ನೀರು ಮತ್ತು ವಾತಾವರಣ ದಲ್ಲಿಯ ವ್ಯತ್ಯಾಸಗಳಿಂದ ವರ್ಷವಿಡಿ ಒಂದಲ್ಲ ಒಂದು ರೋಗ ಕುರಿಗಳಲ್ಲಿ ಕಾಣಿಸಿಕೊಳ್ಳುತ್ತವೆ. ರೋಗಗಳನ್ನು ನಿಯಂತ್ರಿಸಲು ಅಲೆಮಾರಿ ಕುರುಬರು ಎರಡು ರೀತಿಯಲ್ಲಿ ಕಾರ್ಯಪ್ರವೃತ್ತನಾಗುತ್ತಾರೆ. ಗಿಡಮೂಲಿಕೆಗಳ ಸಹಾಯ ದಿಂದ ದೇಶಿ ವೈದ್ಯಪದ್ಧತಿಯನ್ನು ಹಾಗೂ ಪಾಶ್ಚಾತ್ಯ ಔಷಧಗಳನ್ನು ಬಳಸುವುದರ ಮೂಲಕ ಆಧುನಿಕ ಪದ್ಧತಿಯನ್ನು ಅಳವಡಿಸಿಕೊಂಡಿದ್ದಾರೆ. ಗಿಡಮೂಲಿಕೆಗಳು, ತಾನು ಅಲೆದಾಡುವ ಪ್ರದೇಶದಲ್ಲಿ ದೊರೆಯುವುದರಿಂದ ಅವುಗಳಿಗೆ ಬೆಲೆಕೊಟ್ಟು ತರಬೇಕಾಗಿಲ್ಲ. ಅವು ನಿಸರ್ಗದ ಉಚಿತ ಕೊಡುಗೆ ಎನ್ನಬಹುದು. ಆದರೆ ದೇಶದ ಜನಸಂಖ್ಯೆ ಬೆಳವಣಿಗೆಯು ಆಹಾರ ಸಮಸ್ಯೆಯನ್ನು ಸೃಷ್ಟಿಮಾಡಿ ಸಾಗುವಳಿ ಭೂಮಿಯನ್ನು ವಿಸ್ತರಿಸಿದರೆ, ಕೈಗಾರಿಕಿಕರಣವು ಕಾಡನ್ನು ನಾಶಗೊಳಿಸಿದ ಪರಿಣಾಮವಾಗಿ ಗಿಡಮೂಲಿಕೆಗಳು ದೊರೆಯದ ಪರಿಸ್ಥಿತಿ ನಿರ್ಮಾಣವಾಗಿದೆ. ಆದ್ದರಿಂದ ಅಲೆಮಾರಿ ಕುರುಬರು ಸಣ್ಣ-ಪುಟ್ಟ ರೋಗಗಳಿಗೆ ಮಾತ್ರ ಸ್ಥಳೀಯವಾಗಿ ದೊರೆಯುವ ಗಿಡಮೂಲಿಕೆಗಳನ್ನು ಬಳಸಿಕೊಂಡು ಚಿಕಿತ್ಸೆ ಮಾಡುತ್ತಾರೆ. ಆದರೆ ಋತುಮಾನಕ್ಕನುಗುಣವಾಗಿ ವರ್ಷವಿಡೀ ಕುರಿಗಳಿಗೆ ಹೆಮ್ಮಾರಿಯಾಗಿ ಹರಡುವ ದೊಡ್ಡ ರೋಗಗಳನ್ನು ನಿಯಂತ್ರಿಸಲು ಪಾಶ್ಚಾತ್ಯ ಔಷಧಗಳ ಮೊರೆ ಹೋಗಿದ್ದಾರೆ. ಮೈ-ಮರೆತರೆ ಕುರಿಯ ಹಿಂಡಿಗೆ ಹಿಂಡೆ ರೋಗಕ್ಕೆ ತುತ್ತಾಗುವುದರಿಂದ ಕುರಿಗಳ ಸಂಖ್ಯೆ ಕಡಿಮೆಯಾಗುತ್ತದೆ. ಇದರ ಪರಿಣಾಮವಾಗಿ ಅವನ ವಾರ್ಷಿಕ ಆದಾಯದ ಮೇಲೆ ದುಷ್ಪರಿಣಾಮ ಬೀರುತ್ತದೆ. ಜೊತೆಗೆ ಕುಟುಂಬದ ಸದಸ್ಯರಿಗೆ ಬರುವ ಸಣ್ಣಪುಟ್ಟ ರೋಗಗಳಿಗೆ ನಿಸರ್ಗದ ಗಿಡಮೂಲಿಕೆಗಳನ್ನು ಬಳಸುತ್ತಾರೆ.

ಗಿಡಮೂಲಿಕೆಗಳು : ಕುರಿಗಳಿಗೆ ಸಣ್ಣಪುಟ್ಟ ಗಾಯ, ನೋವು ಅಥವಾ ರೋಗಗಳು ಕಾಣಿಸಿ ಕೊಂಡಾಗ ಅವನ್ನು ವಾಸಿ ಮಾಡಲು ಹಿರಿಯರಿಂದ ಕಲಿತ ವಿದ್ಯೆ ನೆರವಿಗೆ ಬರುತ್ತದೆ. ಸ್ಥಳೀಯವಾಗಿ ದೊರೆಯುವ ಗಿಡಮೂಲಿಕೆಗಳು, ಸಾಂಬಾರ ಪದಾರ್ಥಗಳು ಹಾಗೂ ಕುರಿಗಳಿಂದ ಸಿಗುವ ಉತ್ಪನ್ನಗಳನ್ನು ಬಳಸಿಕೊಂಡು ಔಷಧ ತಯಾರು ಮಾಡುತ್ತಾರೆ.

ಎಕ್ಕೆಹಾಲು : ಕುರಿಯು ಶ್ವಾಸಕೋಶದ ತೊಂದರೆಯಿಂದ ಬಳಲುತ್ತಿದ್ದಾಗ, ಮೂಗಿನ ಮೂಲಕ ಉಸಿರಾಡದೆ ಬಾಯಿ ತೆರೆಯುತ್ತಿರುತ್ತದೆ. ಇದಕ್ಕೆ ಎಕ್ಕೆ ಗಿಡದ ಕೊನೆಯನ್ನು ಮುರಿದು ಕುರಿಯ ಮೂಗಿನಲ್ಲಿಡಲಾಗುತ್ತದೆ ಅಥವಾ ಆ ಗಿಡದ ಹಾಲನ್ನು ಮೂಗಿಗೆ ಬಿಡಲಾಗುತ್ತದೆ. ತಕ್ಷಣವೇ ಕುರಿಯು ಸೀನಲು ಆರಂಭಿಸುವುದರಿಂದ ಮೂಗಿನಲ್ಲಿರುವ ಸೊಸಲು (ಸಿಂಬಳ) ಹೊರಬೀಳುತ್ತದೆ. ಈ ರೀತಿಯಾಗಿ ೨-೩ ದಿನ ಮಾಡುವುದರಿಂದ ಕುರಿ ಚೆನ್ನಾಗಿ ಉಸಿರಾಡುತ್ತದೆ.

ಕೇರುಕಾಯಿ : ಮಳೆಗಾಲದಲ್ಲಿ ಕುರಿ-ಮೇಕೆಗಳು ಗುಡ್ಡಗಾಡು ಪ್ರದೇಶದಲ್ಲಿ ಅಲೆದಾಡು ವುದರಿಂದ ಕಾಲಿನ ತಳಭಾಗದಲ್ಲಿ ಗಡ್ಡೆಯಾಗುತ್ತವೆ. ಇದರಿಂದ ನಡೆದಾಡಲು ತೊಂದರೆ ಪಡುತ್ತವೆ. ಇದನ್ನು ನಿವಾರಿಸಲು ಕೇರು ಕಾಯಿಯನ್ನು ಚೆನ್ನಾಗಿ ಪುಡಿಮಾಡಿ ಅಡಿಗೆ ಎಣ್ಣೆಯಲ್ಲಿ ಕುದಿಸಿ ಗಡ್ಡೆಯ ಭಾಗಕ್ಕೆ ಹಚ್ಚಲಾಗುವುದು. ಹಾಗೆಯೇ ಕುರಿ-ಮೇಕೆಗಳು ಮುಳ್ಳು ತುಳಿದು ಕಾಲಿಗೆ ನೋವು ಆದಾಗ ಕೇರು ಬೀಜದಲ್ಲಿರುವ ಎಣ್ಣೆ ತೆಗೆದು ಆ ಎಣ್ಣೆಯನ್ನು ನೋವಾದ ಭಾಗಕ್ಕೆ ಹಚ್ಚಿ ಬೆಂಕಿಯ ಕೆಂಡದಿಂದ ಕಾವು ಕೊಡುವರು. ಈ ರೀತಿ ೨-೩ ದಿನ ಮಾಡಿದರೆ ಕಾಲುಗಡ್ಡೆಯ ಗಾಯ ಮತ್ತು ಮುಳ್ಳು ತುಳಿದ ನೋವು ಕಡಿಮೆಯಾಗುತ್ತದೆ. ಕುರಿಗೆ ಕೆಮ್ಮು ಆಗಿದ್ದರೆ ಕೇರು ಬೀಜವನ್ನು ಪುಡಿಮಾಡಿ ಅಡಿಗೆ ಎಣ್ಣೆಯಲ್ಲಿ ಕಾಯಿಸಿ ಕುಡಿಸುತ್ತಾರೆ. ಇದರಿಂದ ಕುರಿಯ ಕೆಮ್ಮು ಕಡಿಮೆಯಾಗುತ್ತದೆ.

ತುಂಬೆಸೊಪ್ಪು : ಕುರಿಗಳಿಗೆ ಮಳ್ಳುರೋಗ ಬಂದಾಗ ತುಂಬೆಸೊಪ್ಪು, ಮೆಣಸು ಮತ್ತು ಲವಂಗ ಮೂರನ್ನು ಮಿಶ್ರಮಾಡಿ ರಸ ಬರುವವರೆಗೆ ಚೆನ್ನಾಗಿ ಅರಿದು, ಬಂದ ರಸವನ್ನು ಕುರಿಯ ಮೂಗಿನಲ್ಲಿ ಹಿಂಡಲಾಗುವುದು. ಈ ತರಹ ಮೂರ್ನಾಲ್ಕು ದಿನ ಮಾಡಿದರೆ ಮಳ್ಳುರೋಗ ಕಡಿಮೆ ಯಾಗುತ್ತದೆ.

ಹಂದಿ ತಪ್ಪಲು : ಕುರಿಗೆ ಬಾಯಿ ಜ್ವರ ಅಥವಾ ಬಾಯಿಬೇನೆ ಬಂದಾಗ ಹಂದಿ ತೊಪ್ಪಲು ಮತ್ತು ಉಪ್ಪನ್ನು ಮಿಶ್ರಮಾಡಿ ಚೆನ್ನಾಗಿ ಜಜ್ಜಿ ಕುರಿಯ ಹೊಟ್ಟೆಗೆ ಕೊಡಬೇಕು. ಇದರಿಂದ ಬಾಯಿಜ್ವರ ಕಡಿಮೆಯಾಗುತ್ತದೆ. ಆದರೆ ಇಂದು ಈ ಬೇನೆ ನಿಯಂತ್ರಿಸಲು ಪಾಶ್ಚಾತ್ಯ ಔಷಧವನ್ನು ಬಳಸಲಾಗುತ್ತಿದೆ.

ಗಜಗ : ಜನಿಸಿದ ಮರಿ ಅತಿ ಹೆಚ್ಚು ಗಿಣ್ಣದ ಹಾಲು ಕುಡಿದರೆ ಹೊಟ್ಟೆಯಲ್ಲಿ ಗಂಟು ಗಳಾಗುತ್ತವೆ. ಪರಿಣಾಮವಾಗಿ ಮರಿ ಹೆಚ್ಚು ಭೇದಿ ಮಾಡಲು ಶುರುಮಾಡುತ್ತದೆ. ಇದನ್ನು ಹೋಗಲಾಡಿಸಲು ಅಲೆಮಾರಿ ಕುರುಬರು ಗಜಗವನ್ನು ಕುಟ್ಟಿ ಚೆನ್ನಾಗಿ ಪುಡಿ ಮಾಡಿ ಮಜ್ಜಿಗೆಯಲ್ಲಿ ಬೆರೆಸಿ ಕುಡಿಸುತ್ತಾರೆ. ಈ ರೀತಿ ೨ ರಿಂದ ೩ ದಿನದವರೆಗೆ ಮಾಡಿದರೆ ಹೊಟ್ಟೆಯಲ್ಲಿರುವ ಗಂಟುಗಳು ಕರಗಿ ಭೇದಿ ಮಾಡುವುದು ನಿಲ್ಲುತ್ತದೆ.

**ಹಿರೆಮದ್ದಿನ ಗಡ್ಡೆ :** ಇದನ್ನು ಕುರಿಗಳು ಚೆನ್ನಾಗಿ ಮೇವು ಮೇಯಲು ಬಳಸುತ್ತಾರೆ. ಇದು ಭೂಮಿಯ ಒಳಗೆ ದೊರೆಯುತ್ತದೆ. ಈ ಗಡ್ಡೆಯನ್ನು ಕಿತ್ತುಕೊಂಡು ನೀರು ಬರುವ ವರೆಗೆ ಚೆನ್ನಾಗಿ ಜಜ್ಜಿ ಕುರಿಗಳಿಗೆ ಕುಡಿಸಬೇಕು. ಇದರಿಂದ ಕುರಿಗಳ ಆರೋಗ್ಯ ಚೆನ್ನಾಗಿ ರುವುದರ ಜೊತೆಗೆ ಹೆಚ್ಚು ಮೇವು ಮೇಯುತ್ತವೆ.

**ಮಂಗನಬಳ್ಳಿ :** ಕುರಿಗಳು ಬಡಕಲು ಆಗಿದ್ದು ಚೆನ್ನಾಗಿ ಮೇವು ಮೇಯದ ಸ್ಥಿತಿಯಲ್ಲಿದ್ದರೆ ಮಂಗನಬಳ್ಳಿ, ಅಲ್ಲಾ, ಮೆಣಸು, ಬೆಳ್ಳುಳ್ಳಿ, ನಿಂಬೆಹಣ್ಣು, ಕತಾಳಿ ಎಲೆ, ಎಲ್ಲವನ್ನು ಕುಟ್ಟಿ ನೀರುಮಾಡಿ ಮೂರು ದಿನ ಕೊಳೆ(ನೆನೆ)ಯಿಟ್ಟು ಕುರಿಗಳಿಗೆ ಕುಡಿಸಬೇಕು. ಈ ರೀತಿ ಮಾಡುವು ದರಿಂದ ಕುರಿಯ ಆರೋಗ್ಯ ಸುಧಾರಿಸುವುದಲ್ಲದೆ ಚೆನ್ನಾಗಿ ಮೇಯಲು ಆರಂಭಿಸಿ ದಷ್ಟ-ಪುಷ್ಟವಾಗುತ್ತದೆ.

**ಕಕ್ಕೆ ತಪ್ಪಲು :** ಕುರಿ ಹಾಗು ಮರಿಗಳಿಗೆ ಕೆಮ್ಮು ಬಂದಾಗ ಕಕ್ಕೆ ತಪ್ಪಲನ್ನು ಚೆನ್ನಾಗಿ ಜಜ್ಜಿ ನೀರಿನಲ್ಲಿ ಕಲಿಸಿ ಕುಡಿಸುವುದರಿಂದ ಕೆಮ್ಮು ಕಡಿಮೆಯಾಗುತ್ತದೆ.

**ಕುರಿ ಉಣ್ಣೆಯ ಬೂದಿ :** ಕುರಿಗಳಿಗೆ ಮೈಲಿ ರೋಗಬಂದಾಗ ಕಿವಿಯ ತುಂಬಾ ಗಾಯ ವಾಗುತ್ತದೆ. ಇದನ್ನು ಹೋಗಲಾಡಿಸಲು ಅಲೆಮಾರಿ ಕುರುಬರು ಹಳೆಯ ಕಂಬಳಿಯ ಉಣ್ಣೆ ಅಥವಾ ಕುರಿಯ ಉಣ್ಣೆಯನ್ನು ಕತ್ತರಿಸಿ ಬೆಂಕಿಯಲ್ಲಿ ಸುಟ್ಟು ಬೂದಿ ಮಾಡುವರು. ಬೂದಿ ಮತ್ತು ಬೆಳ್ಳುಳ್ಳಿಯನ್ನು ಮಿಶ್ರಣ ಮಾಡಿ ಜಜ್ಜಿ, ಕೊಬ್ಬರಿ ಎಣ್ಣೆಯಲ್ಲಿ ಬೆರೆಸಿ ಗಾಯವಾದ ಭಾಗಕ್ಕೆ ಹಚ್ಚುತ್ತಾರೆ. ಈ ರೀತಿ ಹಚ್ಚುವುದರಿಂದ ಗಾಯಕ್ಕೆ ನೊಣ ಕೂಡುವುದಿಲ್ಲ. ಜೊತೆಗೆ ಗಾಯ ವಾಸಿಯಾಗುತ್ತದೆ.

**ಬರೆ ಹಾಕುವುದು :** ಕುರಿಗಳಿಗೆ ರೋಗ ರುಜಿನಗಳು ಬಂದಾಗ ಒಂದು ಮೊಳ ಉದ್ದದ ಕಬ್ಬಿಣದ ಸಲಾಕೆಯಿಂದ ಅಥವಾ ಚಡಿಯನ್ನು ಬೆಂಕಿಯಲ್ಲಿ ಕಾಯಿಸಿ ಕುರಿಯ ಶರೀರದ ಮೇಲೆ ಬರೆ ಎಳೆಯುವರು. ಇದಕ್ಕೆ 'ಬರೆ ಹಾಕುವುದು' ಎನ್ನುವರು. ಬರೆಯನ್ನು ಮೂರು ಪ್ರಸಂಗಗಳಲ್ಲಿ ಹಾಕುವರು : ಕೆಮ್ಮು ಇದ್ದಾಗ, ಮಳ್ಳು ಬಂದಾಗ ಹಾಗೂ ಹಕ್ಕಿ ಹಾರಿದಾಗ.

- **ಕೆಮ್ಮು :** ಕಾದ ಕಬ್ಬಿಣದ ಸಲಾಕೆಯಿಂದ ಕುರಿಯ ಎದೆಗೆ ಮೂರು ಬರೆ ಹಾಕುತ್ತಾರೆ. ಪರಿಣಾಮವಾಗಿ ಮೂರು-ನಾಲ್ಕು ದಿನಗಳಲ್ಲಿ ಕೆಮ್ಮು ನಿಯಂತ್ರಣವಾಗುತ್ತದೆ.
- **ಮಳ್ಳು :** ಈ ರೋಗ ಬಂದಾಗ ಕುರಿ ತನ್ನಷ್ಟಕ್ಕೆ ತಾನು ಸುತ್ತು ತಿರುಗುತ್ತದೆ, ಬೀಳುತ್ತದೆ, ಮಂಕಾಗಿರುತ್ತದೆ ಹಾಗೂ ಹಲ್ಲು ಕಡಿಯುತ್ತದೆ. ಇದನ್ನು ಗಮನಿಸಿದ ಅಲೆಮಾರಿ ಕುರುಬರು ಕಾದ ಕಬ್ಬಿಣದ ಸಲಾಕೆಯಿಂದ ಹಣೆಯ ಮೇಲೆ ಹಾಗೂ ಎರಡು ಕಿವಿಯ ಸುತ್ತ ಬರೆ ಎಳೆಯುತ್ತಾರೆ. ಪರಿಣಾಮವಾಗಿ ಕುರಿಯ ಮಳ್ಳುತನ ಕಡಿಮೆಯಾಗುತ್ತದೆ.
- **ಹಕ್ಕಿ ಹಾರಿದಾಗ :** ಕರೆಗುಬ್ಬಿಯು ತನ್ನ ಮೊಟ್ಟೆಗಳ ಮೇಲೆ ಕುಳಿತು ನೇರವಾಗಿ ಕುರಿಯ ಬೆನ್ನಿನ ಮೇಲೆ ಕುಳಿತರೆ, ಕುರಿಯ ನಡುವು ಅಥವಾ ಬೆನ್ನು ಹೋಗಿ, ಆಯಾಸ ಪಡುತ್ತ ಕಾಲು ಎಳೆಯುತ್ತಾ ನಡೆಯುತ್ತದೆ. ಇದನ್ನು ಸರಿಪಡಿಸಲು ಕಬ್ಬಿಣದ ಸಲಾಕೆಯನ್ನು ಕಾಯಿಸಿ ನಡುವಿನ ಮೇಲೆ ಎರಡು ಬರೆ ಎಳೆಯುತ್ತಾರೆ. ಬರೆ ಹಾಕಿದ ಒಂದು ವಾರದೊಳಗೆ ಕುರಿ ಚೆನ್ನಾಗಿ ತಿರುಗಾಡುತ್ತದೆ.

ಕಾಲು ಕಟ್ಟುವುದು : ಕುರಿಗಳು ಬೆಟ್ಟ-ಗುಡ್ಡ ಹತ್ತಿ ಇಳಿಯುವಾಗ, ಕಾಲುವೆ ದಾಟುವಾಗ ಅಥವಾ ಬೆಳೆದುನಿಂತ ಬೆಳೆಗಳನ್ನು ಮೇಯಲು ಹೊಲ-ಗದ್ದೆಗಳಿಗೆ ಹೋದಾಗ, ಕುರಿಗಾರ ಅಥವಾ ಭೂಮಾಲಿಕ ಕಲ್ಲು ಅಥವಾ ಕಟ್ಟಿಗೆ ಎಸೆಯುವರು ಇತ್ಯಾದಿ ಸಂದರ್ಭಗಳಲ್ಲಿ ಕಾಲು ಮುರಿಯುವುದು ಸಾಮಾನ್ಯವಾಗಿದೆ. ಮುರಿದ ಕಾಲು ಕಟ್ಟಿಕೊಳ್ಳುವಂತೆ ಮಾಡಲು ಅಲೆಮಾರಿ ಕುರುಬನು ಕುರಿಯ ಹಸೆಹಿಕ್ಕೆ ಮತ್ತು ಕುರಿಯ ಹಾಲನ್ನು ಮಿಶ್ರಣ ಮಾಡಿ, ಬೆಂಕಿಯ ಮೇಲಿಟ್ಟು ಚೆನ್ನಾಗಿ ಬಿಸಿ ಮಾಡುತ್ತಾನೆ. ಬಿಸಿ ಇರುವಾಗಲೆ ಬಟ್ಟೆಯನ್ನು ಅದರಲ್ಲಿ ಒದ್ದೆ ಮಾಡಿ, ಉಳಿದಿದ್ದನ್ನು ಕಾಲು ಮುರಿದ ಭಾಗಕ್ಕೆ ಸವರುತ್ತಾನೆ. ನಂತರ ಕಾಲನ್ನು ಸರಿಯಾಗಿ ಜೋಡಿಸಿ ಹಸಿಜಾಲೆ ತೊಗಟೆ ಅಥವಾ ಬಿದಿರನ್ನು ಕಾಲಿಗಿಟ್ಟು ಒದ್ದೆಯಾಗಿರುವ ಬಟ್ಟೆಯಿಂದ ಸುತ್ತಿ ಕಟ್ಟುವರು. ಹೀಗೆ ಸುತ್ತಿದ್ದು ಬ್ಯಾಂಡೆಜ್ ತರಹ ಗಟ್ಟಿಯಾಗುವುದು. ಇದನ್ನು ಒಂದು ವಾರದ ನಂತರ ಮತ್ತೆ ಬಿಚ್ಚಿ ಕಟ್ಟುವರು. ಈ ರೀತಿಯಾಗಿ ವಾರಕ್ಕೊಮ್ಮೆಯಂತೆ ಎರಡು ಅಥವಾ ಮೂರು ಕಟ್ಟು ಕಟ್ಟುವುದರೊಳಗೆ ಮುರಿದ ಕಾಲು ಕಟ್ಟಿಕೊಳ್ಳುತ್ತದೆ.

ಕೊಂಬು ಮುರಿದಾಗ : ಮೇಕೆ, ಪೋತ ಅಥವಾ ಟಗರಿನ ಕೊಂಬು ಮುರಿದಾಗ ಕಾಡು ಕುಸುಬಿ ಗಿಡದ ತೊಗಟೆಯನ್ನು ಬೆಲ್ಲದಲ್ಲಿ ಚೆನ್ನಾಗಿ ಅರೆದು, ಕೊಂಬು ಕಳಚಿದ ಭಾಗದಲ್ಲಿ ಹಚ್ಚಿ ಬಟ್ಟೆಯನ್ನು ಕಟ್ಟುತ್ತಾರೆ. ಅದು ಅಂಟಿನಂತೆ ಹಿಡಿದಿರುತ್ತದೆ. ಜೊತೆಗೆ ಕ್ರಿಮಿಗಳೂ ಇದರಿಂದ ಸಾಯುತ್ತವೆ.

ಮಾನವರ ರೋಗರುಜಿನಗಳು ಮತ್ತು ಔಷಧೋಪಚಾರ

ಅಲೆಮಾರಿ ಕುರುಬರು ಸಣ್ಣ-ಪುಟ್ಟ ರೋಗ ರುಜಿನಗಳಿಗೆ ನಿಸರ್ಗದಲ್ಲಿ ದೊರೆಯುವ ಗಿಡಮೂಲಿಕೆಗಳನ್ನು ಬಳಸುತ್ತಾರೆ. ರೋಗ ಮತ್ತು ಗಿಡಮೂಲಿಕೆಗಳು ಈ ಕೆಳಗಿನಂತಿವೆ.

ಹೊಟ್ಟೆನೋವು : ವಿಳ್ಳದ ಎಲೆ ಮತ್ತು ಉಪ್ಪು ಎರಡನ್ನು ಮಿಶ್ರಣ ಮಾಡಿ ತಿಂದರೆ ಹೊಟ್ಟೆನೋವು ಕಡಿಮೆಯಾಗುತ್ತದೆ.

ಕಿವಿ ಸೋರುವಿಕೆ : ಜೀವಂತವಾಗಿರುವ ಚೇಳನ್ನು ಹಿಡಿದು ಅದರ ವಿಷದ ಕೊಂಡಿ ಮುರಿಯದೆ ಕುದಿಯುವ ಕೊಬ್ಬರಿ ಎಣ್ಣೆಯಲ್ಲಿ ಬಿಡಬೇಕು. ಸ್ವಲ್ಪ ಸಮಯದ ನಂತರ ಎಣ್ಣೆಯನ್ನು ಸೋಸಿ ತಣ್ಣಗಾದ ನಂತರ ಸೋರುವ ಕಿವಿಗೆ ನಾಲ್ಕು ಹನಿ ಬಿಡಬೇಕು. ಇದನ್ನು ದಿನಕ್ಕೆ ಎರಡು ಬಾರಿಯಂತೆ ಮೂರು ದಿನ ಈ ಕಾರ್ಯ ಮಾಡಿದರೆ ಮುಂದೆ ಯಾವತ್ತಿಗೂ ಕಿವಿ ಸೋರುವುದಿಲ್ಲ.

ಕೆಮ್ಮು : ವೀಳ್ಯದೆಲೆ, ಬೆಳ್ಳೊಳ್ಳಿ, ಉಪ್ಪು, ಅರಿಷಿಣ ಪುಡಿ ಇವೆಲ್ಲವನ್ನು ಮಿಶ್ರಣ ಮಾಡಿ, ಜಜ್ಜಿ ರಾತ್ರಿ ಮಲಗುವಾಗ ತಿಂದು ನೀರು ಕುಡಿಯದೆ ಮಲಗಬೇಕು. ಈ ರೀತಿ ಎರಡು ಮೂರು ದಿನ ಮಾಡಿದರೆ ಕೆಮ್ಮು ಕಡಿಮೆಯಾಗುವುದು.

ಸುಟ್ಟಗಾಯ : ದೇಹದ ಯಾವುದೇ ಭಾಗದಲ್ಲಿ ಬೆಂಕಿ ಬಿದ್ದು ಸುಟ್ಟಿದ್ದರೆ ಕಪ್ಪುಬಣ್ಣದ ಆಡಿನ ಕಿವಿಯ ಮುಂಭಾಗ ಕೊಯ್ದು ಬಂದ ರಕ್ತವನ್ನು ಸುಟ್ಟ ದೇಹದ ಭಾಗಕ್ಕೆ ಹಚ್ಚಿದರೆ ಬೇಗ ಕಡಿಮೆಯಾಗುತ್ತದೆ. ಜೊತೆಗೆ ಸುಟ್ಟಿರುವ ಕಲೆ ಇಲ್ಲದೆ ಗುಣವಾಗುತ್ತದೆ.

**ಕಿವಿನೋವು :** ಬಿಳಿ ಈರುಳ್ಳಿ ಜಜ್ಜಿ ಅದರ ರಸ ತೆಗೆದು ರಸದಲ್ಲಿ ಉಪ್ಪು ಮಿಶ್ರಣ ಮಾಡಿ ಕಿವಿಯಲ್ಲಿ ಎರಡು ಹನಿ ಬಿಡುವುದರಿಂದ ಕಿವಿ ನೋವು ಕಡಿಮೆಯಾಗುತ್ತದೆ.

**ಕಣ್ಣು ಉರುಪು :** ಬೆಳ್ಳೋಳ್ಳಿ ಚೆನ್ನಾಗಿ ಜಜ್ಜಿ, ಕುದಿಯುವ ಕೊಬ್ಬರಿ ಎಣ್ಣೆಯಲ್ಲಿ ಹಾಕಿ ಎಣ್ಣೆ ತಣ್ಣಗಾದ ನಂತರ ಸೋಸಿ ಕಣ್ಣಿನಲ್ಲಿ ಎರಡು ಹನಿ ಬಿಡಬೇಕು ಇದರಿಂದ ಕಣ್ಣಿನ ಉರುಪು ಕಡಿಮೆಯಾಗುತ್ತದೆ.

# ೬

# ಒಳಾಡಳಿತ ವ್ಯವಸ್ಥೆ

## ಕುಲ ಪಂಚಾಯ್ತಿ

ಅಲೆಮಾರಿ ಕುರುಬ ಸಮುದಾಯವು ತಮ್ಮದೆಯಾದಂತಹ ಕುಲಪಂಚಾಯ್ತಿ ವ್ಯವಸ್ಥೆಯನ್ನು ಹೊಂದಿರುವುದು ಕ್ಷೇತ್ರಕಾರ್ಯದಿಂದ ತಿಳಿದುಬಂದಿದೆ. ತಮ್ಮ ಸಮುದಾಯದಲ್ಲಿ ಸಂಭವಿಸುವ ಯಾವುದೇ ಜಗಳ, ಹಿಂಸೆ, ಅತ್ಯಾಚಾರ, ಭಿನ್ನಾಭಿಪ್ರಾಯ ಮೊದಲಾದವನ್ನು ಹೊರಬಿಡದೆ ತಮ್ಮೊಳಗೆ ಬಗೆಹರಿಸಿಕೊಳ್ಳಲು ಇಷ್ಟಪಡುತ್ತಾರೆ. ಇವರು ತಮ್ಮ ಸಮುದಾಯದೊಳಗೆ ಶಾಂತಿ ಮತ್ತು ಸುವ್ಯವಸ್ಥೆ ಯನ್ನು ಕಾಯ್ದುಕೊಳ್ಳಲು ಮತ್ತು ಮುಂದುವರಿಸಿಕೊಂಡು ಹೋಗಲು ಒಂದು ಕುಲಪಂಚಾಯ್ತಿ ವ್ಯವಸ್ಥೆ ಹೊಂದಿದ್ದಾರೆ. ಈ ವ್ಯವಸ್ಥೆಯನ್ನು ದೈವಪಂಚಾಯ್ತಿ ಅಥವಾ ಕುಲಪಂಚಾಯ್ತಿ ಎಂದು ಕರೆಯುತ್ತಾರೆ. ಕುಲ ಅಥವಾ ಜಾತಿ ಪಂಚಾಯ್ತಿಗಳ ಸದಸ್ಯರನ್ನು ಹಿರಿಯರು, ದೈವದವರು ಅಥವಾ ಪಂಚರು ಎಂದು ಕರೆಯುವುದು ರೂಢಿಯಲ್ಲಿದೆ. ಈ ಸಮುದಾಯದಲ್ಲಿ ಕುಲಪಂಚಾಯ್ತಿಯ ಸದಸ್ಯರನ್ನು ಅನುಭವದ ಆಧಾರದ ಮೇಲೆ ಆಯ್ಕೆ ಮಾಡಲಾಗುತ್ತದೆ.

## ವಿವಾದದ ಬಗೆಗಳು ಮತ್ತು ನ್ಯಾಯ ನಿರ್ಣಯ

ಅಲೆಮಾರಿ ಕುರುಬರ ವಿವಾದಗಳು ಮೂರು ರೀತಿಗಳಾಗಿದ್ದು ಅವನ್ನು ಎರಡು ಸ್ಥಳಗಳಲ್ಲಿ ಬಗೆಹರಿಸಿಕೊಳ್ಳುವುದನ್ನು ಕಾಣುತ್ತೇವೆ.

೧. **ವ್ಯವಹಾರಿಕ ಆಸ್ತಿಪಾಸ್ತಿ ವಿವಾದಗಳು :** ವೃತ್ತಿ ಸಂಪತ್ತಾದ ಕುರಿ-ಮೇಕೆ, ಅಲ್ಪಸ್ವಲ್ಪ ಇರುವ ಭೂಮಿ, ಮನೆ ಹಾಗೂ ಇನ್ನಿತರ ಆಸ್ತಿ-ಪಾಸ್ತಿಗಳನ್ನು ಅಣ್ಣ-ತಮ್ಮಂದಿರು ಅಥವಾ ಬಂಧು-ಬಳಗದವರಲ್ಲಿ ಹಂಚಿಕೊಳ್ಳುವಾಗ ಉದ್ಭವಿಸುವ ತಂಟೆ ತಕರಾರುಗಳು.

೨. **ದಂಡರೂಪದ ವಿವಾದಗಳು :** ಇವರಲ್ಲಿ ಕುರಿ-ಮೇಕೆಗಳನ್ನು ಕಳ್ಳತನದಿಂದ ಮಾರಾಟ ಮಾಡುವುದು, ಸುಲಿಗೆ, ಜಗಳ, ಹೊಡೆದಾಟ, ವ್ಯಭಿಚಾರ ಮುಂತಾದ ವಿವಾದಗಳು.

೩. **ಸಮುದಾಯದ ಅಂತರಿಕ ವಿವಾದಗಳು :** ದೈವದ ಗುಡಿ ನಿರ್ಮಾಣ, ಪೂಜೆ, ಹಬ್ಬ-ಹರಿದಿನಗಳ ಆಚರಣೆ, ಜಾತ್ರೆ, ಉತ್ಸವ, ಪಟ್ಟಿ-ಪಾವತಿಗಳ ಸಂಗ್ರಹ ಇತ್ಯಾದಿ ಅಂಶಗಳಿಗೆ ಸಂಬಂಧಿಸಿದ ವಿವಾದಗಳು.

ಈ ಮೇಲಿನ ವಿವಾದಗಳಿಗೆ ಸಂಬಂಧಿಸಿದಂತೆ ನ್ಯಾಯಪಂಚಾಯ್ತಿ ಮಾಡಲು ಅಥವಾ ವಿವಾದಗಳನ್ನು ಬಗೆಹರಿಸಿಕೊಳ್ಳಲು ಆಧುನಿಕ ಕಾಲದಲ್ಲಿ ಅನೇಕ ವಿಧಿವಿಧಾನಗಳು ಬಂದಿದ್ದರೂ ಬುಡಕಟ್ಟು ಮಾದರಿಯ ಪಂಚರ ನ್ಯಾಯ ತೀರ್ಮಾನ ಅಲೆಮಾರಿ ಕುರುಬರಲ್ಲಿ ಇನ್ನೂ ಜೀವಂತವಾಗಿದೆ. ಈ ನ್ಯಾಯ ತೀರ್ಮಾನವನ್ನು ಎರಡು ಸ್ಥಳಗಳಲ್ಲಿ ಬಗೆಹರಿಸಿ ಕೊಳ್ಳುತ್ತಾರೆ. ಒಂದು ಅಲೆದಾಡುವ ಸ್ಥಳಗಳಲ್ಲಿ ನಡೆಸಿದರೆ ಮತ್ತೊಂದು ಕುಲದೇವರ ಗುಡಿಗಳಲ್ಲಿ ನಡೆಸುತ್ತಾರೆ.

**ಅಲೆದಾಡುವ ಸ್ಥಳಗಳಲ್ಲಿ**

ಕುರಿ ತಪ್ಪುವಿಕೆ ಮೊದಲಾದ ಸಣ್ಣಪುಟ್ಟ ವಿವಾದ ಹುಟ್ಟಿ ಎರಡು ಕುಟುಂಬಗಳ ನಡುವೆ ಜಗಳವಾಡಿರುವುದು, ಅಣ್ಣ-ತಮ್ಮಂದಿರು ವೈಮನಸ್ಸು ಮಾಡಿಕೊಂಡಿರುವುದು, ಗಂಡ-ಹೆಂಡತಿ ಜಗಳ ಮಾಡಿಕೊಂಡು ಹೆಂಡತಿ ತವರು ಮನೆಗೆ ಹೋಗಿರುವುದು ಮುಂತಾದ ವಿವಾದಗಳನ್ನು ತಾವು ಅಲೆದಾಡುವ ಸ್ಥಳಗಳಲ್ಲಿಯೆ ಬಗೆಹರಿಸಿಕೊಳ್ಳುತ್ತಾರೆ. ತಮ್ಮ ಸಮಸ್ಯೆಯನ್ನು ಸಮುದಾಯದ ಹಿರಿಯರ ಗಮನಕ್ಕೆ ತರುತ್ತಾರೆ. ಸಮುದಾಯದ ಹಿರಿಯರು ತಮಗೆ ಅನುಕೂಲವೆನಿಸಿದ ಗುಡಾರ ಹೂಡಿದ ಸ್ಥಳಕ್ಕೆ ವಾದಿ ಮತ್ತು ಪ್ರತಿವಾದಿ ಹಾಗೂ ಸಾಕ್ಷಿ ದಾರರನ್ನು ಬರ ಹೇಳುತ್ತಾರೆ. ಇಬ್ಬರ ವಾದವನ್ನು ಮತ್ತು ಸಾಕ್ಷಿದಾರರ ಮಾತನ್ನು ಆಲಿಸಿ ಇಬ್ಬರಿಗೂ ತಿಳಿಮಾತು ಹೇಳಿ ವಿವಾದವನ್ನು ಬಗೆಹರಿಸುತ್ತಾರೆ. ಒಂದು ವೇಳೆ ಈ ತಿಳಿಮಾತು ಗಳನ್ನು ಒಪ್ಪಿ ನಡೆದುಕೊಳ್ಳದಿದ್ದರೆ ಮತ್ತೊಂದು ದಿನ ವಾದಿ-ಪ್ರತಿವಾದಿ ಹಾಗೂ ಸಾಕ್ಷಿದಾರ ರನ್ನು ಕರೆಯಿಸಿ ಹೆಗಲ ಮೇಲೆ ಕರೆಕಂಬಳಿ ಹಾಕಿ ಕೈಗೆ ಬೀರದೇವರ (ಕುಲದೇವರ) ಭಂಡಾರ ಕೊಟ್ಟು, ಬೀರದೇವರ ಮೇಲೆ ಆಣೆ ಮಾಡಿಸಿ ತಮ್ಮ ವಾದವನ್ನು ಮಂಡಿಸಲು ಹೇಳುತ್ತಾರೆ. ಈ ವೇಳೆಯಲ್ಲಿ (ಇಂತಹ ಸ್ಥಿತಿಯಲ್ಲಿ) ವಾದಿ ಮತ್ತು ಪ್ರತಿವಾದಿ ಹಾಗೂ ಸಾಕ್ಷಿದಾರರು ಭಂಡಾರ ಮತ್ತು ಕಂಬಳಿಗೆ ಹೆದರಿ ಸತ್ಯವನ್ನೇ ನುಡಿಯುತ್ತಾರೆ. ಇದರ ಆಧಾರದ ಮೇಲೆ ಸಮುದಾಯದ ಹಿರಿಯರು ನ್ಯಾಯ ತೀರ್ಮಾನ ಮಾಡುತ್ತಾರೆ. ಒಂದು ವೇಳೆ ಅಲ್ಲಿಗೂ ಸುಳ್ಳು ನುಡಿದರೆ ಬೀರದೇವರು ನೋಡಿಕೊಳ್ಳುತ್ತಾನೆಂದು ಬಿಟ್ಟು ಬಿಡುತ್ತಾರೆ.

**ಕುಲದೇವರ ಗುಡಿಗಳಲ್ಲಿ**

ಅಲೆಮಾರಿ ಕುರುಬರ ಕೆಲವು ವಿವಾದಗಳು ಕಠಿಣ ಸ್ವರೂಪದ್ದಾಗಿರುತ್ತವೆ. ಅವನ್ನು ಕುಲದೇವರ ಗುಡಿಗಳಲ್ಲೆ ಬಗೆಹರಿಸಿಕೊಳ್ಳುತ್ತಾರೆ. ಉದಾಹರಣೆಗೆ ಕುರಿಗಳನ್ನು ಕಳ್ಳತನ ಮಾಡಿ ಮಾರಾಟ ಮಾಡಿರುವುದು, ದೈವಾಚರಣೆ, ಜಾತ್ರೆ-ಉತ್ಸವಗಳು, ಅತ್ಯಾಚಾರ, ಹಬ್ಬ-ಹರಿದಿನಗಳು, ಕುಲದೇವರ ಆಸ್ತಿ ಮತ್ತು ಪೂಜೆ ಇತ್ಯಾದಿ ಅಂಶಗಳಿಗೆ ಸಂಬಂಧಿಸಿರುತ್ತವೆ. ಇಂಥವನ್ನು ದೇವರ ಗುಡಿಯಲ್ಲಿ ಬಗೆಹರಿಸಿಕೊಳ್ಳುತ್ತಾರೆ. ಬೀರದೇವರ ಗುಡಿಯೊಳಗೆ ಎಲ್ಲರಿಗೂ ಪ್ರವೇಶವಿರುತ್ತದೆ. ಅಲ್ಲಿ ನಡೆಯುವ ಚರ್ಚೆಯಲ್ಲಿ ಸಮುದಾಯದ ಸಮಸ್ತರು ಭಾಗವಹಿಸಬಹುದು. ನ್ಯಾಯ ನಿರ್ಣಯ ನೀಡುವ ಪಂಚರು ಸಮುದಾಯದ ಹಿರಿಯ ರಾಗಿದ್ದು ಅನುಭವಸ್ಥರಾಗಿರುತ್ತಾರೆ ಹಾಗೂ ಇವರು ಸಮುದಾಯದ ಭಾಗವೇ

ಆಗಿರುವುದರಿಂದ ಸಮುದಾಯದಲ್ಲಿನ ತಂಟೆ-ತಕರಾರುಗಳನ್ನು ಹಾಗೂ ವಾದಿ-ಪ್ರತಿವಾದಿಯ ಚಲನ-ವಲನಗಳನ್ನು ಅತ್ಯಂತ ಸೂಕ್ಷ್ಮವಾಗಿ ಆಲಿಸುವಷ್ಟು ಜ್ಞಾನಿಗಳಾಗಿರುತ್ತಾರೆ. ಗುಡಿಯೊಳಗೆ ಕುಳಿತ ಪಂಚರು ವಾದಿ-ಪ್ರತಿವಾದಿಗಳಿಗೆ ನ್ಯಾಯಲಯಗಳಲ್ಲಿ ಭಗವದ್ಗೀತೆಯ ಮೇಲೆ ಕಕ್ಷಿದಾರರು ಸುಳ್ಳು ಹೇಳುವುದಿಲ್ಲ ಎಂದು ಪ್ರಮಾಣೀಕರಿಸಿದಂತೆ, ಗುಡಿಯೊಳಗೆ ಕುಳಿತು ಸಮುದಾಯದ ಪಂಚರು ವಾದಿ-ಪ್ರತಿವಾದಿಗಳಿಗೆ ಹಣೆಗೆ ಭಂಡಾರ ಹಚ್ಚಿ, ಹೆಗಲ ಮೇಲೆ ಕಂಬಳಿ ಹಾಕಿ, ಬೀರದೇವರ ಸಾಕ್ಷಿಯಾಗಿ ಸುಳ್ಳು ಹೇಳುವುದಿಲ್ಲವೆಂದು ಪ್ರಮಾಣ ಮಾಡಿಸಿ, ತಮಗಾದ ಅನ್ಯಾಯವನ್ನು ವಿಶ್ಲೇಷಿಸಲು ಅನುವು ಮಾಡಿಕೊಡುವರು. ಇಂತಹ ಸ್ಥಳದಲ್ಲಿ ತಾವು ಸುಳ್ಳು ಹೇಳಬಾರದು, ಹೇಳಿದರೆ ದೇವರು ತಮಗೆ ತೊಂದರೆ ಕೊಡುತ್ತಾನೆ ಎಂಬ ಭಯವು ಇಂದಿಗೂ ರೂಢಿಯಲ್ಲಿ ರುವುದರಿಂದ ಸತ್ಯವನ್ನೇ ಹೇಳುತ್ತಾರೆ. ಪಂಚರು ವಾದಿ-ಪ್ರತಿವಾದಿಯ ವಾದವನ್ನು ಅತ್ಯಂತ ಸೂಕ್ಷ್ಮ ವಾಗಿ ಆಲಿಸಿ, ಸರಿ-ತಪ್ಪುಗಳನ್ನು ಸರಿಯಾದ ಸಾಕ್ಷ್ಯಾಧಾರಗಳೊಂದಿಗೆ ಪರೀಶಿಲಿಸಿ ನ್ಯಾಯ ತೀರ್ಮಾನ ಮಾಡುತ್ತಾರೆ. ಒಮ್ಮೆ ದೈವದವರಿಂದ ತೀರ್ಪು ಹೊರಬಿದ್ದ ಮೇಲೆ ಪ್ರಶ್ನಿಸುವಂತಿಲ್ಲ ಹಾಗೂ ಯಾವುದೇ ಕಾರಣಕ್ಕೂ ಉಲ್ಲಂಘಿಸುವಂತಿಲ್ಲ.

ಶಿಕ್ಷೆ ಅಥವಾ ದಂಡ

ಅಲೆಮಾರಿ ಕುರುಬರಲ್ಲಿ ಅಪರಾಧಿಗಳಿಗೆ ಸಮುದಾಯದ ಒಳಾಡಳಿತ ವ್ಯವಸ್ಥೆಯನುಸಾರ ನಾನಾ ಬಗೆಯ ದಂಡ ಹಾಗೂ ಶಿಕ್ಷಾ ಪದ್ಧತಿಗಳಿವೆ. ದಂಡ ಮತ್ತು ಶಿಕ್ಷೆಗಳಿಂದಾಗಿ ಸಮುದಾಯದಲ್ಲಿನ ದುಷ್ಟ ಹಾಗೂ ದುರ್ನಡತೆಯ ವ್ಯಕ್ತಿಗಳನ್ನು ನಿಯಂತ್ರಣದಲ್ಲಿಟ್ಟು ಕೊಳ್ಳಲು ಸಾಧ್ಯವಾಗುತ್ತದೆ. ಇವರಲ್ಲಿ ರೂಢಿಯಲ್ಲಿರುವ ಬಹುಕಠಿಣ ಶಿಕ್ಷೆ ಎಂದರೆ ಬಹಿಷ್ಕಾರ. ಸಮುದಾಯದ ಕಟ್ಟಳೆಗಳನ್ನು ಮೀರಿ ನಡೆದವರನ್ನು ಕುಲದಿಂದ ಹೊರಹಾಕ ಲಾಗುವುದು. ಹೀಗೆ ಬಹಿಷ್ಕೃತರಾದವರು ಮದುವೆ, ಮುಂಜಿ, ಹಬ್ಬ-ಹರಿದಿನಗಳಲ್ಲಿ ಪಾಲ್ಗೊಳ್ಳುವಂತಿಲ್ಲ. ಅಷ್ಟೇ ಅಲ್ಲದೆ ಸಮುದಾಯದಿಂದ ಹೊರಗುಳಿದು ಎಲ್ಲರ ಪ್ರೀತಿ, ವಿಶ್ವಾಸಗಳನ್ನು ಕಳೆದುಕೊಳ್ಳಬೇಕಾಗುತ್ತದೆ. ಆದ್ದರಿಂದ ಸಮುದಾಯದಲ್ಲಿನ ಪ್ರತಿಯೊಬ್ಬರು ನ್ಯಾಯಕ್ಕೆ ತಲೆಬಾಗಿ ನಡೆದುಕೊಳ್ಳುತ್ತಾರೆ. ಇವರಲ್ಲಿ ವಿವಿಧ ಅಪರಾಧಗಳಿಗೆ ಬೇರೆ ಬೇರೆ ಶಿಕ್ಷೆಗಳನ್ನು ವಿಧಿಸುವುದು ರೂಢಿಯಲ್ಲಿದೆ. ಅಪರಾಧಗಳು ಮತ್ತು ಅವುಗಳಿಗೆ ಸಂಬಂಧಿಸಿ ದಂತೆ ವಿಧಿಸುವ ಶಿಕ್ಷೆಗಳು ಕೆಳಗಿನಂತಿವೆ.

- ಸಮುದಾಯದ ವ್ಯಕ್ತಿ ತನ್ನ ಸಮುದಾಯದ ಬೇರೊಬ್ಬರ ಕುರಿಗಳನ್ನು ಕಳ್ಳತನ ಮಾಡಿ ಮಾರಾಟ ಮಾಡಿದ್ದರೆ ೧:೪ ಪ್ರಮಾಣದಲ್ಲಿ ಕುರಿಗಳನ್ನು ಹಿಂದಿರುಗಿಸಬೇಕು.
- ಅಲೆಮಾರಿ ಕುರುಬ ಸಮುದಾಯದ ಹೆಣ್ಣುಮಗಳು ಅನ್ಯ ಸಮುದಾಯದವರನ್ನು ಕೂಡಿದರೆ ಆಕೆಯನ್ನು ಸಮುದಾಯದಿಂದ ಹೊರಹಾಕುವರು.
- ತಮ್ಮ ಸಮುದಾಯದಲ್ಲಿನ ಅವಿವಾಹಿತ ಯುವಕ-ಯುವತಿ ಪ್ರೀತಿ ಮಾಡಿ, ಓಡಿ ಹೋಗಿ ಮದುವೆ ಮಾಡಿಕೊಂಡು ಪುನಃ ಸಮುದಾಯಕ್ಕೆ ಬಂದಾಗ ಅವರನ್ನು ಪಂಚಾಯ್ತಿಗೆ ಸೇರಿಸಿ ಕುಲ ಸಂಪ್ರದಾಯನುಸಾರ ಮತ್ತೊಮ್ಮೆ ಮದುವೆ ಮಾಡಿಸಲಾಗುತ್ತದೆ.

- ವಿವಾಹಿತ ಮಹಿಳೆ ತನ್ನ ಗಂಡನನ್ನು ಬಿಟ್ಟು ಬೇರೆ ಜಾತಿಯ ವ್ಯಕ್ತಿಯೊಂದಿಗೆ ಅನೈತಿಕ ಸಂಬಂಧವಿಟ್ಟುಕೊಂಡಿದ್ದರೆ ಆವಳನ್ನು ಶಾಶ್ವತವಾಗಿ ಕುಲದಿಂದ ಬಹಿಷ್ಕರಿಸಲಾಗುತ್ತದೆ.
- ಸಮುದಾಯದಲ್ಲಿನ ಸ್ತ್ರೀ ಅಥವಾ ಪುರುಷ ಅನಾದಿಕಾಲದಿಂದ ಬಂದ ಸಂಪ್ರದಾಯಗಳು, ಮೌಲ್ಯಗಳು, ರೀತಿ-ರಿವಾಜುಗಳನ್ನು ಮುರಿಯುವಂತಹ ಕ್ರಿಯೆಗಳಲ್ಲಿ ತೊಡಗಿದಾಗ ಇಲ್ಲವೇ ಸಮುದಾಯದಲ್ಲಿನ ಇತರರಿಗೆ ಆಘಾತಕಾರಿಯಾಗುವಂತಹ ನೋವುಂಟು ಮಾಡಿದಾಗ ಕುಲ ಬಹಿಷ್ಕಾರ ಹಾಕಲಾಗುತ್ತದೆ.
- ಒಂದೇ ಬೆಡಗಿಗೆ ಸೇರಿದ ಗಂಡು-ಹೆಣ್ಣುಗಳು ಪರಸ್ಪರ ಒಪ್ಪಿಗೆಯಿಂದ ಮದುವೆಯಾಗ ಬಯಸಿದರೆ ಪ್ರಾಯಶ್ಚಿತ ವಿಧಿಗೆ ಗುರಿಯಾಗಬೇಕಾಗುತ್ತದೆ. ಸಮುದಾಯದ ಹಿರಿಯರೊಡನೆ ನದಿಗೆ ಹೋಗಿ ಸ್ನಾನಮಾಡಿ ಕುಲದೇವರ ಗುಡಿಗೆ ಬಂದು ಪೂಜೆ ಸಲ್ಲಿಸಬೇಕು.

ಅಲೆಮಾರಿ ಕುರುಬರ ಕುಲಪಂಚಾಯ್ತಿ ಬಹುಹಿಂದಿನ ಕಾಲದಿಂದಲೂ ತಮ್ಮ ಪೂರ್ವಿಕರು ಹಾಕಿಕೊಟ್ಟ ನಿಯಮ ಕಟ್ಟಳೆಗಳನ್ನು ಅನುಸರಿಸುತ್ತಾ ಅನೋನ್ಯವಾಗಿ ಬದುಕು ನಡೆಸುತ್ತಾ ಬಂದಿದೆ. ಸಾಕಷ್ಟು ವಿವೇಚನಶೀಲರಾದ ಇವರಲ್ಲಿ ಪ್ರಜಾತಂತ್ರ ಹಾಗೂ ಲೋಕಜ್ಞಾನ ಪರಂಪರಾಗತವಾಗಿ ಸಾಗಿ ಬಂದಿರುವುದು ಗಮನಾರ್ಹವಾಗಿದೆ. ಇಷ್ಟೇ ಅಲ್ಲದೆ ಇಡೀ ಸಮುದಾಯದ ಜೀವನವನ್ನು ನಿಯಂತ್ರಿಸುವ ಹಾಗೂ ಬೇರೆ ಸಮುದಾಯಗಳ ಪ್ರಭಾವ ಎಷ್ಟೇ ಆಗಿದ್ದರೂ ಹಳೆಯ ಬುಡಕಟ್ಟು ಕುಲಪಂಚಾಯ್ತಿ ಯಥಾಸ್ಥಿತಿಯಲ್ಲಿ ಮುಂದುವರಿ ಯುತ್ತಿರುವುದು, ಸಮುದಾಯದವರೆ ನ್ಯಾಯ ತೀರ್ಮಾನ ಮಾಡುವುದು ಇವರ ಅನನ್ಯತೆ ಯನ್ನು ಎತ್ತಿ ತೋರಿಸುತ್ತದೆ.

# ೨

# ಆರ್ಥಿಕ ಜೀವನ

ಮಾನವ ಆರಂಭದ ದಿನಗಳಲ್ಲಿ ಪ್ರಾಣಿ ಪಕ್ಷಿಗಳನ್ನು ಬೇಟೆಯಾಡಿ ಜೀವನ ಸಾಗಿಸುವುದರ ಜೊತೆಗೆ ಭೂಮಿಯಲ್ಲಿ ದೊರೆಯುವ ಗಡ್ಡೆ-ಗೆಣಸು, ಹಣ್ಣು-ಹಂಪಲುಗಳನ್ನು ತಿಂದು ಜೀವಿಸುತ್ತಿದ್ದ. ಅವನ ಬೌದ್ಧಿಕಮಟ್ಟ ಬೆಳೆದಂತೆಲ್ಲಾ ಬೇಟೆಯಾಡುವುದನ್ನು ಬಿಟ್ಟು ಸಾಧು ಹಾಗೂ ಸೌಮ್ಯ ಪ್ರಾಣಿಗಳನ್ನು ಪಳಗಿಸಿ, ಸಾಕಿ-ಸಲುಹಿ ಅವುಗಳಿಂದ ದೊರೆಯುವ ಉತ್ಪನ್ನಗಳಿಂದ ಜೀವಿಸತೊಡಗಿದ. ನಂತರ ಭೂಮಿಯ ಮಹತ್ವವನ್ನು ಅರಿತ ಮಾನವ, ಉಳುಮೆ ಮಾಡಿ ಆಹಾರ ಧಾನ್ಯಗಳನ್ನು ಬೆಳೆಯುವುದನ್ನು ಕಲಿತ. ಅವನ ಬೌದ್ಧಿಕಮಟ್ಟ ಮತ್ತಷ್ಟು ವಿಕಾಸವಾದಂತೆಲ್ಲಾ, ಕೈಗಾರಿಕೆ ಮತ್ತು ಸೇವಾ ವಲಯಗಳಲ್ಲಿ ತನ್ನನ್ನು ತೊಡಗಿಸಿಕೊಂಡು ಮೂಲಭೂತ ಸೌಕರ್ಯಗಳಾದ ಸಾರಿಗೆ-ಸಂಪರ್ಕ, ಶಿಕ್ಷಣ, ಆರೋಗ್ಯ ಮತ್ತು ನೈರ್ಮಲ್ಯ, ವಸತಿ, ಕುಡಿಯುವ ನೀರು ಇತ್ಯಾದಿ ಸೌಲಭ್ಯಗಳನ್ನು ಪಡೆದು ನಾಗರಿಕನಾಗಿ ಜೀವನ ಸಾಗಿಸ ತೊಡಗಿದ್ದಾನೆ. ಆರಂಭದ ದಿನಗಳಿಂದ ಆಧುನಿಕವರೆಗಿನ ದಿನಗಳನ್ನು ಆಧಾರವಾಗಿಟ್ಟುಕೊಂಡು ಮಾನವನ ಜೀವನ ಸಾಗಿಬಂದಿರುವ ಕ್ರಮವನ್ನು ಕೃಷಿ (ಪ್ರಾಥಮಿಕ) ವಲಯ, ಕೈಗಾರಿಕಾ (ದ್ವಿತೀಯ) ವಲಯ ಮತ್ತು ಸೇವಾ (ತೃತೀಯ) ವಲಯಗಳಾಗಿ ವಿಂಗಡಿಸಲಾಗುವುದು. ಈ ಮೂರು ವಲಯಗಳನ್ನು ಗಣನೆಗೆ ತೆಗೆದು ಕೊಂಡಾಗ ಯಾವ ರಾಷ್ಟ್ರಗಳು ಕೈಗಾರಿಕೆ ಮತ್ತು ಸೇವಾ ವಲಯದಲ್ಲಿ ಹೆಚ್ಚು ತೊಡಗಿಸಿ ಕೊಂಡಿವೆಯೋ ಆ ರಾಷ್ಟ್ರಗಳ ರಾಷ್ಟ್ರೀಯ ಉತ್ಪನ್ನ ಮತ್ತು ನೈಜ ತಲಾ ಆದಾಯ ಅಧಿಕವಿದ್ದು ಮುಂದುವರೆದ ಆರ್ಥಿಕತೆ ಎನಿಸಿಕೊಂಡಿವೆ. ಬಹಳಷ್ಟು ಜನರು ಪ್ರಾಥಮಿಕ ವಲಯವಾದ ಕೃಷಿ ಹಾಗೂ ಪಶುಪಾಲನಾ ಚಟುವಟಿಕೆಗಳಲ್ಲಿ ನಿರತರಾಗಿದ್ದರೆ. ಆ ದೇಶದ ರಾಷ್ಟ್ರೀಯ ವರಮಾನ ಮತ್ತು ನೈಜ ತಲಾ ವರಮಾನ ಕಡಿಮೆ ಇದ್ದು ಹಿಂದುಳಿದ ಆರ್ಥಿಕತೆಗಳೆನಿಸಿ ಕೊಂಡಿವೆ. "೨೦೦೧ರ ಅಂಕಿ-ಸಂಖ್ಯೆಗಳ ಪ್ರಕಾರ ಭಾರತದ ಆರ್ಥಿಕತೆಯ ವಿವಿಧ ವೃತ್ತಿಗಳಲ್ಲಿ ತೊಡಗಿಸಿಕೊಂಡವರ ಪ್ರಮಾಣವು ಪ್ರಾಥಮಿಕ ವಲಯದಲ್ಲಿ ಶೇ. ೬೩, ದ್ವಿತೀಯ ವಲಯದಲ್ಲಿ ಶೇ. ೧೪, ತೃತೀಯ ವಲಯದಲ್ಲಿ ಶೇ. ೨೩ರಷ್ಟು ಇದ್ದಾರೆ" (ಎಚ್ಚಾರ್ಕೆ: ೨೦೦೩: ೨೫). ಈ ಹಿನ್ನೆಲೆಯಲ್ಲಿ ನೋಡಿದಾಗ ಭಾರತವು ಅನಭಿವೃದ್ಧಿ ಅಥವಾ ಹಿಂದುಳಿದ ಆರ್ಥಿಕತೆಯೆಂದು ತಿಳಿದುಬರುತ್ತದೆ.

ಪ್ರಾಥಮಿಕ ವಲಯವು ಭೂ ಸಾಗುವಳಿದಾರರು, ಕೃಷಿ-ಕಾರ್ಮಿಕರು, ಪಶುಸಂಗೋಪನೆ, ಅರಣ್ಯ ಗಾರಿಕೆ, ಮೀನುಗಾರಿಕೆ, ಬೇಟೆಗಾರಿಕೆ ಇತ್ಯಾದಿ ವೃತ್ತಿಗಳಲ್ಲಿ ನಿರತರಾದ ಜನರನ್ನು ಒಳಗೊಂಡಿದೆ. ಸ್ವಾತಂತ್ರ್ಯ ನಂತರದ ದಿನಗಳಲ್ಲಿ ಈ ವಲಯದಲ್ಲಿ ತೊಡಗಿಸಿಕೊಂಡವರ ಶೇಕಡವಾರು ಪ್ರಮಾಣ ಇಳಿಮುಖವಾಗುತ್ತಿದೆ. ಅದನ್ನು ಈ ಕೆಳಗಿನ ಕೋಷ್ಟಕದಿಂದ ಗಮನಿಸಿಬಹುದು.

ಕೋಷ್ಟಕ ೭.೧ ಕೃಷಿವಲಯದಲ್ಲಿಯ ವೃತ್ತಿಗನುಸಾರ ಶೇಕಡವಾರು ಹಂಚಿಕೆ

| ವರ್ಷಗಳು | ೧೯೫೧ | ೧೯೬೧ | ೧೯೭೧ | ೧೯೮೧ | ೧೯೯೧ | ೨೦೦೧ |
|---|---|---|---|---|---|---|
| ಕೃಷಿವಲಯ [೧ + ೨ + ೩] | ೭೨.೧ | ೭೧.೮ | ೭೨.೧ | ೬೮.೮ | ೬೬.೮ | ೬೩ |
| ೧. ಭೂ ಸಾಗು ವಳಿದಾರರು | ೫೦.೦ | ೫೨.೮ | ೪೩.೪ | ೪೧.೬ | ೩೮.೪ | -- |
| ೨. ಕೃಷಿಕಾರ್ಮಿಕರು | ೧೯.೭ | ೧೬.೭ | ೨೬.೩ | ೨೪.೯ | ೨೬.೫ | -- |
| ೩. ಪಶುಪಾಲನೆ, ಅರಣ್ಯಗಾರಿಕೆ, ಮೀನುಗಾರಿಕೆ, ಬೇಟೆಗಾರಿಕೆ, ತೋಟಗಾರಿಕೆ | ೨.೪೨.೩ | ೨.೪ | ೨.೩ | ೧.೯ | -- | |

***(Ruddar-Dutt & KPM Sundharam:2001:78)***

ಪಶುಪಾಲನೆ, ಅರಣ್ಯಗಾರಿಕೆ ಮೀನುಗಾರಿಕೆ ಇತ್ಯಾದಿ ಆರ್ಥಿಕ ಚಟುವಟಿಕೆಯಲ್ಲಿ ತೊಡಗಿಸಿಕೊಂಡ ಅಥವಾ ಅವಲಂಬಿಸಿದ ಜನರ ಪ್ರಮಾಣವು ೧೯೫೧ರಲ್ಲಿ ಶೇ. ೨.೪ ರಷ್ಟಿದ್ದರೆ, ೨೦೦೧ರ ವೇಳೆಗೆ ಶೇ. ೧.೭ಕ್ಕೆ ಇಳಿದಿದೆ ಎಂದು ಮೇಲಿನ ಕೋಷ್ಟಕದಿಂದ ತಿಳಿದುಬರುತ್ತದೆ. ಈ ವೃತ್ತಿಗಳಲ್ಲಿ ತೊಡಗಿಸಿಕೊಂಡ ಜನರು ಹೆಚ್ಚಾಗಿ ಅಲೆಮಾರಿ ಹಾಗೂ ಅರೆ-ಅಲೆಮಾರಿ ಸಮುದಾಯಗಳಿದ್ದು ಅನಾದಿಕಾಲದಿಂದಲೂ ಜೀವನಾಧಾರ ಉದ್ಯೋಗ ವನ್ನಾಗಿ ಮುಂದುವರಿಸಿಕೊಂಡು ಬಂದಿದ್ದಾರೆ. ಇವುಗಳಲ್ಲಿ ಪಶುಪಾಲನೆಯೂ ವಿಶೇಷವಾಗಿ ಕುರಿ ಸಂಗೋಪನೆಯು ಪ್ರಮುಖ ಉದ್ಯೋಗವಾಗಿದೆ. ಕಾಡು ಪ್ರಾಣಿಗಳನ್ನು ಪಳಗಿಸಿದ ಇತಿಹಾಸದಲ್ಲಿ ಕುರಿ ಮೊದಲ ಪ್ರಾಣಿಯಾಗಿದೆ. ಈ ಪ್ರಾಣಿಯನ್ನು ಅನಾದಿಕಾಲದಿಂದ ಸಾಕಿ-ಸಲುಹಿ ಅದರ ವಂಶಾವಳಿಯನ್ನು ಅಭಿವೃದ್ಧಿ ಪಡಿಸಿ ತಾನು ಬದುಕುವುದರ ಜೊತೆಗೆ ಅದರ ಉಪ-ಉತ್ಪನ್ನಗಳಾದ ಉಣ್ಣೆ, ಚರ್ಮ ಮತ್ತು ಮಾಂಸಗಳಿಂದ ಇತರರು ಬದುಕಲು ನೆರವಾಗಿದ್ದಾರೆ. ಕುರಿಗಳ ಸಂಗೋಪನೆ ಮಾಡುತ್ತಾ ಹಣದ ಅವಶ್ಯಕತೆ ಇದ್ದಾಗ ಮಾರಾಟ ಮಾಡಿ ತನ್ನ ಕೌಟುಂಬಿಕ ಖರ್ಚು-ವೆಚ್ಚಗಳನ್ನು ನಿರ್ವಹಿಸುವುದನ್ನು ಕಾಣುತ್ತೇವೆ.

ಬಳ್ಳಾರಿ ಜಿಲ್ಲೆಯ ಭೂಪ್ರದೇಶದಲ್ಲಿ ಅಲೆದಾಡುತ್ತಿರುವ ಅಲಮಾರಿ ಕುರುಬ ಕುಟುಂಬಗಳ ಸದಸ್ಯರು ವಿವಿಧ ಕಸುಬುಗಳಲ್ಲಿ ತೊಡಗಿಸಿಕೊಂಡಿದ್ದನ್ನು ಕೋಷ್ಟಕ ೫.೨ ರಲ್ಲಿ ತಿಳಿಸಲಾಗಿದೆ. ಕ್ಷೇತ್ರ ಕಾರ್ಯದ ಅಂಕಿ-ಅಂಶಗಳ ಪ್ರಕಾರ ಮೂಲ ವೃತ್ತಿಯಾದ ಕುರಿಸಂಗೋಪನೆಯಲ್ಲಿ ಬಹುತೇಕ ಜನರು ಅಂದರೆ ಶೇ. ೮೯.೭೭ರಷ್ಟು ತೊಡಗಿಸಿಕೊಂಡಿದ್ದಾರೆ. ಇನ್ನುಳಿದವರು ಶೇ. ೪.೫೧ ಕೃಷಿ, ಶೇ. ೪.೨೨ರಷ್ಟು ಕೃಷಿ ಕೂಲಿಯಲ್ಲಿ, ಶೇ. ೦.೩೬ ಸಣ್ಣವ್ಯಾಪಾರದಲ್ಲಿ ಹಾಗೂ ಶೇ. ೦.೭೪ರಷ್ಟು ಸರ್ಕಾರಿ ನೌಕರ ಹಾಗೂ ಶೇ. ೦.೩೭ರಷ್ಟು ಇತರೆ ಉದ್ಯೋಗಗಳಲ್ಲಿ ಕಾರ್ಯಪ್ರವೃತ್ತರಾಗಿರುವುದು ಕೋಷ್ಟಕ ೫.೨ ರಲ್ಲಿ ಕಂಡುಬರುತ್ತದೆ. ಒಟ್ಟಾರೆಯಾಗಿ ಇದರಿಂದ ಕುರಿಸಂಗೋಪನೆಯೇ ಇವರ ಮೂಲ ಉದ್ಯೋಗವಾಗಿರುವುದು ಹಾಗೂ ಜೀವನೋಪಾಯ ಮಾರ್ಗವಾಗಿದೆ ಎಂದು ತಿಳಿದು ಬರುತ್ತದೆ.

**ಪಶುಸಂಪತ್ತು :** ಅಲೆಮಾರಿ ಕುರುಬರ ಆರ್ಥಿಕತೆ ಅವರು ಹೊಂದಿರುವ ಕುರಿ-ಮೇಕೆಗಳ ಮೇಲೆ ಅವಲಂಬಿತವಾಗಿರುತ್ತದೆ. ಇವರು ಸಾಮಾನ್ಯವಾಗಿ ಕನಿಷ್ಠ ೨೫-೩೦ ರಿಂದ ಗರಿಷ್ಠ ೧೦೦೦ ಕುರಿಗಳನ್ನು ಹೊಂದಿರುತ್ತಾರೆ. ಆದರೆ ಇತ್ತೀಚಿನ ದಿನಗಳಲ್ಲಿ ಸಾವಿರ ಕುರಿಗಳಿರುವ ಕುಟುಂಬಗಳ ಸಂಖ್ಯೆ ತೀರಾ ವಿರಳವಾಗಿದೆ. ಕುರಿಗಳಿಗೆ ಮೇವು-ನೀರಿನ ಕೊರತೆ, ರೋಗ-ರುಜಿನಗಳು ಹೆಚ್ಚಳವಾಗಿರುವುದು, ಶ್ರಮಿಕರ (ಆಳು ಮಕ್ಕಳ) ಸಮಸ್ಯೆ ಇತ್ಯಾದಿ ಅಂಶಗಳಿಂದ ಸಾವಿರ ಕುರಿಗಳನ್ನು ಸಾಕಣೆ ಮಾಡಲು ಯಾರು ಬಯಸುತ್ತಿಲ್ಲ.

**ಕೋಷ್ಟಕ ೬.೨ ಅಲೆಮಾರಿ ಕುರುಬರ ಪಶುಸಂಪತ್ತು**

| ಸಂ. | ತಾಲ್ಲೂಕುಗಳು | ಕುರಿ | ಮೇಕೆ | ಕುದುರೆ | ದನಗಳು | ಒಟ್ಟು |
|---|---|---|---|---|---|---|
| ೧ | ಅಥಣಿ | ೬೫ | ೦೮ | ೦೨ | -- | ೭೫ |
| ೨ | ಖಾನಾಪುರ | ೧೮೦೩ | ೧೮೭ | ೪೫ | -- | ೨೦೩೫ |
| ೩ | ಗೋಕಾಕ್ | ೫೨೮ | ೮೨ | ೨೦ | -- | ೬೩೦ |
| ೪ | ಚಿಕ್ಕೋಡಿ | ೫೧೭೮೧ | ೬೩೦೫ | ೧೩೩೯ | ೧೦ | ೫೯೪೩೫ |
| ೫ | ಬೈಲಹೊಂಗಲ | -- | -- | -- | -- | -- |
| ೬ | ಬೆಳಗಾವಿ | ೩೩೪೪ | ೪೫ | ೧೦೨ | -- | ೩೪೯೧ |
| ೭ | ರಾಮದುರ್ಗ | ೩೫೩ | ೩೧ | ೦೮ | -- | ೩೯೨ |
| ೮ | ರಾಯಬಾಗ್ | ೭೮೦ | ೯೩ | ೧೯ | -- | ೮೯೨ |
| ೯ | ಸವದತ್ತಿ | ೧೮೫ | ೨೦ | ೦೫ | -- | ೨೧೦ |
| ೧೦ | ಹುಕ್ಕೇರಿ | ೫೭೩ | ೭೧ | ೨೨ | -- | ೬೬೬ |
| | ಒಟ್ಟು | ೫೯೪೧೨ | ೬೮೪೨ | ೧೫೫೨ | ೧೦ | ೬೭೮೧೬ |

ಪ್ರಸ್ತುತವಾಗಿ ತಮ್ಮ ಕುಟುಂಬದ ನಿರ್ವಹಣೆಗೆ ಎಷ್ಟು ಕುರಿಗಳ ಅವಶ್ಯಕತೆ ಇದೆಯೋ ಅಷ್ಟನ್ನು ಮಾತ್ರ ಸಾಕಣೆ ಮಾಡುತ್ತಾರೆ. ಹಾಗೆಯೇ ಗುಡಾರ ಬದಲಾಯಿಸಿದಂತೆಲ್ಲ ಕೌಟುಂಬಿಕ ಸಾಮಾನುಗಳನ್ನು ಹೊತ್ತೊಯ್ಯಲು ಕುದುರೆಗಳನ್ನು ಸಾಕುತ್ತಾರೆ. ಇದು ಕುಟುಂಬದ ಗಾತ್ರವನ್ನು ಅವಲಂಬಿಸಿರುತ್ತದೆ. ಸಾಮಾನ್ಯವಾಗಿ ೨-೩ ರಿಂದ ೧೦-೧೫ ರವರೆಗೆ ಕುದುರೆಗಳನ್ನು ಸಾಕುವುದನ್ನು ಕಾಣುತ್ತೇವೆ.

ವೃತ್ತಚಿತ್ರ: ೬.೨ ಅಲೆಮಾರಿ ಕುರುಬರ ಪಶುಸಂಪತ್ತು




ಕ್ಷೇತ್ರಕಾರ್ಯದಲ್ಲಿ ದೊರೆತ ಮಾಹಿತಿಯನ್ನು ಅನುಸರಿಸಿ ಕೋಷ್ಟಕ ೬.೨ನ್ನು ಸಿದ್ಧಪಡಿಸಲಾಗಿದೆ. ಅಲೆಮಾರಿ ಕುರುಬರು ಹೊಂದಿರುವ ಒಟ್ಟು ಪಶುಸಂಪತ್ತು ೬೭,೮೧೬ ಅದರಲ್ಲಿ ಕುರಿಗಳು ೫೯,೪೧೨ (ಶೇ. ೮೭.೬೦) ಮೇಕೆಗಳು ೬,೮೪೨ (ಶೇ. ೧೦.೦೮) ಕುದುರೆಗಳು ೧೫೫೨ (ಶೇ. ೨.೨೮) ಹಾಗೂ ದನಗಳು ೧೦ (ಶೇ. ೦.೦೧) ಇವೆ. ಪಶುಸಂಪತ್ತನ್ನು ತಾಲೂಕುವಾರು ಗಣನೆಗೆ ತೆಗೆದುಕೊಂಡಾಗ ಚಿಕ್ಕೋಡಿ ತಾಲ್ಲೂಕು ಪ್ರಥಮ ಸ್ಥಾನದಲ್ಲಿದೆ. ಉಳಿದ ತಾಲೂಕುಗಳು ನಂತರದ ಸ್ಥಾನಗಳಲ್ಲಿವೆ. ಚಿಕ್ಕೋಡಿ ೫೯,೪೩೫ (ಶೇ. ೮೭.೬೪) ಬೆಳಗಾಂ ೩,೪೯೧ (ಶೇ. ೫.೪) ಖಾನಾಪುರ ೨,೦೩೫ (ಶೇ. ೩.೦) ರಾಯಬಾಗ್ ೮೯೨ (ಶೇ. ೧.೩೧) ಹುಕ್ಕೇರಿ ೬೬೬ (ಶೇ. ೦.೯೮) ಗೋಕಾಕ್ ೬೩೦ (ಶೇ. ೦.೯೨) ರಾಮದುರ್ಗ ೩೯೨ (ಶೇ. ೦.೫೭) ಹೀಗೆ ಇತರ ತಾಲೂಕುಗಳು ಪಶುಸಂಪತ್ತನ್ನು ಹೊಂದಿವೆ. ಇದರಿಂದ ಚಿಕ್ಕೋಡಿ ತಾಲೂಕಿನವರು ಹೆಚ್ಚು ಪಶುಸಂಪತ್ತನ್ನು ಕುರಿ ಸಂಗೋಪನೆಯಲ್ಲಿ ತೊಡಗಿಸಿಕೊಂಡು ಅಲೆಮಾರಿಗಳಾಗಿ ವಲಸೆ ಬಂದಿರುವುದು ಕಂಡುಬರುತ್ತದೆ.

## ಆದಾಯದ ಮೂಲಗಳು

ಮಾನವನ ಅಮಿತ ಬಯಕೆಗಳನ್ನು ಜೀವನಾವಶ್ಯಕ, ಹಿತದಾಯಕ ಮತ್ತು ಐಷಾರಾಮಿ ಬಯಕೆಗಳೆಂದು ವಿಂಗಡಿಸಲಾಗಿದೆ. ಎಲ್ಲಾ ಬಯಕೆಗಳನ್ನು ತೃಪ್ತಿಪಡಿಸುವ ಸಾಧಾನ-ಸಂಪನ್ಮೂಲಗಳು ಮಾತ್ರ ಕೊರತೆಯಲ್ಲಿವೆ. ಅಲೆಮಾರಿ ಕುರುಬರು ತಮ್ಮ ಜೀವನಾವಶ್ಯಕ ಬಯಕೆಗಳನ್ನು ತೃಪ್ತಿ ಪಡಿಸಲು ಕುರಿ-ಮೇಕೆಗಳನ್ನೇ ಅವಲಂಬಿಸಿದ್ದಾರೆ. ಆಹಾರ, ಬಟ್ಟೆ, ವಸತಿ (ಗುಡಾರ) ಪಡೆಯಲು ಮತ್ತು ಕುರಿಗಳ ಔಷಧ, ಹಬ್ಬ-ಹರಿದಿನಗಳು, ಜಾತ್ರೆ, ಮದುವೆ ಇತ್ಯಾದಿಗಳಿಗಾಗಿ ಖರ್ಚು ಮಾಡುವ ಹಣವನ್ನು ಕುರಿ-ಮೇಕೆ, ಹಾಗೂ ಮರಿಗಳ ಮಾರಾಟದಿಂದಲೆ ಈಡೇರಿಸಿಕೊಳ್ಳಬೇಕಿದೆ. ಕುರಿ- ಮೇಕೆಗಳಿಂದ ಬರುವ ಆದಾಯದ ಪ್ರಮಾಣವು ಸ್ಥಿರವಾಗಿರದೆ ಹಲವಾರು ಅಂಶಗಳಿಂದ ನಿರ್ಧಾರವಾಗುತ್ತದೆ. ಅಂತಹ ಅಂಶಗಳೆಂದರೆ ಕುರಿಗಳಿಗೆ ಬರುವ ರೋಗ-ರುಜಿನಗಳು, ಮೇವು-ನೀರು ದೊರೆಯುವಿಕೆ, ಕುರಿಗಳು ಮಾರುಕಟ್ಟೆ ಮೌಲ್ಯ ಹಾಗೂ ಉಣ್ಣೆಯ ಬೆಲೆ ಇತ್ಯಾದಿ. ಆರ್ಥಿಕತೆಯಲ್ಲಿ ಒಳ್ಳೆಯ ವಾತವರಣವಿದ್ದು ಕುರಿಗಳಿಗೆ ಬರುವ ರೋಗ-ರುಜಿನಗಳ ಸಂಖ್ಯೆ ಕಡಿಮೆ ಇದ್ದು ಸಾಕಷ್ಟು ಮೇವು-ನೀರು ದೊರೆತಾಗ, ಅವರ ವಾರ್ಷಿಕ ಆದಾಯದ ಪ್ರಮಾಣ ಸುಧಾರಿಸುತ್ತದೆ. ಇದಕ್ಕೆ ವಿರುದ್ಧವಾದ ಪರಿಸ್ಥಿತಿ ನಿರ್ಮಾಣವಾದರೇ ಅಲೆಮಾರಿ ಕುರುಬರು ಆರ್ಥಿಕ ಸಂಕಷ್ಟಕ್ಕೆ ಸಿಲುಕುತ್ತಾರೆ. ಇಂತಹ ಪರಿಸ್ಥಿತಿಯಲ್ಲಿ ಕೌಟುಂಬಿಕ ಖರ್ಚು-ವೆಚ್ಚಗಳನ್ನು ಸರಿದೂಗಿಸಲು ಸಾಲ ಮಾಡಿಕೊಂಡು ಕಷ್ಟದ ದಿನಗಳನ್ನು ಕಳೆಯಬೇಕಾಗುತ್ತದೆ. ಕುರಿ-ಮೇಕೆಗಳು ಜೀವನದ ಆಧಾರ ಸ್ತಂಭವಾಗಿದ್ದು, ಒಮ್ಮೊಮ್ಮೆ ರೋಗ-ರುಜಿನಗಳಿಂದ ಅಲೆಮಾರಿ ಕುರುಬನ ಕುರಿ ಹಿಂಡು ಇಡಿಯಾಗಿ ಬಲಿ ಯಾಗುತ್ತದೆ. ಅಂತಹ ಸ್ಥಿತಿಯಲ್ಲಿ ಅವನ ಬದುಕು ದುಸ್ತರವಾಗುತ್ತದೆ. ಅವನ ಮಾಸಿಕ ಅಥವಾ ವಾರ್ಷಿಕ ಆದಾಯದ ಪ್ರಮಾಣವು ಸ್ಥಿರವಾಗಿರದೆ ಜೀವನದ ಖರ್ಚು-ವೆಚ್ಚಗಳು ಮಾತ್ರ ದಿನದಿಂದ ದಿನಕ್ಕೆ ಏರಿಕೆಯಾಗುತ್ತ ಹೋಗುವುದನ್ನು ಗಮನಿಸಬಹುದು. ಒಟ್ಟಾರೆಯಾಗಿ ಅವನ ಕೌಟುಂಬಿಕ ಜೀವನ ನಿರ್ವಹಣೆಯು ಕುರಿಗಳ ಅಭಿವೃದ್ಧಿ ಅಥವಾ ಅನಭಿವೃದ್ಧಿಯಿಂದ ನಿರ್ಧರವಾಗುತ್ತದೆ.

ಮರಿಗಳು ; ಕುರಿ - ಮೇಕೆಗಳ ಮಾರಾಟ

ಮಾರುಕಟ್ಟೆ ಎನ್ನುವುದು ಗ್ರಾಹಕರು ಹಾಗೂ ಮಾರಾಟಗಾರರು ಭೇಟಿಯಾಗುವ ಸ್ಥಳವಾಗಿದೆ. ಅಲೆಮಾರಿ ಕುರುಬರು ಸಾಮಾನ್ಯವಾಗಿ ತಮ್ಮ ಉತ್ಪನ್ನಗಳನ್ನು ನೇರವಾಗಿ ಗ್ರಾಹಕರಿಗೆ ಮಾರಾಟ ಮಾಡದೇ ಮಧ್ಯಸ್ಥಗಾರರಿಗೆ ಅಂದರೆ ಕುರಿವ್ಯಾಪಾರಸ್ಥರಿಗೆ (ಕಟುಕರಿಗೆ) ಗುಡಾರ ಹೂಡಿದ ಸ್ಥಳದಲ್ಲೆ ಮಾರಾಟ ಮಾಡುವುದು ಕಂಡುಬರುತ್ತದೆ. ವ್ಯಾಪಾರಸ್ಥರು ಕುರಿ-ಮೇಕೆಗಳನ್ನು ಕೊಳ್ಳುವಾಗ ತೂಕ ಮಾಡದೆ ಅವುಗಳ ಗಾತ್ರ ಮತ್ತು ವಯಸ್ಸನ್ನು ಆಧಾರವಾಗಿಟ್ಟುಕೊಂಡು ಬೆಲೆ ನಿರ್ಧರಿಸುತ್ತಾರೆ. ಇದರಿಂದ ಮರಿಗಳಿಗೆ, ವಯಸ್ಕ ಕುರಿಗಳು ಮತ್ತು ವಯಸ್ಸಾದ ಕುರಿಗಳಿಗೆ ಭಿನ್ನವಾದ ಬೆಲೆಗಳು ನಿರ್ಧಾರವಾಗುತ್ತವೆ. ಆದರೆ ಅವುಗಳ ಮಾಂಸ ಮಾರಾಟದಲ್ಲಿ ಮಾತ್ರ ಒಂದೇ ಬೆಲೆ ನಿಗದಿ ಯಾಗುತ್ತಿರುವುದನ್ನು ಕಾಣಬಹು

ದಾಗಿದೆ. ಕುರಿಗಳನ್ನು ಮಾರಾಟ ಮಾಡುವ ಕುರಿಗಾರರು ಹಾಗೂ ಗ್ರಾಹಕರು ಕುರಿ ವ್ಯಾಪಾರಸ್ಥರಿಂದ ಶೋಷಣೆಗೆ ಒಳಗಾಗುವುದು ದೈನಂದಿನ ದಿನಗಳಲ್ಲಿ ಕಂಡು ಬರುತ್ತದೆ.

ಕುರಿ-ಮೇಕೆಗಳು ವಿವಿಧ ಹಂತಗಳಲ್ಲಿ ಮಾರಾಟವಾಗಿ ಗ್ರಾಹಕರಿಗೆ ಮಾಂಸ ಸಿಗುವ ವ್ಯವಸ್ಥೆ ಯಾಗುತ್ತದೆ. ಮಾರಾಟದ ಮೊದಲನೆ ಹಂತ ಕುರಿಗಾರರು ಹಾಗೂ ಕೊನೆಯ ಹಂತ ಗ್ರಾಹಕರು ಆಗಿದ್ದಾರೆ. ಇವರಿಬ್ಬರ ನಡುವೆ ಕುರಿ-ಮೇಕೆಗಳ ಮಾರುಕಟ್ಟೆ ಯಾವ ರೀತಿಯ ಕಾರ್ಯ ನಿರ್ವಹಿಸುತ್ತದೆ ಎಂಬುದನ್ನು ಈ ಮುಂದಿನಂತೆ ಸಂಕ್ಷಿಪ್ತವಾಗಿ ತಿಳಿಯ ಬಹುದು.




*ಆಧಾರ : Devendra and G.B. Mclercy.,* ***Goat and Sheep Production in The Tropics,*** *New Delhi, 1982, P.220*

ಮಾರಾಟದ ಹಂತಗಳು :

ಕುರಿಗಾರರು ತಮ್ಮ ಉತ್ಪನ್ನಗಳಾದ ಕುರಿ-ಮೇಕೆಗಳನ್ನು ದಲ್ಲಾಳಿಗಳಿಗೆ ಮತ್ತು ಸ್ಥಳೀಯ ಮಾರುಕಟ್ಟೆಗೆ ಮಾರಾಟ ಮಾಡುತ್ತಾರೆ. ಈ ಹಂತದಿಂದ ಕುರಿ-ಮೇಕೆಗಳು ಮೂರು ಮಾರ್ಗಗಳ ಮೂಲಕ ವಿವಿಧ ವ್ಯಾಪಾರಸ್ಥರಿಗೆ ಮಾರಾಟವಾಗುತ್ತವೆ. ಬೃಹತ್ ಪ್ರಮಾಣದಲ್ಲಿ ಕೊಂಡುಕೊಳ್ಳುವ ಸಗಟು ವ್ಯಾಪಾರಸ್ಥರು, ಸೈನಿಕರಿಗೆ ಪೂರೈಕೆ ಮಾಡುವ ವ್ಯಾಪಾರಸ್ಥರು ಮತ್ತು ಕುರಿ-ಮೇಕೆಗಳನ್ನು ವಧೆ ಮಾಡಿ ಮಾಂಸ ಮಾರಾಟ ಮಾಡುವ ಕಸಾಯಿಖಾನೆಗಳು (Slaughter houses) ಹಾಗೂ ಪಟ್ಟಣ ಮತ್ತು ನಗರ ಮಾರುಕಟ್ಟೆ ಮಾಂಸ ವ್ಯಾಪಾರಿಗಳಿಗೆ ಮಾರಾಟವಾಗುತ್ತವೆ. ಈ ಹಂತದ ನಂತರ ಸಗಟು ವ್ಯಾಪಾರಸ್ಥರು ಮಾಂಸ ಸಂಸ್ಕರಣ

ಮಾಡುವ ಉದ್ದಿಮೆಗಳಿಗೆ ಸಾಗಿಸುತ್ತಾರೆ. ಸಂಸ್ಕರಣೆಯಾದ ಮಾಂಸದ ಕೆಲವೊಂದು ಭಾಗ ವಿದೇಶಗಳಿಗೆ ರಫ್ತಾಗುತ್ತದೆ. ಇನ್ನುಳಿದ ಭಾಗ ದೇಶೀಯ ಗ್ರಾಹಕರಿಗೆ ಮಾರಾಟ ಮಾಡಲಾಗುತ್ತದೆ. ಸಗಟು ವ್ಯಾಪಾರಸ್ಥರು ಬೃಹತ್ ಕುರಿಮಾಂಸ ಮಾರುಕಟ್ಟೆಗಳಿಗೆ (Metropolis Market) ಮಾರಾಟ ಮಾಡಿ ಆ ಮೂಲಕವೂ ಗ್ರಾಹಕರ ಕೈ ಸೇರುತ್ತದೆ.

ಮಾನವ ಬದುಕುಳಿಯಲು ಆಹಾರ, ಗಾಳಿ, ನೀರು ಅತ್ಯವಶ್ಯಕ. ಆಹಾರದಲ್ಲಿ ಎರಡು ವಿಧಗಳಿದ್ದು ಒಂದು ಸಸ್ಯಹಾರ, ಇನ್ನೊಂದು ಮಾಂಸಹಾರ. ಮಾಂಸಹಾರಗಳಲ್ಲಿ ಕುರಿ-ಮೇಕೆಗಳ ಮಾಂಸವು ಉತ್ತಮವಾಗಿರುವುದರ ಜೊತೆಗೆ ಆರೋಗ್ಯಕರವಾಗಿದೆ. ದೇಶದಲ್ಲಿಯ ಬಹಳಷ್ಟು ಮಾಂಸಾಹಾರಿಗಳು ಕುರಿ-ಮೇಕೆಗಳ ಮಾಂಸವನ್ನೇ ಹೆಚ್ಚಾಗಿ ಸೇವಿಸುತ್ತಾರೆ. ಪರಿಣಾಮವಾಗಿ ಕುರಿ-ಮೇಕೆಗಳ ಮಾಂಸದ ಬೇಡಿಕೆ ದಿನದಿಂದ ದಿನಕ್ಕೆ ಏರಿಕೆಯಾಗುತ್ತಾ ಸಾಗಿದೆ. ಕರ್ನಾಟಕ ರಾಜ್ಯದಲ್ಲಿ ಕಸಾಯಿಖಾನೆ ಸೇರಿದ ಕುರಿಮೇಕೆಗಳ ಸಂಖ್ಯೆ ಹಾಗೂ ಮಾಂಸ ಉತ್ಪಾದನೆಯ ಪ್ರಮಾಣವನ್ನು ಈ ಮುಂದಿನಂತೆ ಕಾಣಬಹುದು.

**ಕೋಷ್ಟಕ ೭.೩ ಕಸಾಯಿಖಾನೆ ಸೇರಿದ ಕುರಿ-ಮೇಕೆಗಳ ಸಂಖ್ಯೆ ಹಾಗೂ ಮಾಂಸದ ಉತ್ಪಾದನೆ ೨೦೦೫-೦೬**

| ಜಾನುವಾರುಗಳು | ಕಸಾಯಿಖಾನೆ ಸೇರಿದ ಕುರಿಗಳ ಸಂಖ್ಯೆ | ಮಾಂಸ ಉತ್ಪಾದನೆ | ಶೇಕಡವಾರು | ಮಾಂಸದ ಮಾರುಕಟ್ಟೆ ಬೆಲೆ |
|---|---|---|---|---|
| ಕುರಿಗಳು | ೨೦,೮೨,೭೩೧ | ೩೦೦೩೫ | ೫೯ | ೧೪೦ |
| ಮೇಕೆಗಳು | ೧೪,೫೬,೫೪೧ | ೨೦೫೫೪ | ೪೧ | ೧೪೦ |
| ಒಟ್ಟು | ೩೫,೩೯,೨೭೨ | ೫೦೫೮೯ | ೧೦೦ | --- |

*ಆಧಾರ : Estimation Report - Department of Animal Husbandary and Veterinary services, Bangalore, 2006*

ಮೇಲಿನ ಕೋಷ್ಟಕದಿಂದ ತಿಳಿದುಬರುವುದೆನೆಂದರೆ ೨೦೦೫-೦೬ ಸಾಲಿನಲ್ಲಿ ಕರ್ನಾಟಕ ರಾಜ್ಯದಲ್ಲಿ ಕಸಾಯಿಖಾನೆ ಸೇರಿದ ಕುರಿ-ಮೇಕೆಗಳ ಸಂಖ್ಯೆ ೩೫,೩೯,೨೭೨ ಇವುಗಳಿಂದ ೫೦,೫೮೯ ಟನ್ ಮಾಂಸ ಉತ್ಪಾದನೆಯಾಗಿ ಸರಾಸರಿ ಪ್ರತಿ ಕೆ.ಜಿ. ೧೪೦ ರೂ.ಗಳಂತೆ ಮಾರಾಟವಾಗಿದೆ. ಕುರಿ-ಮೇಕೆಗಳಿಂದಲೇ ವಾರ್ಷಿಕವಾಗಿ ೧೦೦೦ ಕೋಟಿ ವ್ಯವಹಾರ ನಡೆಯುತ್ತದೆಂದು ಅಂದಾಜಿಸಲಾಗಿದೆ.

**ಮರಿಗಳ ಮಾರಾಟ**

ಅಲೆಮಾರಿ ಕುರುಬರ ಆದಾಯದ ಪ್ರಮುಖ ಮೂಲವೆಂದರೆ ಮರಿಗಳ ಮಾರಾಟ. ಮಾರಾಟ ಮಾಡುವಾಗ ಜನಿಸಿದ ಎಲ್ಲಾ ಮರಿಗಳನ್ನು ಮಾರದೆ ಕೇವಲ ಗಂಡು ಮರಿಗಳನ್ನು ಮಾತ್ರ ಮಾರುತ್ತಾರೆ. ಇವುಗಳಲ್ಲಿಯೇ ಕೆಲವು ದೃಢಕಾಯವಾದ, ನಿಲುವಾದ,

ಚಟುವಟಿಕೆಯಿಂದ ಕೂಡಿದ ಗಂಡು ಮರಿಗಳನ್ನು ಬೀಜದ ಮರಿಗಳನ್ನಾಗಿ ಆ ಕುರಿ ಹಿಂಡಿನಲ್ಲೆ ಉಳಿಸಿಕೊಳ್ಳುತ್ತಾರೆ. ಹೆಣ್ಣು ಮರಿಗಳನ್ನು ಸಾಮಾನ್ಯವಾಗಿ ಮಾರುವುದಿಲ್ಲ. ಸಂಗೋಪನೆಗೊಳಗಾಗಿ ಮುಂದೆ ದೊಡ್ಡವಾಗಿ ಬೆಳೆದು, ಮರಿಹಾಕಿ ಅಲೆಮಾರಿ ಕುರುಬನ ಜೀವನ ನಿರ್ವಹಣೆಗೆ ನೆರವಾಗುತ್ತವೆ. ಮರಿಗಳನ್ನು ಮಾರಾಟ ಮಾಡುವಾಗ ಒಂದೆರಡು ಮರಿಗಳನ್ನು ಮಾರದೆ ಒಂದು ಋತುವಿನಲ್ಲಿ ಜನಿಸಿದ ಮರಿಗಳನ್ನು ಗುಂಪಾಗಿ ಅಥವಾ ಹಿಂಡಾಗಿ ಮಾರುವುದು ಕಂಡುಬಂದಿದೆ.

ವರ್ಷದಲ್ಲಿ ಮೂರು ಸಾರಿ ಕುರಿಮರಿಗಳ ಮಾರಾಟ ಮಾಡಲಾಗುತ್ತದೆ. ಅಂದರೆ ಆಗಸ್ಟ್-ಸೆಪ್ಟೆಂಬರ್ ತಿಂಗಳ (ಗಣೇಶನ ಹಬ್ಬದ) ಅವಧಿಯಲ್ಲಿ ಜನಿಸಿದ ಮರಿಗಳನ್ನು ಡಿಸೆಂಬರ್- ಜನವರಿ (ಎಳ್ಳು ಅಮಾವಸ್ಯೆ) ತಿಂಗಳಲ್ಲಿ ಮತ್ತು ಡಿಸೆಂಬರ್-ಜನವರಿ ತಿಂಗಳಲ್ಲಿ ಜನಿಸಿದ ಮರಿಗಳನ್ನು ಮಾರ್ಚ್-ಏಪ್ರಿಲ್ (ಯುಗಾದಿ) ತಿಂಗಳಲ್ಲಿ ಮಾರಾಟ ಮಾಡಲಾಗುತ್ತದೆ. ಬೇರೆ ಅವಧಿಯಲ್ಲಿ ಈಯ್ದು ಕುರಿಗಳ ಮರಿಗಳನ್ನು ಅಕ್ಷತದಗಿ ಅಮಾವಸ್ಯೆಯ (ಏಪ್ರಿಲ್ ತಿಂಗಳು) ಸಮಯದಲ್ಲಿ ಸಾಮಾನ್ಯವಾಗಿ ಮೂರು ತಿಂಗಳ ಮರಿಗಳು ಸಾವಿರದಿಂದ, ಹನ್ನೆರಡುನೂರು (1000-1200) ರೂ.ಗಳಿಗೆ ಮಾರಾಟವಾಗುತ್ತವೆ.

**ಕುರಿ-ಮೇಕೆಗಳ ಮಾರಾಟ**

ವಯಸ್ಸಾದ ಕುರಿಗಳ ಮಾರಾಟ ಇವರ ಎರಡನೆಯ ಆದಾಯದ ಮೂಲವಾಗಿದೆ. ಇದನ್ನು ಅಲೆಮಾರಿ ಕುರುಬರು ಹಳೆಕುರಿ ಮಾರಾಟ ಎನ್ನುವರು. ಸಾಮಾನ್ಯವಾಗಿ ಕುರಿಯ ಜೀವಿತಾವಧಿ ೧೦ ರಿಂದ ೧೨ ವರ್ಷಗಳಾಗಿವೆ. ಈ ಅವಧಿಯವರೆಗೆ ಕುರಿಗಳನ್ನು ಉಳಿಸಿ ಕೊಳ್ಳುವುದಿಲ್ಲ. ಸಾಮಾನ್ಯವಾಗಿ ೭-೮ ವರ್ಷಗಳಲ್ಲಿ ಮಾರಾಟ ಮಾಡಲಾಗುತ್ತದೆ. ನಂತರದ ದಿನಗಳಲ್ಲಿ ಅವುಗಳ ಉತ್ಪಾದಕತೆ ಕಡಿಮೆಯಾಗುತ್ತದೆ. ವಯಸ್ಸಾದ ಕುರಿಗಳ ಮಾರಾಟದಲ್ಲಿ ಹಲ್ಲುಗಳು ಗಣನೆಗೆ ಒಳಗಾಗುತ್ತದೆ. "The health of a sheep has considerable influence on the growth, strength and wearability of teeth. If well maintained, a sheep will not lose all of its teeth until the age of ten years. The sheep from blocks kept under hard conditions of life may lose teeth when they are 7 to 8 years old"(Benergee, GC:1981:26). ಮುಂದಿನ ಹಲ್ಲುಗಳು ಅಥವಾ ಬಾಚಿಹಲ್ಲುಗಳು ಕಳಚಲು ಆರಂಭವಾದಾಗ ಅವುಗಳಿಗೆ ವಯಸ್ಸಾಯಿತೆಂದು ಅರಿತು ಮಾರಾಟ ಮಾಡಲಾಗುತ್ತದೆ. ಇವನ್ನು ೮೦೦ ರಿಂದ ೧೧೦೦ ರೂ.ಗಳವರೆಗೆ ಕಾರಹುಣ್ಣಿಮೆಯ ಅವಧಿಯಲ್ಲಿ (ಜೂನ್ ತಿಂಗಳು) ಮಾರಾಟ ಮಾಡುವರು. ಜನವರಿಯಿಂದ ಮೇ ತಿಂಗಳವರೆಗೆ ಸಾಕಷ್ಟು ಮೇವು ದೊರೆತು ಕುರಿ ದುಂಡಾಗಿರುವುದರಿಂದ ಈ ಅವಧಿಯಲ್ಲಿ ಮಾರಾಟ ಮಾಡಲಾಗುತ್ತದೆ. ಕಾರಹುಣ್ಣಿಮೆಯ ನಂತರ ಮಳೆಗಾಲ ಆರಂಭವಾಗುವುದರಿಂದ ವಯಸ್ಸಾದ ಕುರಿ-ಮೇಕೆಗಳು ಬೆಟ್ಟ-ಗುಡ್ಡಗಳನ್ನು ಏರಲು, ಮಳೆ ಹಾಗೂ ಶೀತ ಗಾಳಿಯನ್ನು ಸಹಿಸಿಕೊಳ್ಳಲು ಆಗುವುದಿಲ್ಲ. ಆದ್ದರಿಂದ ಜೂನ್ ತಿಂಗಳಲ್ಲಿ ವಯಸ್ಸಾದ ಎಲ್ಲಾ ಕುರಿಗಳನ್ನು ಗುಂಪಾಗಿ ಮಾರಾಟ ಮಾಡುವುದು ಕಾಣುತ್ತದೆ.

ಕುದುರೆ : ಅಲೆಮಾರಿ ಕುರುಬನು ತನ್ನ ಕೌಟುಂಬಿಕ ಸಾಮಾನುಗಳನ್ನು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೊತ್ತೊಯ್ಯಲು ಸಾಕಿದ್ದಾನೆಯೆ ವಿನಹಃ ಆದಾಯದ ದೃಷ್ಟಿಯಿಂದಲ್ಲ. ಸಾಮಾನ್ಯವಾಗಿ ಪ್ರತಿ ಕುಟುಂಬಕ್ಕೆ ೨-೧೫ರ ವರೆಗೆ ಕುದುರೆಗಳಿರುತ್ತವೆ. ಇವುಗಳ ಪ್ರಮಾಣವು ಕುಟುಂಬದ ಜನಸಂಖ್ಯೆಯನ್ನವಲಂಬಿಸಿರುತ್ತದೆ. ಕುದುರೆಗಳ ಸಂಖ್ಯೆ ಹೆಚ್ಚಿದ್ದಾಗ ಅಥವಾ ಕುದುರೆಯ ಸುಳಿ ಸುಮಾರು ಇದ್ದಾಗ, ಹಾಗೂ ಕುದುರೆಗಳಿಗೆ ವಯಸ್ಸಾದಾಗ ಮಾರಾಟ ಮಾಡುವುದು ಸಾಮಾನ್ಯ ಅಂಶವಾಗಿದೆ. ಇವರಿದ್ದಲ್ಲಿಗೆ ರಾಜಸ್ಥಾನದವರು ಬಂದು ಕುದುರೆಗಳನ್ನು ಕೊಂಡು ಹೋಗುತ್ತಾರೆ. ಕುದುರೆಗಳಿಗೆ ಸುಳಿ ಸುಮಾರಿದ್ದರೆ ಅಥವಾ ವಯಸ್ಸಾಗಿದ್ದರೆ. ೧೫೦೦ ರಿಂದ ೨೦೦೦ ರೂ.ಗಳಿಗೆ ಮಾರಾಟವಾಗುತ್ತವೆ. ಕುದುರೆಯು ನಿಲುವಾಗಿದ್ದು, ಚಟುವಟಿಕೆಯಿಂದ ಕೂಡಿ ಒಳ್ಳೆಯ ಬಣ್ಣದ್ದಾಗಿದ್ದರೆ ೩೦೦೦ ದಿಂದ ೪೦೦೦ ರೂ.ಗಳವರೆಗೆ ಮಾರಾಟವಾಗುತ್ತದೆ.

**ಕುರಿ ತಬ್ಬುವಿಕೆ (ಗೊಬ್ಬರ) ಭತ್ಯೆ**

ಕುರಿ ಸಂಗೋಪನೆಗಾಗಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗುವುದು ಇವರ ಕಾರ್ಯವಾಗಿದೆ. ವಲಸೆ ಹೋದ ಪ್ರದೇಶದ ರೈತರ ಹೊಲಗದ್ದೆಗಳಲ್ಲಿ ರಾತ್ರಿಯ ಸಮಯದಲ್ಲಿ ಕುರಿಗಳನ್ನು ತಬ್ಬಲಾಗುತ್ತದೆ. ಕುರಿ ತಬ್ಬಿದ್ದಕ್ಕೆ ಪ್ರತಿಫಲವಾಗಿ ಇಂತಿಷ್ಟು ಹಣವನ್ನಾಗಲಿ ಅಥವಾ ದವಸಧಾನ್ಯಗಳನ್ನಾಗಲಿ ಪಡೆಯಲಾಗುತ್ತದೆ. ಇದಕ್ಕೆ 'ಭತ್ಯೆ' ಎನ್ನುವರು. ಇತ್ತೀಚಿನ ದಿನಗಳಲ್ಲಿ ಜಮೀನಿನ ರೈತರು ಹಣವನ್ನೇ ನೀಡುತ್ತಾರೆ. ಕುರಿ ತಬ್ಬಿದ್ದಕ್ಕಾಗಿ ಪಡೆಯುವ ಪ್ರತಿಫಲ ಕುರಿಗಳ ಸಂಖ್ಯೆ ಮತ್ತು ಕಾಲವನ್ನು ಅವಲಂಬಿಸಿರುತ್ತದೆ. ಉದಾಹರಣೆಗೆ ಕುರಿಗಳ ಸಂಖ್ಯೆ ೫೦೦ ಇದ್ದು ಮುಂಗಾರು ಮಳೆ ಬೇಗ ಬಂದಿದ್ದರೆ ೨೦೦ ರಿಂದ ೨೫೦ ರೂ.ಗಳವರೆಗೆ, ಬೇಸಿಗೆ ಕಾಲದಲ್ಲಿ ೧೫೦ ರಿಂದ ೨೦೦ ರೂ.ಗಳವರೆಗೆ, ಹಾಗೂ ಬರಗಾಲವಿದ್ದರೆ ೫೦ ರಿಂದ ೧೦೦ ರೂ.ಗಳವರೆಗೆ ಭತ್ಯೆ ನೀಡಲಾಗುತ್ತದೆ. ಕೆಲವೊಂದು ರೈತರು ದೌರ್ಜನ್ಯ ಮಾಡಿ ಕುರಿ ತಬ್ಬಿದ್ದಕ್ಕೆ ಹಣವನ್ನು ನೀಡದಿರುವ ಪ್ರಸಂಗಗಳುಂಟು. ಮಳೆಗಾಲದಲ್ಲಿ ಕುರಿಗಳು ಗುಡ್ಡಗಾಡು ಪ್ರದೇಶದಲ್ಲಿರುತ್ತವೆ. ಈ ಅವಧಿಯಲ್ಲಿ ಕುರಿಗಳ ಹಿಕ್ಕೆಯನ್ನು ಒಂದು ಕಡೆ ರಾಶಿ ಹಾಕಿ ಗುಡಾರ ಬದಲಾಯಿಸುವಾಗ ಸಮೀಪದ ರೈತರಿಗೆ ಗುತ್ತಿಗೆ ಲೆಕ್ಕದಲ್ಲಿ ಮಾರಾಟ ಮಾಡಲಾಗುವುದು. ಇದರ ಬೆಲೆ ನಿಖರವಾಗಿ ಹೇಳಲು ಬರುವುದಿಲ್ಲ. ಕಾರಣ ಆ ಸ್ಥಳದಲ್ಲಿ ಕುರಿ ತಬ್ಬಿದ ದಿನಗಳ ಮೇಲೆ ಅವಲಂಬಿತವಾಗಿರುತ್ತದೆ. ಕುರಿ ತಬ್ಬುವಿಕೆಯು ರೈತರು ಕೊಡುವ ಭತ್ಯವನ್ನು ಅವಲಂಬಿಸಿರದೆ ಕುರಿಗಳಿಗೆ ಮೇವು-ನೀರು ಚೆನ್ನಾಗಿ ದೊರೆತು ಒಳ್ಳೆಯ ವಾತವರಣವನ್ನು ಅವಲಂಬಿಸಿರುತ್ತದೆ. ಈ ರೀತಿ ಬರುವ ಆದಾಯವು ಕುಟುಂಬದ ದಿನನಿತ್ಯದ ಖರ್ಚು-ವೆಚ್ಚಗಳನ್ನು ನಿರ್ವಹಿಸಲು ಬಳಕೆ ಯಾಗುತ್ತದೆಯಾದರೂ ಇದರಿಂದಲೇ ಕೌಟುಂಬಿಕ ಜೀವನ ನಡೆಯಲು ಸಾಧ್ಯವಿಲ್ಲ.

**ಗೊಬ್ಬರದ ಮಹತ್ವ :** ಭಾರತ ಕೃಷಿ ಪ್ರಧಾನ ರಾಷ್ಟ್ರವಾಗಿದೆ. ಬಹಳಷ್ಟು ಜನರು (ಶೇ.

೬೩ರಷ್ಟು) ಕೃಷಿಯನ್ನೇ ಮೂಲ ವೃತ್ತಿಯನ್ನಾಗಿಸಿಕೊಂಡು ಹಳ್ಳಿಗಳಲ್ಲಿ ವಾಸಿಸುತ್ತಿದ್ದಾರೆ. ಮಹತ್ಮಾ ಗಾಂಧೀಜಿಯವರು "ಹಳ್ಳಿಗಳ ಉದ್ಧಾರದಿಂದಲೇ ದೇಶದ ಉದ್ಧಾರ" ಎಂದು ಹೇಳಿದ್ದಾರೆ. ಈ ಹಿನ್ನೆಲೆಯಲ್ಲಿ ನಮ್ಮ ದೇಶದ ಭವಿಷ್ಯ ಬಹುತೇಕ ಕೃಷಿಕರ ಬದುಕನ್ನೆ ಅವಲಂಬಿಸಿರುವುದು ಕಂಡುಬರುತ್ತದೆ. ನಮ್ಮ ಪೂರ್ವಜರು ಅನುಸರಿಸುತ್ತಿದ್ದ ಸಾಂಪ್ರದಾಯಿಕ ಕೃಷಿ ಪದ್ಧತಿ ಬಿಟ್ಟು, ಆಧುನಿಕ ಕೃಷಿ ಪದ್ಧತಿಯತ್ತ ಮುನ್ನುಗ್ಗುತ್ತಿದ್ದೇವೆ. ಆಧುನಿಕ ಕೃಷಿ ಪದ್ಧತಿಯಿಂದ ಹೆಚ್ಚಿನ ಇಳುವರಿ ಪಡೆಯುವ ದಿಶೆಯಲ್ಲಿ ಕೃಷಿಕರು ಹೆಚ್ಚಿನ ಪ್ರಮಾಣದಲ್ಲಿ ರಾಸಾಯನಿಕ ಗೊಬ್ಬರ ಹಾಗೂ ಕ್ರಿಮಿನಾಶಕಗಳನ್ನು ಬಳಕೆ ಮಾಡುತ್ತಿದ್ದಾರೆ. ಇವುಗಳ ಬಳಕೆಯಿಂದ ಕೃಷಿ ಭೂಮಿ ಕಲ್ಮಶಗೊಂಡು ವಿಷ-ಮಿಶ್ರಿತವಾಗಿ ಭೂ-ಫಲವತ್ತತೆಯು ನಿಷ್ಕ್ರಿಯವಾಗಿದೆ. ಇನ್ನೊಂದೆಡೆ ನಾವು ಸೇವಿಸುವ ಪ್ರತಿಯೊಂದು ಆಹಾರದಲ್ಲಿ ವಿಷಯುಕ್ತ ರಾಸಾಯನಿಕಗಳಿವೆ. "ಪರಿಣಾಮವಾಗಿ ನಾವು ಬಳಸುವ ಆಹಾರ ಧಾನ್ಯಗಳು ವಿಷಮಿಶ್ರಿತವಾಗಿವೆ. ಮಾನವನ ರಕ್ತದಲ್ಲಿ, ತಾಯಿಯ ಎದೆಹಾಲಿನಲ್ಲಿ ಜಾನುವಾರುಗಳ ಹಾಲಿನಲ್ಲಿ, ತಾಯಿಯ ಗರ್ಭದಲ್ಲಿ ಬೆಳೆಯುವ ಭ್ರೂಣದಲ್ಲಿಯೂ ಸಹ ಕೃಷಿ ಭೂಮಿಯಲ್ಲಿ ಉಪಯೋಗಿಸುವ ವಿಷಯುಕ್ತ ರಾಸಾಯನಿಕಗಳ ಬಗ್ಗೆ ತಜ್ಞರು ವರದಿ ಮಾಡಿದ್ದಾರೆ" (ಬಸವರಾಜಪ್ಪ ಎಸ್.:೨೦೦೧:೪೨). ಮನುಕುಲದ ರೋಗಗಳನ್ನು ಕಡಿಮೆ ಮಾಡಲು ಸಾವಯವ ಕೃಷಿ ಮೂಲಕ ಅಂದರೆ ಕುರಿ-ಮೇಕೆಗಳ ಹಿಕ್ಕೆ (ಸಗಣಿ) ಮತ್ತು ಮೂತ್ರ ಬಳಕೆಯನ್ನು ಹೆಚ್ಚಿಸಬೇಕು. ಇದರಿಂದ ಭೂ-ಫಲವತ್ತತೆಯ ನಾಶವನ್ನು ತಡೆಯಬಹುದು. ಪರಿಣಾಮಾವಾಗಿ ಆರೋಗ್ಯಯುಕ್ತ ದವಸಧಾನ್ಯಗಳ ಉತ್ಪನ್ನ, ರಾಸಾಯನಿಕ ಮುಕ್ತ ಕೃಷಿ ಭೂಮಿಯ ನಿರ್ವಹಣೆ ಸಾಧ್ಯವಾಗುತ್ತದೆ.

ಕುರಿ-ಮೇಕೆಗಳ ಹಿಕ್ಕೆ ಮತ್ತು ಮೂತ್ರವು ಕೃಷಿ ಉತ್ಪಾದನೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಇದರ ಮಹತ್ವ ಅರಿತ ರೈತರು ತಪ್ಪದೇ ತಮ್ಮ ಜಮೀನಿನಲ್ಲಿ ಕುರಿ ತಬ್ಬಿಸುತ್ತಾರೆ. ಕುರಿ-ಮೇಕೆಗಳು ಹಿಕ್ಕೆ ಹಾಗೂ ದನಗಳ ಸಗಣಿಯ ಮಹತ್ವವನ್ನು ಹೋಲಿಕೆ ಮಾಡಿ ನೋಡಿದಾಗ ಕುರಿ-ಮೇಕೆ ಹಿಕ್ಕೆಗಳಲ್ಲಿ ಹೆಚ್ಚಿನ ಪ್ರಮಾಣದ ನೈಟ್ರೋಜನ್ ಮತ್ತು ಫಾಸ್ಫರಸ್ ಆ್ಯಸಿಡ್ ಇರುವುದು ದೃಢಪಟ್ಟಿದೆ. ಮೂತ್ರದಲ್ಲಿ ನೈಟ್ರೋಜನ್ ಮತ್ತು ಪೋಟೋಸಿಯಂ ಶ್ರೀಮಂತವಾಗಿವೆ. ಇಂತಹ ಗುಣಗಳನ್ನು ಪಡೆಯಲು ರೈತನು ಹೊಲ-ಗದ್ದೆಗಳಲ್ಲಿ ಕುರಿಗಳನ್ನು ತಬ್ಬಿಸುತ್ತಾನೆ. ಆಧುನಿಕ ಕೃಷಿ ಬೇಸಾಯ ಪದ್ಧತಿಯಲ್ಲಿ ಬಹಳಷ್ಟು ರೈತರು ತಮ್ಮ ಜಮೀನಿಗೆ ನೈಟ್ರೋಜನ್, ಫಾಸ್ಫರಸ್ ಮತ್ತು ಪೋಟ್ಯಾಸಿಯಂ (ಎನ್.ಪಿ.ಕೆ.) ಪಡೆಯಲು ರಾಸಾಯನಿಕ ಗೊಬ್ಬರ ಉತ್ಪನ್ನ ಮಾಡುವ ಕಾರ್ಖಾನೆ ಗಳಿಗೆ ಮತ್ತು ಅವುಗಳನ್ನು ಮಾರಾಟ ಮಾಡುವ ಸಗಟು ಮತ್ತು ಚಿಲ್ಲರೆ ವ್ಯಾಪಾರಸ್ಥರಿಗೆ ಬಹಳಷ್ಟು ಹಣ ಸುರಿಯುತ್ತಾರೆ. ಒಂದು ವೇಳೆ ಮಳೆ ಕೈಕೊಟ್ಟಾಗ ಅಥವಾ ಹವಾಮಾನದಲ್ಲಿ ಏರುಪೇರಾದಾಗ ಬೆಳೆ ಬರದೆ ರೈತನು ಆರ್ಥಿಕ ಸಂಕಷ್ಟಕ್ಕೆ ಸಿಲುಕುತ್ತಾನೆ. ಕೆಲವೊಂದು ರೈತರು ಆರ್ಥಿಕ ಸಂಕಷ್ಟದಿಂದ ಹೊರಬರದೆ ಆತ್ಮಹತ್ಯೆಗೆ ಶರಣು ಹೋಗಿರುವ ಎಷ್ಟೋ ಉದಾಹರಣೆಗಳಿವೆ. ರೈತರ

ಆತ್ಮಹತ್ಯೆಗಳನ್ನು ತಡೆಯಲು ಸರ್ಕಾರ ಕೆಲವೊಂದು ವಿಶೇಷ ಯೋಜನೆಗಳನ್ನು ಹಾಕಿಕೊಂಡರೂ ಫಲ ನೀಡುತ್ತಿಲ್ಲ. ಕಾರಣ ರೈತರು ಉಳಿಮೆ ಮಾಡುವ ಭೂಮಿಯ ಫಲವತ್ತತೆ ನಿಷ್ಕ್ರಿಯವಾಗಿದೆ. ತನ್ನಷ್ಟಕ್ಕೆ ತಾನೇ ಏನು ಬೆಳೆಯುತ್ತಿಲ್ಲ. ಅದಕ್ಕೆ ರಾಸಾಯನಿಕ ಗೊಬ್ಬರ ಮತ್ತು ಕ್ರಿಮಿನಾಶಕಗಳನ್ನು ಮೇಲು ಗೊಬ್ಬರವಾಗಿ ಕೊಟ್ಟಾಗ ಮಾತ್ರ ಬೆಳೆಯನ್ನು ಬೆಳೆಯಲು ಸಾಧ್ಯವಾಗುತ್ತದೆ. ಉದಾಹರಣೆ ಕರ್ನಾಟಕ ಸರ್ಕಾರವು ೨೦೦೭-೦೭ನೇ ಸಾಲಿನಲ್ಲಿ ಸಹಕಾರಿ ಪತ್ತಿನ ಕೃಷಿ ಬ್ಯಾಂಕುಗಳಿಂದ ೨೫,೦೦೦ ರೂ.ಗಳವರೆಗೆ ಸಾಲ ತೆಗೆದುಕೊಂಡ ರೈತರ ಸಾಲ ಮನ್ನ ಮಾಡಿದೆ. ಈ ತರಹದ ಸಾಲ ಮನ್ನವು ಒಂದು ವರ್ಷದವರೆಗೆ ರೈತರ ಆತ್ಮಹತ್ಯೆ ತಡೆಯಬಹುದು. ಮುಂದಿನ ವರ್ಷ ರೈತ ತನ್ನ ಜಮೀನಿನಲ್ಲಿ ಬೆಳೆ ಬೆಳೆಯಬೇಕಾದರೆ ಆಧುನಿಕ ಮಿಶ್ರತಳಿಯ ಬೀಜ ಮತ್ತು ರಸಗೊಬ್ಬರಗಳ ಮೊರೆ ಹೋಗಲೇಬೇಕಾಗುತ್ತದೆ. ಆ ವರ್ಷವು ಕೂಡ ಬೆಳೆ ಕೈಕೊಟ್ಟರೆ ಅಥವಾ ಕೃಷಿ ಉತ್ಪನ್ನಗಳ ಬೆಲೆ ಕಡಿಮೆಯಾದರೆ ರೈತರ ಆತ್ಮಹತ್ಯೆಗಳನ್ನು ತಡೆಯಲು ಸಾಧ್ಯವಾಗುವುದಿಲ್ಲ. ಈ ತರಹದ ಆತ್ಮಹತ್ಯೆಗಳು ಪ್ರತಿವರ್ಷ ಮುಂದುವರಿಯುತ್ತ ಹೋಗುತ್ತವೆ. ಆದ್ದರಿಂದ ರೈತರು ಮತ್ತು ಸರ್ಕಾರಗಳು ಕೃಷಿ ಭೂಮಿಗೆ ಕುರಿ ಹಿಕ್ಕೆ ಮತ್ತು ಮೂತ್ರದ ಮಹತ್ವವನ್ನು ಅರಿತು ಕುರಿ-ಸಂಗೋಪನೆ ಅಭಿವೃದ್ಧಿಗೆ ಸಹಕಾರಿಯಾಗುವಂತೆ ನೀತಿ-ನಿಯಮಗಳನ್ನು ರೂಪಿಸಬೇಕಾಗಿರುವುದು ಜರೂರಾಗಿದೆ. ಕುರಿಗಳ ಹಿಕ್ಕೆ ಮತ್ತು ಮೂತ್ರವನ್ನು ಉಪಯೋಗಿಸದ ಅಥವಾ ಕುರಿ ತಬ್ಬಿದ ಜಮೀನಿನಲ್ಲಿ ಒಳ್ಳೆಯ ಬೆಳೆ ಬರುವುದರ ಜೊತೆಗೆ ಜಮೀನ್ದಾರನಿಗೆ ಹೆಚ್ಚಿನ ಲಾಭವನ್ನು ತಂದು ಕೊಡುತ್ತದೆ. ಇದರಿಂದ ರೈತರ ಆತ್ಮಹತ್ಯೆಯನ್ನು ತಡೆಯಲು ಹಾಗೂ ಅವರ ಆರ್ಥಿಕ ಸ್ಥಿತಿ ಸುಧಾರಿಸಲು ಸಾಧ್ಯವಾಗುತ್ತದೆ.

ಕುರಿ ತಬ್ಬಿಸುವಿಕೆ ಮತ್ತು ದನ-ಕರುಗಳ ಸಗಣಿ (ಕೊಟ್ಟಿಗೆ ಗೊಬ್ಬರ) ಹೋಲಿಕೆ ಮಾಡಿದಾಗ ರೈತನಿಗೆ ಕೆಳಗಿನಂತೆ ಹಲವಾರು ಪ್ರಯೋಜನಗಳುಂಟಾಗಿರುವುದು ಕಂಡು ಬಂದಿದೆ.

೧. ಕುರಿ-ಮೇಕೆಗಳ ಹಿಕ್ಕೆ ಮತ್ತು ಮೂತ್ರ ಹೆಚ್ಚಿನ ಗುಣಮಟ್ಟದ ಪೌಷ್ಟಿಕಾಂಶಗಳನ್ನು ಹೊಂದಿದೆ.

೨. ಕೊಟ್ಟಿಗೆ ಗೊಬ್ಬರ ಸಾಗಿಸಲು ಎತ್ತು-ಬಂಡಿ ಅಥವಾ ಟ್ರಾಕ್ಟರ್‌ಗಳು ಹಾಗೂ ಶ್ರಮಿಕರ ಅವಶ್ಯಕತೆ ಇದೆ.

೩. ಕೊಟ್ಟಿಗೆ ಗೊಬ್ಬರವನ್ನು ಸಾಗಿಸಿದ ನಂತರ ಜಮೀನಿನಲ್ಲಿ ಚೆಲ್ಲಬೇಕು. ಆದರೆ ಕುರಿ ತಬ್ಬಿಸುವಿಕೆಯಿಂದ ಇದರ ಅವಶ್ಯಕತೆ ಬರುವುದಿಲ್ಲ.

೪. ಕುರಿ-ಮೇಕೆಗಳ ಹಿಕ್ಕೆ ಮತ್ತು ಮೂತ್ರದಲ್ಲಿರುವ ಲವಣಾಂಶಗಳನ್ನು ಜಮೀನಿಗೆ ನೇರವಾಗಿ ಒದಗಿಸಬಹುದು.

೫. ರೈತರು ತಮ್ಮ ಜಮೀನಿಗೆ ಪೌಷ್ಟಿಕಾಂಶವುಳ್ಳ ಗೊಬ್ಬರವನ್ನು ನೇರವಾಗಿ ಕೊಡುವುದರ ಜೊತೆಗೆ ಕೃಷಿ ಕಾರ್ಮಿಕರಿಗಾಗಿ ಮೇಲೆ ಖರ್ಚು ಮಾಡುವ ಹಣವನ್ನು ಉಳಿತಾಯ ಮಾಡಬಹುದು.

ಉಣ್ಣೆ

ಉಣ್ಣೆ ಕುರಿಯ ಉಪ-ಉತ್ಪನ್ನವಾಗಿದೆ. ಸಾಮಾನ್ಯವಾಗಿ ದೇಶದಲ್ಲಿರುವ ಕುರಿಗಳ ಉಣ್ಣೆಯನ್ನು ವರ್ಷದಲ್ಲಿ ೨ ಅಥವಾ ೩ ಸಾರಿ ಕತ್ತರಿಸಲಾಗುತ್ತದೆ. ಅಲೆಮಾರಿ ಕುರುಬರು ತಮ್ಮ ಜೀವನೋಪಾಯಕ್ಕಾಗಿ ಕುರಿಸಾಕಣೆ ಮಾಡಿರುವ ಬಳ್ಳಾರಿ ಮತ್ತು ಡೆಕ್ಕನಿ ತಳಿಯ ಕುರಿಗಳ ಉಣ್ಣೆಯನ್ನು ವರ್ಷಕ್ಕೆ ಎರಡೂ ಬಾರಿ ಕತ್ತರಿಸುತ್ತಾರೆ. ಕಾರಹುಣ್ಣಿಮೆ (ಮೇ-ಜೂನ್ ತಿಂಗಳು) ಸಮಯದಲ್ಲಿ ಒಮ್ಮೆ ಕತ್ತರಿಸಿದರೆ ದೀಪಾವಳಿಯ (ನವ್ಹಂಬರ್-ಡಿಸೆಂಬರ್) ನಂತರ ಮತ್ತೊಮ್ಮೆ ಕತ್ತರಿಸುತ್ತಾರೆ. ಇದರಲ್ಲಿ ಕಾರಹುಣ್ಣಿಮೆ ಸಮಯದಲ್ಲಿ ಕತ್ತರಿಸುವ ಉಣ್ಣೆಯು ದೀಪಾವಳಿ ಸಮಯದಲ್ಲಿ ಕತ್ತರಿಸುವ ಉಣ್ಣೆಗಿಂತ ಉತ್ತಮ ವಾದದು ಮತ್ತು ತೂಕದಲ್ಲಿ ಸ್ವಲ್ಪ ಹೆಚ್ಚಾಗಿಯೂ ಇರುತ್ತದೆ. ದೀಪಾವಳಿಯಿಂದ ಕಾರಹುಣ್ಣಿಮೆಯವರಿಗೆ ಕುರಿಗಳಿಗೆ ಸಾಕಷ್ಟು ಮೇವು ದೊರೆಯುತ್ತದೆ. ಕೃಷಿ ಸುಗ್ಗಿ ಆಗ ತಾನೇ ಆರಂಭವಾಗಿ ಏಪ್ರಿಲ್ ತಿಂಗಳಲ್ಲಿ ಮುಕ್ತಾಯವಾಗುತ್ತವೆ. ಈ ಅವಧಿಯಲ್ಲಿ ಕುರಿಗಳಿಗೆ ಮೇಯಲು ಹತ್ತಿ ತೊಪ್ಪಲು, ಜೋಳದ ದಂಟು, ಸೂರ್ಯಕಾಂತಿ ತೆನೆ, ನೀರಾವರಿಯಲ್ಲಿ ದೊರೆಯುವ ಭತ್ತದ ತೆನೆ ಹಾಗೂ ಹಸಿರು ಮೇವು, ರಾಶಿ ಮಾಡಿದಾಗ ಸಿಡಿದ ಸಿಡಿಕಾಳುಗಳು, ಜಾಲಿಯ ಕಾಯಿ, ರಿಜ್ಜರಕಾಯಿ, ಜಂಬೆಕಾಯಿ, ಇತ್ಯಾದಿ ಸಿಗುವುದರಿಂದ ಸಹಜವಾಗಿ ಉಣ್ಣೆಯೂ ತೂಕವಿರುತ್ತದೆ, ಉತ್ತಮ ಗುಣಮಟ್ಟದ್ದಾಗಿರುತ್ತದೆ. ಉಣ್ಣೆಯನ್ನು ಎರಡು ವಿಧಾನಗಳಲ್ಲಿ ಕತ್ತರಿಸುವರು. ತೊಳೆದು ಕತ್ತರಿಸುವುದು ಮತ್ತು ತೊಳೆಯದೆ ಕತ್ತರಿಸುವುದು.

ತೊಳೆದು ಕತ್ತರಿಸುವ ವಿಧಾನ : ಉಣ್ಣೆ ಕತ್ತರಿಸಲು ಮೂರ್ನಾಲ್ಕು ದಿನಗಳು ಇರುವಾಗಲೇ ಕುರಿಗಳನ್ನು ಹರಿಯುವ ಅಥವಾ ತಿಳಿ ನೀರಿನಲ್ಲಿ ತೊಳೆಯುವರು. ಇದರಿಂದ ಕುರಿಗಳ ಮೈಗೆ ಅಂಟಿದ ಕಸ-ಕಡ್ಡಿ, ಮುಳ್ಳು, ಕೊಳೆಯಲ್ಲ ಹೋಗಿ ಉಣ್ಣೆ ಸ್ವಚ್ಛವಾಗುತ್ತದೆ. ಈ ರೀತಿ ಮಾಡುವುದರಿಂದ ಸ್ವಲ್ಪ ಹೆಚ್ಚಿನ ಬೆಲೆ ಪಡೆಯಬಹುದು.

ತೊಳೆಯದೆ ಕತ್ತರಿಸುವ ವಿಧಾನ : ಕುರಿಗಳನ್ನು ನೀರಿನಲ್ಲಿ ತೊಳೆಯದೆ ಉಣ್ಣೆ ಕತ್ತರಿಸುವುದು. ಕತ್ತರಿಸಿದ ನಂತರ ನೀರಿನಲ್ಲಿ ಹಾಕಿ, ತೊಳೆದು, ಸೋಸಿ, ಬಿಸಿಲಿಗೆ ಒಣಗಿಸಿ ನಂತರ ಮಾರಲಾಗುತ್ತದೆ. ಇದು ಶ್ರಮದಾಯಕವಾದ್ದರಿಂದ ಈ ಪದ್ಧತಿಯನ್ನು ಇವರು ಅನುಸರಿಸುವುದಿಲ್ಲ. ರಾಯಚೂರು ಜಿಲ್ಲೆಯ ನೆಲೆನಿಂತ ಮತ್ತು ಅರೆ ಅಲೆಮಾರಿ ಕುರಿಗಾರರು ಈ ಪದ್ಧತಿಯನ್ನು ಅನುಸರಿಸುವರು.

ಅಲೆಮಾರಿ ಕುರುಬರು ಕುರಿಗಳ ಉಣ್ಣೆಯನ್ನು ತಾವೇ ಕತ್ತರಿಸುತ್ತಾರೆ. ಇಲ್ಲವಾದರೆ ಚಳ್ಳಕೆರೆ ಕಡೆಯ ಕುರುಬರಿಗೆ ಉಣ್ಣೆಯನ್ನು ಕತ್ತರಿಸಲು ಕೊಡುತ್ತಾರೆ. ತಾವೇ ಕತ್ತರಿಸಿದರೆ ೫-೬ ಕುಟುಂಬದ ಹಿರಿಯ ಸದಸ್ಯರು ಸೇರಿಕೊಂಡು ದಿನ ಒಂದು ಕುಟುಂಬದ ಕುರಿ ಹಿಂಡಿನಂತೆ ಕತ್ತರಿಸುವರು. ಹೀಗೆ ಕತ್ತರಿಸಿದ ಉಣ್ಣೆಯನ್ನು ಉಣ್ಣೆ ವ್ಯಾಪಾರಿಗಳಿಗೆ ಮಾರಾಟ ಮಾಡಬಹುದು, ಇಲ್ಲವಾದರೆ ಚಳ್ಳಕೆರೆ ಅಥವಾ ರಾಣೆಬೆನ್ನೂರಿಗೆ ಸಾಗಣೆ ಮಾಡಿ ಮಾರಾಟ ಮಾಡುತ್ತಾರೆ. ಚಳ್ಳಕೆರೆ ಕಡೆಯ ಕುರುಬರು ಉಣ್ಣೆ ಕತ್ತರಿಸಿದರೆ ಕುರಿಗೆ ೨ ರೂಪಾಯಿಗಳನ್ನು

ಕೊಡಬೇಕು. ೩ ಕುರಿಯ ಉಣ್ಣೆಯನ್ನು ಕೂಡಿಸಿದರೆ ೧ ಕೆ.ಜಿ. ಆಗುತ್ತದೆ. ೧ ಕೆ.ಜಿ. ಉಣ್ಣೆ ಮಾರಾಟ ಮಾಡಿದಾಗ ೬ ರಿಂದ ೮ ರೂಪಾಯಿಗಳು ದೊರೆಯುತ್ತದೆ. ಉಣ್ಣೆ ಕತ್ತರಿಸಿ ಮಾರಾಟ ಮಾಡಿದ ಹಣವು ಕೆಲವೊಮ್ಮೆ ಖರ್ಚಿಗೆ ಸಮವಾದರೆ ಇನ್ನೂ ಕೆಲವೊಮ್ಮೆ ೧ ಕೆ.ಜಿ. ಉಣ್ಣೆಗೆ ೧ ರಿಂದ ೨ ರೂ.ಗಳು ಆದಾಯ ದೊರೆಯುತ್ತದೆ. ಸಾಮಾನ್ಯವಾಗಿ ಬಹಳಷ್ಟು ಅಲೆಮಾರಿ ಕುರುಬರು ತಾವೇ ಉಣ್ಣೆ ಕತ್ತರಿಸಿ ಮಾರಾಟ ಮಾಡದೆ ಕುರಿಗೆ ಒಂದು ರೂಪಾಯಿ ಯಂತೆ ಚಳ್ಳಕೆರೆ ಕುರುಬರಿಂದ ಪಡೆದು ಅವರಿಗೆ ಉಣ್ಣೆ ಕತ್ತರಿಸಿಕೊಳ್ಳಲು ಹೇಳುತ್ತಾರೆ. ವರ್ಷಕ್ಕೆ ಎರಡೂ ಸಾರಿ ಉಣ್ಣೆ ಕತ್ತರಿಸುವುದರಿಂದ ಅಲೆಮಾರಿ ಕುರುಬರಿಗೆ ವರ್ಷಕ್ಕೆ ೨ ರೂ.ವರೆಗೆ ಆದಾಯ ಬರುತ್ತದೆ. ಉಣ್ಣೆಯ ಒಟ್ಟು ಆದಾಯ ಅವನ ಕುರಿಗಳ ಸಂಖ್ಯೆಯಿಂದ ನಿರ್ಧಾರವಾಗುತ್ತದೆ. ಉಣ್ಣೆ ಕತ್ತರಿಸಿದ ನಂತರ ಮೈಗೆ ಕೊಬ್ಬರಿ ಎಣ್ಣೆ ಸವರುವರು. ಒಂದುವೇಳೆ ಚರ್ಮರೋಗ ಕಂಡುಬಂದಲ್ಲಿ ಅವುಗಳ ಮೈಗೆ ಬೇವಿನ ಎಣ್ಣೆ ಅಥವಾ ಹೊಂಗೆ ಎಣ್ಣೆಯನ್ನು ಹಚ್ಚುತ್ತಾರೆ.

ಚರ್ಮ : ಚರ್ಮ ಕುರಿ-ಮೇಕೆಗಳ ಉಪ ಉತ್ಪನ್ನವಾಗಿದ್ದು, ಇಂದು ದೇಶದಲ್ಲಿ ಬೃಹತ್ ಉದ್ಯಮವಾಗಿ ಬೆಳೆದಿರುವುದರ ಜೊತೆಗೆ ಲಕ್ಷಾಂತರ ಜನರಿಗೆ ಉದ್ಯೋಗ ನೀಡಿದೆ ಹಾಗೂ ವಿದೇಶಿ ವಿನಿಮಯ ಗಳಿಕೆಯಲ್ಲಿ ಇದರ ಪಾತ್ರ ಗಣನೀಯವಾಗಿದೆ. ಇದರಲ್ಲಿ ಅಲೆಮಾರಿ ಕುರುಬರ ಕೊಡುಗೆ ಅನನ್ಯವಾದದು. ಇವರು ತಮ್ಮ ಬದುಕುಗಳನ್ನು ಕಟುಕರಿಗೆ (ವ್ಯಾಪಾರಸ್ಥರಿಗೆ) ಮಾರುತ್ತಾರೆ. ಕುರಿ-ಮೇಕೆಗಳನ್ನು ಕೊಯ್ದು ಚರ್ಮ ಮತ್ತು ಮಾಂಸ ಭಾಗ ಮಾಡಿ ಮಾರಾಟ ಮಾಡುವುದಿಲ್ಲ. ದೇವರಿಗೆ ಬಲಿ, ಹಿರಿಯರ ಹಬ್ಬ ಇತ್ಯಾದಿ ಪ್ರಸಂಗಗಳಲ್ಲಿ ಕುರಿ-ಮರಿ ಬಲಿಕೊಟ್ಟಾಗ ಮಾತ್ರ ಚರ್ಮ ಮಾರುತ್ತಾರೆ. ಚಿಕ್ಕೋಡಿ ತಾಲೂಕು ನಿಪ್ಪಾಣಿಯ ಚರ್ಮ ವ್ಯಾಪಾರಿಗಳಾದ ಬೋಲಾಶೇಟ್‌ಕೇ ಮತ್ತು ದುಂಡಿಬಾ ಗೋಡಕೇ ಪ್ರಕಾರ "ಕುರಿ ಚರ್ಮ ೧೦೦ ರಿಂದ ೧೨೦ ರೂ.ಗಳವರೆಗೆ, ಮೇಕೆ ಚರ್ಮ ೧೨೦ ರಿಂದ ೧೪೦ ರೂ.ವರೆಗೆ ಬೆಲೆಕಟ್ಟಿ ಮಾಂಸ ವ್ಯಾಪಾರಿಗಳಿಂದ ಕೊಂಡುಕೊಳ್ಳುತ್ತೇವೆ. ಅವು ಕೆಡದ ಹಾಗೆ ಉಪ್ಪನ್ನು ಹಚ್ಚಿ ಚೆನ್ನೈ, ಮೀರಜ್, ಕಾನ್ಪುರ್, ಕಲ್ಕತ್ತಾ, ಬಾಂಬೆ, ಹೈದರಾಬಾದ್ ನಗರಗಳಲ್ಲಿರುವ ಬೃಹತ್ ಚರ್ಮ ಉದ್ಯಮಿಗಳಿಗೆ ಸಾಗಿಸಿ ಮಾರಾಟ ಮಾಡುತ್ತೇವೆ. ಆ ಉದ್ಯಮಗಳು ಚರ್ಮವನ್ನು ಹದಮಾಡಿ ವಿದೇಶಗಳಿಗೆ ರಫ್ತು ಮಾಡುತ್ತವೆ"(ಮಾಹಿತಿ: ಬೋಲಾ ಶೇಟ್ ಕೇ:ನಿಪ್ಪಾಣಿ). ಕುರಿ ಮೇಕೆಗಳ ಚರ್ಮದಿಂದ ಪರ್ಸ್, ಬೂಟು, ಬೆಲ್ಟ್, ಬ್ಯಾಗ್, ವಾಚ್‌ಬೆಲ್ಟ್, ಟೋಪಿ, ಬ್ರಿಫ್‌ಕೇಶ್ ಹೀಗೆ ಹಲವಾರು ರೀತಿಯ ನಿತ್ಯೋಪಯೋಗಿ ವಸ್ತುಗಳನ್ನು ತಯಾರು ಮಾಡಲಾಗುತ್ತದೆ. ಪ್ರತಿವರ್ಷ ಕರ್ನಾಟಕ ರಾಜ್ಯದಲ್ಲಿ ಹನ್ನೆರಡು ಕೋಟಿಗಳಿಗಿಂತ ಅಧಿಕ ವ್ಯವಹಾರ ಚರ್ಮದಿಂದಲೇ ನಡೆಯುತ್ತದೆ.

**ಸಾಲದ ವ್ಯವಸ್ಥೆ :** ಅಲೆಮಾರಿ ಕುರುಬರ ಆದಾಯ ಸ್ಥಿರವಾಗಿರುವುದಿಲ್ಲ. ಅವರ ಆದಾಯವು ಎರಡು ಅಂಶಗಳನ್ನು ಅವಲಂಬಿಸಿರುತ್ತದೆ. ಒಂದು ಕುರಿಗಳಿಗೆ ದೊರೆಯುವ ಮೇವು-ನೀರು. ಎರಡು ಕುರಿಗಳಿಗೆ ಕಾಡುವ ರೋಗ-ರುಜಿನಗಳು. ಇವರು ಅಲೆದಾಡುವ

ಪ್ರದೇಶಗಳಲ್ಲಿ ಮಳೆ ಕಡಿಮೆಯಾಗಿ ಮೇವು-ನೀರಿನ ಸಮಸ್ಯೆಯಾದಾಗ ಕುರಿಗಳ ಸಂತಾನಾಭಿವೃದ್ಧಿ ಕುಂಠಿತಗೊಳ್ಳುತ್ತದೆ. ಇದರ ಪರಿಣಾಮ ಮರಿಗಳ ಸಂಖ್ಯೆ ಕಡಿಮೆಯಾಗಿ ಆ ವರ್ಷದ ಕೌಟುಂಬಿಕ ಆದಾಯ ಕ್ಷೀಣಿಸುತ್ತದೆ. ಕುರಿಗಳಿಗೆ ರೋಗ ರುಜಿನಗಳು ಕಾಣಿಸಿಕೊಂಡು ಬೇಗ ವಾಸಿಯಾದರೆ ಕೇವಲ ಔಷಧದ ಖರ್ಚು ಮಾತ್ರ ಬರುತ್ತದೆ. ಇದರ ಬದಲು ರೋಗಗಳಿಂದ ಕುರಿ ಮತ್ತು ಮರಿಗಳು ತೀರಿಕೊಂಡಾಗ ಅಲೆಮಾರಿ ಕುರುಬರು ಆರ್ಥಿಕ ಸಂಕಷ್ಟಕ್ಕೆ ಸಿಲುಕುತ್ತಾರೆ. ಇಂತಹ ಸ್ಥಿತಿಯಲ್ಲಿ ತನ್ನ ಕೌಟುಂಬಿಕ ಖರ್ಚು-ವೆಚ್ಚಗಳನ್ನು ಸರಿದೂಗಿಸಲು ಸಾಲದ ಮೊರೆ ಹೋಗಬೇಕಾಗುತ್ತದೆ. ಇವರು ಬ್ಯಾಂಕಿನ ವ್ಯವಹಾರ ಅರಿಯದ ಮುಗ್ಧರು ಹಾಗೂ ನಿರಕ್ಷರಿಗಳು. ಇವರ ಆಸ್ತಿ ಚರಾಸ್ತಿ ಅಥವಾ ಜಂಗಮ ಆಸ್ತಿ ಕುರಿಗಳೇ ಆಗಿವೆ. ಈ ಆಸ್ತಿಯು ಯಾವಾಗಲೂ ಚಲನಶೀಲವಾಗಿರುತ್ತದೆ. ಕೆಲವೊಮ್ಮೆ ಈ ಆಸ್ತಿಯು ನೈಸರ್ಗಿಕ ವಿಕೋಪಗಳಾದ ಸಿಡಿಲು, ಮಳೆ, ನೆರೆಹಾವಳಿ ಅಥವಾ ರೋಗಗಳಿಗೆ ಬಲಿಯಾಗುತ್ತವೆ. ಇಂತಹ ಆಸ್ತಿಯನ್ನು ಆಧಾರವಾಗಿಟ್ಟುಕೊಂಡು ಯಾವ ಬ್ಯಾಂಕ್ ತಾನೆ ಸಾಲ ಕೊಡಲು ಮುಂದೆ ಬರುತ್ತದೆ?

ಹಣದ ಅಡಚಣೆ ಉಂಟಾದಾಗ ಸಂಬಂಧಿಕರಲ್ಲಿ ಸ್ವಗ್ರಾಮದ ಜಮೀನ್ದಾರರಲ್ಲಿ ಶ್ರೀಮಂತ ಅಥವಾ ಕುರಿ ವ್ಯಾಪಾರ ಮಾಡುವ ಕಟುಕರಲ್ಲಿ ಸಾಲ ಪಡೆಯುತ್ತಾರೆ. ಸಂಬಂಧಿಕರಲ್ಲಿ ಮತ್ತು ಜಮೀನ್ದಾರರಲ್ಲಿ ಸಾಲ ಪಡೆದಾಗ ಸಾಲಕ್ಕೆ ಪ್ರತಿಫಲವಾಗಿ ಬಡ್ಡಿಯನ್ನು ಕೊಡಬೇಕಾಗುತ್ತದೆ. ಕಟುಕರು ಇವರ ವರ್ತನೆ ಗಮನಿಸಿ ಕುರಿಗಳ ಸಂಖ್ಯೆಯನ್ನು ನೋಡಿ ಸಾಲ ನೀಡುವುದು ತಿಳಿದುಬಂದಿದೆ. ಬಳ್ಳಾರಿ, ರಾಯಚೂರು ಮತ್ತು ಕೊಪ್ಪಳ ಜಿಲ್ಲೆಯಲ್ಲಿ ಅಲೆದಾಡುವ ಅಲೆಮಾರಿ ಕುರುಬರಿಗೆ ಸಿಂಧನೂರಿನ ಸಗಟು ಕುರಿ ವ್ಯಾಪಾರಸ್ಥ ಶಾಬಾಸಾಬ್ ಹಣದ ವ್ಯವಸ್ಥೆ ಮಾಡುತ್ತಾನೆ. ಸಣ್ಣ-ಪುಟ್ಟ ವ್ಯಾಪಾರಸ್ಥರು ಅಲ್ಪ-ಸ್ವಲ್ಪ ಸಾಲವನ್ನು ನೀಡುತ್ತಾರೆ. ಇವರು ಸಾಲ ನೀಡಿದ್ದಕ್ಕೆ ಪ್ರತಿಫಲವಾಗಿ ಬಡ್ಡಿಯನ್ನು ಸ್ವೀಕರಿಸುವುದಿಲ್ಲ. ಆದರೆ ಕುರಿ ಅಥವಾ ಮರಿ ಮಾರಾಟ ಮಾಡಿದಾಗ ಮಾರುಕಟ್ಟೆಯ ಮೌಲ್ಯಗಿಂತ ಸ್ವಲ್ಪ ಕಡಿಮೆ ಬೆಲೆಗೆ ತೆಗೆದುಕೊಳ್ಳುತ್ತಾರೆ. ಸಾಲ ಪಡೆದುಕೊಂಡವರು ಕುರಿ-ಮರಿಗಳನ್ನು ಮಾರಾಟ ಮಾಡುವಾಗ ಚೌಕಾಶಿ ಮಾಡುವುದಿಲ್ಲ. ಕಾರಣ ಸಾಲ ಪಡೆದುಕೊಂಡಿದ್ದೇವೆಂಬ ಅಳುಕು ಇರುತ್ತದೆ. ಸಾಮಾನ್ಯವಾಗಿ ಹಣದ ಅಡಚಣೆ ಉಂಟಾದಾಗ ಕುರಿ-ಮರಿಗಳನ್ನು ಮಾರಾಟ ಮಾಡಿ ಕೌಟುಂಬಿಕ ಜೀವನ ನಡೆಸುತ್ತಾರೆ.

### ಖರ್ಚಿನ ಮೂಲಗಳು

ಭೂಮಿಯ ಮೇಲೆ ಜನಿಸಿದ ಮಾನವ ತನ್ನ ಜೀವನೋಪಾಯಕ್ಕಾಗಿ ಹಲವಾರು ವೃತ್ತಿಗಳಲ್ಲಿ ತೊಡಗಿಸಿಕೊಂಡಿದ್ದಾನೆ. ಪಶುಪಾಲನೆ, ಕೃಷಿ, ಕೈಗಾರಿಕೆ, ವ್ಯಾಪಾರ, ಬ್ಯಾಂಕು, ಸೇವೆ ಹೀಗೆ ವಿವಿಧ ವೃತ್ತಿಗಳಲ್ಲಿ ತೊಡಗಿರುವುದರಿಂದ ತನ್ನ ಸಾಮಾರ್ಥ್ಯಕ್ಕೆ ಅನುಗುಣವಾಗಿ ಆದಾಯವನ್ನು ಪಡೆಯುತ್ತಾನೆ. ಪಡೆದ ಆದಾಯದಿಂದ ದೈನಂದಿನ ಖರ್ಚು-ವೆಚ್ಚಗಳನ್ನು ಸರಿದೂಗಿಸುತ್ತಾನೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಅಲೆಮಾರಿ ಕುರುಬರು ತಮ್ಮ

ಜೀವನೋಪಾಯಕ್ಕಾಗಿ ಕುರಿ-ಮೇಕೆಗಳನ್ನು ಸಾಕಿದ್ದಾರೆ. ಅವುಗಳಿಂದ ಬಂದ ಆದಾಯ ದಿಂದಲೇ ಕೌಟುಂಬಿಕ ಖರ್ಚು-ವೆಚ್ಚಗಳನ್ನು ನಿರ್ವಹಿಸಬೇಕು. ಕುಟುಂಬದ ಆಹಾರ, ಉಡುಗೆ-ತೊಡುಗೆ, ವಸತಿಗಾಗಿ ಬಳಸುವ ಗುಡಾರ, ಕುರಿಮರಿಗಳನ್ನು ನಿಯಂತ್ರಿಸಲು ಕುರಿ-ಮರಿ ಬಲೆ, ಕುರಿಗಳಿಗೆ ಬಂದೊದಗುವ ರೋಗಗಳನ್ನು ನಿಯಂತ್ರಿಸಲು ಔಷಧ ಮತ್ತು ಚಿಕಿತ್ಸೆ, ಆಳುಮಕ್ಕಳ ಸಂಬಳ ಹಾಗೂ ಇವೆಲ್ಲದರ ಜೊತೆಗೆ ಹಬ್ಬ-ಹರಿದಿನಗಳು, ಜಾತ್ರೆ, ಮದುವೆ ಮುಂತಾದ ಆಚರಣೆಗಳಿಗೆ ಮಾಡುವ ಖರ್ಚು-ವೆಚ್ಚಗಳು, ಇವುಗಳ ಆಚರಣೆ ಸಮಯದಲ್ಲಿ ತಮ್ಮ ಗ್ರಾಮಗಳಿಗೆ ಹೋಗಿ ಬರುವ ಸಾರಿಗೆ ವೆಚ್ಚ ಇತ್ಯಾದಿ, ಇವೆಲ್ಲವನ್ನು ಕುರಿಗಳಿಂದ ಬಂದ ಆದಾಯದಿಂದಲೇ ಸರಿದೂಗಿಸಬೇಕು.

ಆಹಾರ ಧಾನ್ಯಗಳು

ಅಲೆಮಾರಿ ಕುರುಬರು ಹೆಚ್ಚಾಗಿ ಸಸ್ಯ ಆಹಾರಗಳನ್ನು ಬಳಸುತ್ತಾರೆ. ಅಪರೂಪಕ್ಕೊಮ್ಮೆಯಂತೆ ಮಾಂಸ ಸೇವಿಸುತ್ತಾರೆ. ಇವರು ಹೆಚ್ಚಾಗಿ ಬಳಸುವ ಆಹಾರ ಧಾನ್ಯಗಳೆಂದರೆ ಜೋಳ, ಅಕ್ಕಿ, ಅಕ್ಕಿನುಚ್ಚು, ಕಡ್ಲೆಬೇಳೆ, ಹೆಸರು, ಬಟಾಣಿ, ತರಕಾರಿ ಹಾಗೂ ಬೆಲ್ಲ, ಸಕ್ಕರೆ, ಚಹಾಪುಡಿ, ಒಣಮೆಣಸಿನ ಕಾಯಿ ಇತ್ಯಾದಿಗಳ ಮೇಲೆ ಹೆಚ್ಚು ಖರ್ಚು ಮಾಡುತ್ತಾರೆ. ಇವರಲ್ಲಿ ಹೈನೋತ್ಪನ್ನಗಳು ಸಾಕಷ್ಟು ದೊರೆಯುವುದರಿಂದ ತರಕಾರಿ ಮತ್ತು ಎಣ್ಣೆಯ ಮೇಲೆ ಖರ್ಚು ಮಾಡುವ ಹಣ ಕಡಿಮೆ. ಆಹಾರ ಧಾನ್ಯಗಳ ಮೇಲೆ ಖರ್ಚು ಮಾಡುವ ಹಣದ ಪ್ರಮಾಣವು ಕುಟುಂಬದ ಗಾತ್ರ ಮತ್ತು ಬೆಲೆಗಳನ್ನು ಅವಲಂಬಿಸಿರುತ್ತದೆ. ಇವನ್ನು ಸಾಮಾನ್ಯವಾಗಿ ಕುರಿ ತಬ್ಬಿದ ಸ್ಥಳದ ಸಮೀಪ ಪ್ರತಿವಾರ ಜರುಗುವ ಸಂತೆಗಳಲ್ಲಿ ತರುತ್ತಾರೆ. ಉದಾಹರಣೆಗೆ ಬಳ್ಳಾರಿ ಜಿಲ್ಲೆಯ ಸಿರುಗುಪ್ಪದಲ್ಲಿ ಆದಿತ್ಯವಾರ, ಕಮಲಾಪುರ ದಲ್ಲಿ ಸೋಮವಾರ, ಬಳ್ಳಾರಿಯಲ್ಲಿ ಶುಕ್ರವಾರ, ಹೊಸಪೇಟೆಯಲ್ಲಿ ಆದಿತ್ಯವಾರ, ಕಂಪ್ಲಿಯಲ್ಲಿ ಮಂಗಳವಾರ ದಂದು ಸಂತೆಗಳು ಜರುಗುತ್ತವೆ. ಇಂತಹ ಸಂತೆಗಳಿಗೆ ಬಂದು ಆಹಾರ ಧಾನ್ಯಗಳನ್ನು ಕೊಂಡು ಹೋಗುತ್ತಾರೆ.

ವರ್ಷಕ್ಕೆ ಬೇಕಾಗುವಷ್ಟು ಆಹಾರ ಧಾನ್ಯಗಳನ್ನು ಸಂಗ್ರಹಿಸಿ ಸಂರಕ್ಷಿಸಲು ಗುಡಾರದಲ್ಲಿ ಸಾಧ್ಯವಿಲ್ಲದ್ದರಿಂದ ವಾರದಿಂದ ತಿಂಗಳಿಗಾಗುವಷ್ಟು ಖರೀದಿ ಮಾಡುತ್ತಾರೆ. ಅವು ಖಾಲಿ ಯಾಗುತ್ತಿದಂತೆ ಮತ್ತೆ ಸಂತೆಗೆ ಬಂದು ತೆಗೆದುಕೊಂಡು ಹೋಗುವರು. ಇವರು ಹೆಚ್ಚಾಗಿ ಜೋಳ ಬಳಸುವುದರಿಂದ ಅನುಕೂಲಸ್ಥರಾಗಿದ್ದವರು ಮತ್ತು ಕುಟುಂಬದ ಗಾತ್ರ ಹೆಚ್ಚಿರುವವರು ಒಂದು ವರ್ಷಕ್ಕೆ ಬೇಕಾಗುವಷ್ಟು ಜೋಳವನ್ನು ಸುಗ್ಗಿಯ ಕಾಲದಲ್ಲಿ ಖರೀದಿ ಮಾಡುತ್ತಾರೆ. ತಮಗೆ ಅನುಕೂಲವಾಗಿರುವ ಗ್ರಾಮಸ್ಥರ ಮನೆಯಲ್ಲಿ ಸಂಗ್ರಹಿಸುತ್ತಾರೆ. ಇದನ್ನು ತಿಂಗಳಿಗೆ ಅಥವಾ ಎರಡು ತಿಂಗಳಿಗೊಮ್ಮೆ ಗುಡಾರದಲ್ಲಿರುವ ಜೋಳ ಖಾಲಿ ಯಾದಂತೆಲ್ಲ ತೆಗೆದುಕೊಂಡು ಬರುತ್ತಾರೆ. ಸುಗ್ಗಿಯ ಕಾಲದಲ್ಲಿ ಆಹಾರಧಾನ್ಯಗಳ ಬೆಲೆಗಳು ಕಡಿಮೆ ಇರುತ್ತವೆ. ಇಂತಹ ಸಮಯದಲ್ಲಿ ಕೊಂಡರೆ ಸ್ವಲ್ಪ ಹಣ ಉಳಿತಾಯವಾಗುತ್ತದೆ. ಬಡವರಾದವರು ಪ್ರತಿವಾರ ಸಂತೆಯಲ್ಲಿ ಅಥವಾ ಕುರಿ ತಬ್ಬಿದ ಗ್ರಾಮದ ಅಂಗಡಿಗಳಲ್ಲಿ ಕೊಂಡು ಜೀವನ ಸಾಗಿಸುತ್ತಾರೆ.

**ಕಂಬಳಿ**

ಅಲೆಮಾರಿ ಕುರುಬರು ಚಳಿ, ಗಾಳಿ, ಮಳೆ, ಬಿಸಿಲುಗಳಿಂದ ತಮ್ಮ ದೇಹಗಳನ್ನು ರಕ್ಷಿಸಿ ಕೊಳ್ಳಲು ಕಂಬಳಿಯನ್ನು ಬಿಟ್ಟು ಬೇರ್‍ಯಾವುದನ್ನು ಬಳಸುವುದಿಲ್ಲ. ಇದನ್ನು ಹೊದಲು, ಹಾಸಲು, ಹೊದೆಯಲು ಬಳಸುತ್ತಾರೆ. ಕಂಬಳಿ ಉಷ್ಣ ಅವಾಹಕವಾದ್ದರಿಂದ ದೇಹದ ಉಷ್ಣತೆಯನ್ನು ಒಳಗೆ ಕಾಪಾಡುವುದಲ್ಲದೆ ಪರಿಸರದ ಶೈತ್ಯ ಒಳಗೆ ಬಾರದಂತೆಯು ತಡೆಯುತ್ತದೆ. ಚಳಿಗಾಲದಲ್ಲಿ ಬೆಚ್ಚನೆ ನೀಡಿ, ಮಳೆಗಾಲದಲ್ಲಿ ನೀರನ್ನು ಹಿಡಿದಿಟ್ಟುಕೊಳ್ಳದೆ ಇಳಿಬಿಟ್ಟು, ಬೇಸಿಗೆಯಲ್ಲಿ ತಂಪನ್ನು ನೀಡುತ್ತದೆ. ಇಷ್ಟೆಲ್ಲ ಅನುಕೂಲ ಗಳಿರುವುದರಿಂದಲೇ ಪ್ರತಿಯೊಂದಕ್ಕೂ ಕಂಬಳಿಯನ್ನು ಬಳಸುತ್ತಾರೆ.

ಇವರು ಉಪಯೋಗಿಸುವ ಕಂಬಳಿಗಳ ಬೆಲೆ ಕಡಿಮೆ ಇದ್ದು ಒರಟಾಗಿರುತ್ತವೆ. ಕಂಬಳಿಗಳನ್ನು ಇವರು ಸಾಕುವ ಬಳ್ಳಾರಿ ಮತ್ತು ಡೆಕ್ಕನ್ ತಳಿಯ ಕುರಿಯ ಉಣ್ಣೆಗಳಿಂದಲೇ ಹೆಚ್ಚಾಗಿ ತಯಾರು ಮಾಡಲಾಗುತ್ತದೆ. ಇಂತಹವನ್ನು ಬಳಸಲು ಕಾರಣ ತಮ್ಮ ಬದುಕುಗಳ ಉಣ್ಣೆಯಿಂದ ತಯಾರು ಮಾಡಿದವು ಎಂಬ ಅಭಿಮಾನ ಒಂದಾದರೆ, ಇನ್ನೊಂದು ಕುಟುಂಬದ ಆರ್ಥಿಕ ಪರಿಸ್ಥಿತಿ ಕಾರಣವಾಗಿದೆ. ಅವರು ಸದಾ ಅಡವಿಯಲ್ಲೆ ಜೀವನ ಕಳೆಯುವುದರಿಂದ ಒರಟು ಕಂಬಳಿಗಳೇ ಬೇಕಾಗುತ್ತವೆ. ಕಲ್ಲು, ಮಣ್ಣು, ಕಟ್ಟಿಗೆಗಳ ಮೇಲೆ ಹಾಸಲು, ಬೇಸಿಗೆ ಕಾಲದಲ್ಲಿ ಕುರಿ ಮರಿಗಳಿಗೆ ನೆರಳೊದಗಿಸಲು, ಮುಂಜಾನೆ ಮರಿಗಳಿಗೆ ಚಿಗುರುಮೇವು ತರಲು, ಸಾಮಾನುಗಳನ್ನು ಕಟ್ಟಿ ಕುದುರೆಯ ಮೇಲೆ ಹೇರಿ ಸಾಗಿಸಲು, ಮಳೆಬಂದಾಗ ಹೊದೆಯಲು ಇತ್ಯಾದಿಗಳಿಗೆ ಕಂಬಳಿ ಬಳಕೆಯಾಗುತ್ತದೆ. ಇಂಥವುಗಳಿಗೆಲ್ಲ ಬಳಸುವುದರಿಂದ ಪ್ರತಿಯೊಬ್ಬರಿಗೆ ವರ್ಷಕ್ಕೆ ಸರಾಸರಿಯಾಗಿ ಒಂದು ಕಂಬಳಿ ಬೇಕಾಗುತ್ತದೆ. ಕಂಬಳಿಯ ಬೆಲೆಗಳು ಸಾಪೇಕ್ಷವಾಗಿ ಭಿನ್ನವಾಗಿದ್ದು ಗುಣಮಟ್ಟದ ಮೇಲೆ ನಿರ್ಧಾರವಾಗುತ್ತದೆ. ಸಾಮಾನ್ಯವಾಗಿ ೩೦೦ ರೂ.ಗಳಿಂದ ೧೨೦೦ ರೂ.ಗಳವರೆಗೆ ಮಾರಾಟವಾಗುತ್ತವೆ. ಇವುಗಳಲ್ಲಿಯೆ ಉತ್ತಮವಾದವು ಇನ್ನೂ ಹೆಚ್ಚಿನ ಬೆಲೆಗೆ ಮಾರಾಟವಾಗುವವು. ಅಲೆಮಾರಿ ಕುರುಬರು ಮಾತ್ರ ಕನಿಷ್ಟ ಬೆಲೆಯಿಂದ ೫೦೦ ರೂ.ಗಳವರೆಗೆ ಕಂಬಳಿಯನ್ನು ಕೊಂಡು ಕೊಳ್ಳುತ್ತಾರೆ. ಕಂಬಳಿಗಳ ಬಳಕೆಯು ಕುಟುಂಬದ ಗಾತ್ರವನ್ನು ಅವಲಂಬಿಸಿದ್ದು ಇವುಗಳ ಮೇಲಿನ ವೆಚ್ಚವು ಕುರಿಗಳಿಂದ ಬಂದ ಆದಾಯದಿಂದಲೇ ನಿರ್ವಹಿಸಬೇಕು. ಇದನ್ನು ಸಿಂಧನೂರು, ಚಳ್ಳಕೆರೆ, ರಾಣಿಬೆನ್ನೂರು, ದಾವಣಗೆರೆ, ಹಾವೇರಿ, ಹುಬ್ಬಳ್ಳಿ, ನಿಪ್ಪಾಣಿ ಮುಂತಾದ ಪಟ್ಟಣಗಳಲ್ಲಿ ಕೊಂಡು ತರುತ್ತಾರೆ.

"ಕಂಬಳಿ ಜೀವಂತ ಪೀಠ. ಹುಲಿ, ಜಿಂಕೆ ಚರ್ಮಗಳ ಪೀಠ ಸತ್ತಪೀಠ. ಸತ್ಯಸಂಧ ಶಾಂತಿ ಪ್ರಾಣಿಯಾದ ಕುರಿಯು ಜೀವಂತ ಇರುವಾಗಲೇ ಅದರಿಂದ ಉಣ್ಣೆಯನ್ನು ಪಡೆದು ಕಂಬಳಿ ತಯಾರಿಸುವುದರಿಂದ ಇದು ಜೀವಂತ ಪೀಠವಾಗುವುದು. ಹಿಂಸಾ ಪ್ರಾಣಿಯಾದ ಹುಲಿಯ ಮರಣದ ನಂತರ ಅದರ ಚರ್ಮ ಸುಲಿಯುವುದರಿಂದ ಅದು ಸತ್ತ ಪೀಠ ವಾಗುವುದು. ಹಾಗಂತಲೇ ಕಂಬಳಿ ಪೀಠಕ್ಕೆ ಮಹತ್ವವಿರುವುದು"(ಮೈತ್ರಿ ಕೆ ಎಂ:೧೯೯೬:೬).

ಕಂಬಳಿ ಯಾವಾಗಲೂ ಸಜೀವ. ಏಕೆಂದರೆ ಕುರಿಯು ಬದುಕಿರುವಾಗಲೇ ಅದರ ಉಣ್ಣೆ ತೆಗೆದು ಕಂಬಳಿ ತಯಾರು ಮಾಡಲಾಗುತ್ತದೆ. ಇದಕ್ಕಾಗಿಯೇ ಎಲ್ಲಾ ಶುಭ-ಮಂಗಳ ಕಾರ್ಯಗಳಿಗೆ ಬಳಸುತ್ತಾರೆ. ಇದಕ್ಕೆ ಮೈಲಿಗೆ ಇಲ್ಲ. ಆದ್ದರಿಂದಲೇ ದೈವದ ಮೇಲೆ ಅಪಾರ ನಂಬಿಕೆ ಇಟ್ಟಿರುವ ಇವರು ಪ್ರತಿಯೊಂದು ಶುಭಕಾರ್ಯ ಮಾಡುವಾಗ ಹಾಗೂ ಹಬ್ಬ, ಜಾತ್ರೆ, ಹುಣ್ಣಿಮೆ, ಅಮವಾಸ್ಯೆ, ಆದಿತ್ಯವಾರ ಇತ್ಯಾದಿ ದಿನಗಳಲ್ಲಿ ತಮ್ಮ ಮನೆದೇವರು ಹಾಗೂ ಆರಾಧ್ಯ ದೇವರುಗಳ ಪೂಜೆಗೈಯುವಾಗ ಕಂಬಳಿಯ ಗದ್ದುಗೆಯನ್ನು ಹಾಕಿ ಪೂಜೆ ಸಲ್ಲಿಸುತ್ತಾರೆ. ಇವರು ಆರಾಧಿಸುವ ಎಲ್ಲಾ ದೇವರುಗಳ ಪೂಜೆಗೆ ಒಂದೇ ತರಹದ ಕಂಬಳಿ ಬಳಸುವುದಿಲ್ಲ. ಇಂತಹ ದೇವರಿಗೆ ಇಂತಹದೇ ಕಂಬಳಿಯಿಂದ ಪೂಜಿಸಬೇಕೆಂಬ ಪದ್ಧತಿ ಇವರಲ್ಲಿದೆ. ಇದು ಕಂಬಳಿಯ ಕೊನೆ(ಅಂಚಿನಲ್ಲಿ)ಯಲ್ಲಿರುವ ಬಿಳಿ ಉಣ್ಣೆಯ ಎಳೆ ಅಥವಾ ಪಟ್ಟಿಯಿಂದ ನಿರ್ಧಾರ ವಾಗುತ್ತದೆ. ಅದನ್ನು ಅಲೆಮಾರಿ ಕುರುಬರು 'ಏಡು' (ಪಟ್ಟಿ) ಎಂದು ಕರೆಯುತ್ತಾರೆ. ಉದಾಹರಣೆಗೆ ಬೀರದೇವರು, ಮಾಳಿಂಗರಾಯ ದೇವರಿಗೆ ಎರಡೂವರೆ ಏಡು ಇರುವ ಕಂಬಳಿಯನ್ನು ಪೂಜೆಗೆ ಬಳಸಿದರೆ ಅಮೋಘಸಿದ್ಧ, ಕರಿಸಿದ್ಧನಿಗೆ ಮೂರು ಏಡಿನ ಕಂಬಳಿ ಮತ್ತು ರೇವಣ್ಣಸಿದ್ಧನಿಗೆ ಐದು ಏಡಿನ ಕಂಬಳಿ ಬಳಸಬೇಕೆಂಬ ಪದ್ಧತಿ ಇದೆ.

**ಕಂಬಳಿ ತಯಾರಿಕೆಯ ವಿಧಾನ**

+ **ಉಣ್ಣೆ ಕತ್ತರಿಸುವುದು :** ಕಂಬಳಿ ತಯಾರಿಕೆಯ ಮೊದಲ ಹಂತ ಕುರಿಗಳ ಉಣ್ಣೆ ಕತ್ತರಿಸುವುದು. ಇದನ್ನು ಹಲವು ಕುರುಬ ಕುಟುಂಬಗಳು ವೃತ್ತಿಯನ್ನಾಗಿ ಮಾಡಿಕೊಂಡಿದ್ದಾರೆ. ಯಂತ್ರಗಳು ಬರುವ ಮುಂಚೆ ಉಣ್ಣೆ ಕತ್ತರಿಸುವುದಕ್ಕೆ ಸಂಪೂರ್ಣವಾಗಿ ಇವರನ್ನೇ ಅವಲಂಬಿಸ ಲಾಗುತ್ತಿತ್ತು. ಅಲೆಮಾರಿ ಕುರುಬರು ಇಂದಿಗೂ ಇವರನ್ನೇ ಹೆಚ್ಚಾಗಿ ಅವಲಂಬಿಸಿದ್ದಾರೆ, ಕೆಲವೊಮ್ಮೆ ತಾವೇ ಕತ್ತರಿಸುತ್ತಾರೆ.

+ **ನೂಲುವುದು :** ಕಂಬಳಿ ನೇಯ್ಗೆಯಲ್ಲಿ ನೂಲುವುದು ಪ್ರಮುಖ ಕಾರ್ಯ. ನೂಲು ಯಾವ ಮಟ್ಟದಲ್ಲಿರುತ್ತದೆಯೋ ಕಂಬಳಿ ಆ ಮಟ್ಟದಲ್ಲಿರುತ್ತದೆ. ಇಲ್ಲಿ ಚರಕ ಪ್ರಮುಖ ಪಾತ್ರವಹಿಸುತ್ತದೆ. ಸಾಮಾನ್ಯವಾಗಿ ನೂಲುವ ಕೆಲಸವನ್ನು ಕಂಬಳಿ ತಯಾರಿಸುವ ಕುಟುಂಬದ ಸ್ತ್ರೀಯರು ನಿರ್ವಹಿಸುತ್ತಾರೆ. ಕೆಲವು ಸಂದರ್ಭಗಳಲ್ಲಿ ಕೂಲಿಕೊಟ್ಟು ನೂಲಿಸುವುದು ಉಂಟು. ಉದಾಹರಣೆ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ಮತ್ತು ಮೊಳಕಾಲ್ಮೂರು ತಾಲ್ಲೂಕಿನ ಕುರುಬ ಕುಟುಂಬಗಳು ಈ ವೃತ್ತಿಯಲ್ಲಿ ತೊಡಗಿರು ವುದನ್ನು ಕಾಣಬಹುದಾಗಿದೆ. ಗ್ರಾಮದಲ್ಲಿರುವ ಅಲೆಮಾರಿ ಕುರುಬರ ಹಿರಿಯರು ಈ ಕಾರ್ಯವನ್ನು ಮಾಡುತ್ತಾರೆ. ನೂಲಿನಲ್ಲಿ ಅನೇಕ ವಿಧಗಳು ಉಂಟು. ೧. ಹುರಿಗಂಬಳಿ ನೂಲು ಅಥವಾ ಒರಟುಗಂಬಳಿ ನೂಲು ೨. ಉಬ್ಬುಗಂಬಳಿ ನೂಲು ೩. ಸಣ್ಣಗಂಬಳಿ ನೂಲು ಇತ್ಯಾದಿ. ಒಟ್ಟಿನಲ್ಲಿ ನೂಲಿನ ಗುಣಮಟ್ಟದಂತೆ ಕಂಬಳಿ ತಯಾರಾಗುತ್ತದೆ.

+ **ಅಂಬಲಿ ತಯಾರಿಕೆ :** ಕಂಬಳಿ ತಯಾರಿಕೆಯಲ್ಲಿ ಅಂಬಲಿಯ ಪಾತ್ರ ಹಿರಿದಾದುದು.

ಇದರ ತಯಾರಿಕೆಯೇ ಒಂದು ವಿಶಿಷ್ಟ ರೀತಿಯಾದದು. ಮೊದಲು ಒಳ್ಳೆಯ ಹುಣಸೇ ಬೀಜವನ್ನು ಹದವರಿತು ಹುರಿಯಬೇಕು. ನಂತರ ಅದರ ಮೇಲಿನ ಸಿಪ್ಪೆ ತೆಗೆದು ಬಿಳಿ ಪೊಪ್ಪುಗಳನ್ನು ಸುಮಾರು ಒಂದು ರಾತ್ರಿ ನೆನೆಹಾಕಿ, ಚೆನ್ನಾಗಿ ನೆನೆದ ಬೀಜವನ್ನು ಒರಳಿನಲ್ಲಿ ಅಥವಾ ರುಬ್ಬುವ ಗುಂಡಲ್ಲಿ ರುಬ್ಬಿ ನಂತರ ನೀರಿನಲ್ಲಿ ಚೆನ್ನಾಗಿ ಕುದಿಸಿದಾಗ ಮುದ್ದೆ ಯಂತಾಗುತ್ತದೆ. ಈ ಮುದ್ದೆಯನ್ನು ಮತ್ತೇ ನೀರಿನಲ್ಲಿ ಕಲಿಸಿದರೆ ಅದು ಅಂಟು-ಅಂಟಾದ ಗಂಜಿಯಂತೆ ಸರಿಯಾಗುತ್ತದೆ. ಇದನ್ನು ಹುಣಸೆ ಅಂಬಲಿ ಅಥವಾ ಗಂಜಿಸರಿ ಎಂದೆಲ್ಲಾ ಕರೆಯಲಾಗುತ್ತದೆ.

• **ಹಾಸು ಹೊಯ್ಯುವದು :** ಹಾಸು ಎಂದರೆ ಎಳೆಗಳು ಬಿಡಿ-ಬಿಡಿಯಾಗಿ ಒಂದರ ಪಕ್ಕದಲ್ಲೊಂದು ಬರುವಂತೆ ಜೋಡಿಸುವ ಕ್ರೀಯೆ. ಹೀಗೆ ಹಾಸು ಹೊಯ್ದ ನೂಲನ್ನು ಒಂದು ಕ್ರಮದಲ್ಲಿ ಕಟ್ಟಿ ತಿಳಿಯಾದ ಹುಣಸೆ ಸರಿ(ಅಂಬಲಿ)ಯಲ್ಲಿ ಅದ್ದಿ ಬಿಸಿಲಿನಲ್ಲಿಟ್ಟು ಕೊಂಡು ಕುಂಚಿಕೆ ಎಂಬ ಉಪಕರಣದ ಸಹಾಯದಿಂದ ನೂಲನ್ನು ನಯಗೊಳಿಸಲಾಗುತ್ತದೆ. ಆಗ ನೂಲಿನ ಎಳೆಗಳು ಒಂದಕ್ಕೊಂದು ಅಂಟಿದೆ ಬಿಡಿ ಬಿಡಿಯಾಗುತ್ತವೆ.

• **ಮಗ್ಗಕ್ಕೆ ಏರಿಸುವುದು :** ಹಾಸು ಹೊಯ್ದು ಬಿಸಲಿಗೆ ಒಣಗಿದ ನಂತರ ಅದನ್ನು ಮಗ್ಗಕ್ಕೆ ಏರಿಸುವುದು. ಹೋಳು ಎನ್ನುವ ಸಾಧನದಲ್ಲಿ ನೂಲನ್ನು ಜೋಡಿಸಿ ಮಗ್ಗದಲ್ಲಿಟ್ಟು ನೇಯಲಾಗುತ್ತದೆ. ಈ ಹೋಳುಗಳು ಒಂಬತ್ತು ಮೊಳ ಉದ್ದ ಮತ್ತು ಮೂರು ಮೊಳ ಅಗಲವಿರುತ್ತವೆ. ಹೀಗೆ ನೇಯ್ದು ಸಿದ್ಧವಾದ ಕಂಬಳಿಯ ಹೋಳುಗಳಿಗೆ ಮತ್ತೇ ಹುಣಸೆ ಸರಿ ಸವರಿ ಬಿಸಿಲಿನಲ್ಲಿ ನೇತು ಹಾಕಿ ಒಣಗಿಸಲಾಗುತ್ತದೆ. ಈ ರೀತಿ ಕ್ರಮಬದ್ಧವಾಗಿ ಒಣಗಿದ ನೇಯ್ದ ಕಂಬಳಿಯನ್ನು ಮಡಚಿ ಮಾರಾಟಕ್ಕೆ ಕಳಸಿಕೊಡಲಾಗುತ್ತದೆ.

೨ **ಗದ್ದುಗೆ ಕಂಬಳಿ :** ಇದನ್ನು ಬಿಳಿ ಉಣ್ಣೆಯಿಂದ ನೂಲು ತೆಗೆದು ತಯಾರು ಮಾಡುತ್ತಾರೆ. ಗದ್ದುಗೆ ಎಂದರೆ ಕೂಡುವ ಸ್ಥಳ. ಧಾರ್ಮಿಕ ಗುರುಗಳು ಗದ್ದುಗೆಗೆ ಹಾಗೂ ಪವಿತ್ರ ಕಾರ್ಯಗಳಲ್ಲಿ ಉಪಯೋಗಿಸುವುದನ್ನು ಗದ್ದುಗೆ ಕಂಬಳಿ ಎನ್ನುವರು. ಈ ಕಂಬಳಿ ವಿಶೇಷವಾಗಿ ವೈದಿಕರ ಉಪಯೋಗಕ್ಕಾಗಿ ತಯಾರಾಗುತ್ತಿತ್ತು.

೩ **ಕರಿಯ ಕಂತೆ :** ಅಲೆಮಾರಿ ಕುರುಬರ ಗುರು ರೇವಣಸಿದ್ದೇಶ್ವರ ತನ್ನ ಅವತಾರ ಕಾಲದಲ್ಲಿ ಕುರಿ ಕಾಯುತ್ತಿದ್ದನೆಂದು ಅದರಿಂದಲೇ ಅಲೆಮಾರಿ ಕುರುಬರಿಗೆ ಕುರಿಸಾಕಣೆಯ ಪರಂಪರೆ ಉಂಟಾಯಿ ತೆಂದು ನಂಬಿಕೆಯಿದೆ. ಕಂತೆ ಎಂದರೆ ಕೈಯಿಂದ ಹೆಣೆದು ನಿರ್ಮಿಸಿ ಕೊಂಡ ಒಂದು ಉಣ್ಣೆಯ ವಸ್ತ್ರವಾಗಿದ್ದು, ಪೂಜೆಯ ಸಮಯದಲ್ಲಿ ಒಡೆಯರು ತೊಡುವ ವಸ್ತ್ರ ಎಂದು ಅರ್ಥ. ಈ ಕರಿಯ ಕಂತೆಯ ಪ್ರಸ್ತಾಪ ಕುರುಬ ಜನಾಂಗದ ನಂಬಿಕೆ ಮತ್ತು ಸಂಪ್ರದಾಯಗಳನ್ನು ವಿವರಿಸುವ 'ತಗರ ಪವಾಡ' ಪ್ರಾಚೀನ ಗ್ರಂಥದಲ್ಲಿ ಬರುತ್ತದೆ.

ಇದು ಸಾಮಾನ್ಯವಾಗಿ ಕಂಬಳಿಗಳ ನೇಯ್ಗೆಯ ಪದ್ಧತಿಗಿಂತ ವಿಶಿಷ್ಟ ರೀತಿಯಲ್ಲಿದೆ. ಕರಿಯ ಕಂತೆ ತೊಡುವವರು ಗುರು ಪರಂಪರೆಯಲ್ಲಿ ಬಂದ ಒಡೆಯರ ಮನೆತನದವರು. ಮೊದಲು ಕಪ್ಪು ಟಗರು ಮರಿಗೆ ಮಠದ ಒಡೆಯರು (ಗುರುಗಳು) ಕರಿಯ ಕಂತೆ ಎಂದು

ಗುರುತಿಸಿ ನಾಮಕರಣ ಮಾಡಿ ಅದರ ಮೇಲೆ ಬಿಲ್ವಪತ್ರೆ, ವಿಭೂತಿ, ತೀರ್ಥ ಹಾಕುತ್ತಾರೆ (ಶಿವಪೂಜೆಯ ಪವಿತ್ರ ವಸ್ತುಗಳು). ಆ ಮರಿ ದೊಡ್ಡದಾಗಿ ಬೆಳೆದು ಉತ್ಕೃಷ್ಟ ಉಣ್ಣೆಯಿಂದ ತುಂಬಿ ಬೆಳೆದಾಗ ಒಡೆಯರ ಪೈಕಿ ಒಬ್ಬರು ಮಡಿಯಿಂದ ಹೋಗಿ ಮೊದಲು ಉಣ್ಣೆಯನ್ನು ಕತ್ತರಿಸಿ ಸಂಗ್ರಹಿಸುತ್ತಾರೆ. ನಂತರ ನಾಲ್ಕೈದು ಜನ ಒಡೆಯರು ಸ್ನಾನ-ಮಡಿಗಳಿಂದ ಉಪವಾಸವಿದ್ದು, ಕತ್ತರಿಸಿದ ಉಣ್ಣೆಯನ್ನು ರೇವಣ್ಣಸಿದ್ಧೇಶ್ವರ ಮಠದ ಗರ್ಭ ಗುಡಿಯಲ್ಲಿ ರೇವಣ್ಣಸಿದ್ಧೇಶ್ವರ ಸಮ್ಮುಖದಲ್ಲಿ ಪೂಜಿಸುತ್ತಾರೆ. ನಂತರ ಆ ಉಣ್ಣೆಯನ್ನು ಕೈಯಿಂದಲೇ ಹಿಂಜಿ-ಹಿಂಜಿ ಕೈಯಿಂದಲೇ ದಾರ ತೆಗೆಯುತ್ತಾರೆ. ಸುಮಾರು ೯-೧೦ ಇಂಚು ಅಗಲವಿರುವ ವಸ್ತ್ರ ಸಿದ್ಧಗೊಳಿಸುತ್ತಾರೆ. ಈ ಕಂತೆ ನೋಡಲು ಕರಿನಾಗರ ಹಾವಿನ ಹೆಡೆಯಂತೆ ಕಾಣುತ್ತದೆ. ಇದನ್ನು ಸಿದ್ಧಪಡಿಸುವಾಗ ಈರಗಾರರು ನೆರವಾಗುತ್ತಾರೆ. ಅಲೆಮಾರಿ ಕುರುಬರು ಸಮುದಾಯದಲ್ಲಿ ಈರಗಾರ ಎಂಬ ಮನೆತನದ ಹೆಸರಿನವರಿರುವುದನ್ನು ಗಮನಿಸಬಹುದು. ಕಂತೆ ಸಿದ್ಧವಾದ ನಂತರ ಅದನ್ನು ರೇವಣ್ಣಸಿದ್ಧೇಶ್ವರನಿಗೆ ಉಡಿಸುವ ಪವಿತ್ರ ಸಮಾರಂಭ ಡೊಳ್ಳಿನ ವಾದ್ಯಗಳೊಂದಿಗೆ ವೈಭವಯುತವಾಗಿ ಜರಗುತ್ತದೆ. ಆ ದಿನದಂದು ಅಲೆಮಾರಿ ಕುರುಬರ ಗುರುಗಳಾದ ಒಡೆಯರು ಮಕ್ಕಳಿಗೆ ದೀಕ್ಷೆ ನೀಡುತ್ತಾರೆ.

### ಭಂಡಾರ

"ಭಂಡಾರ ಎಂದರೆ 'ಸಂಪತ್ತು'. ಈ ಸಂಪತ್ತನ್ನು ಆರಾಧ್ಯ ದೈವಗಳ ಅರ್ಚನೆಯಲ್ಲಿ, ದೇವರು ಗಳ ಭಾವಚಿತ್ರ ಅಥವಾ ಚಿಕ್ಕ ಮೂರ್ತಿಗಳ ಪೂಜೆ ಗೈಯುವಾಗ ಬಳಸುವ ಹಳದಿ ಬಣ್ಣದ ಪುಡಿ" (ಎಚ್.ಸಿ. ಹಿರೇಮಠ:೧೯೯೩:೩೮). ಈ ಪುಡಿಯಲ್ಲಿ ಔಷಧದ ಗುಣವಿದೆ. ಈ ಗುಣವಿರುವುದರಿಂದಲೇ ಅಲೆಮಾರಿ ಕುರುಬರು ಸಾಮಾನ್ಯವಾಗಿ ದಿನಂಪ್ರತಿ, ಕಡ್ಡಾಯವಾಗಿ ಹಬ್ಬ, ಜಾತ್ರೆ, ಹುಣ್ಣಿಮೆ, ಅಮವಾಸ್ಯೆ, ಆದಿತ್ಯವಾರಗಳೆಂದು ಸ್ನಾನ ಮಾಡಿ ದೇವರಿಗೆ ಪೂಜೆಗೈದು ಶ್ರದ್ಧೆಯಿಂದ ತಮ್ಮ ಹಣೆಗೆ ಹಚ್ಚಿಕೊಳ್ಳುವರು. ಅಲೆಮಾರಿ ಕುರುಬರು ಬಳಸುವ ಭಂಡಾರವನ್ನು ಎರಡು ದೃಷ್ಟಿಕೋನಗಳಲ್ಲಿ ಅರ್ಥೈಸಬಹುದು. ಒಂದನೆಯದು ಆರ್ಥಿಕ ದೃಷ್ಟಿಕೋನ, ಎರಡನೆಯದಾಗಿ ಧಾರ್ಮಿಕ ದೃಷ್ಟಿಕೋನ.

ಆರ್ಥಿಕ ದೃಷ್ಟಿಕೋನ : ಈ ವಿಚಾರವಾಗಿ ನೋಡಿದಾಗ ಭಂಡಾರ ವೆಚ್ಚದ ಮೂಲವಾಗಿ ಪರಿಗಣಿತವಾಗುತ್ತದೆ. ಭಂಡಾರವಿಲ್ಲದೆ ಯಾವುದೇ ದೈವಿಕ ಕಾರ್ಯಚರಣೆಗಳನ್ನು ಕೈಗೊಳ್ಳಲಾರರು. ಇದರ ಬಳಕೆ ಕುಟುಂಬದ ಗಾತ್ರವನ್ನು ಅವಲಂಬಿಸಿರುತ್ತದೆ. ಸಾಮಾನ್ಯವಾಗಿ ಕುಟುಂಬ ಒಂದಕ್ಕೆ ಸರಾಸರಿಯಾಗಿ ೮ ರಿಂದ ೧೨ ಕೆ.ಜಿ.ಯವರೆಗೆ ಬಳಕೆಯಾಗುತ್ತದೆಂದು ತಿಳಿದು ಬಂದಿದೆ. ಇದರ ಬೆಲೆಯು ಭಿನ್ನವಾಗಿದ್ದು ಗುಣಮಟ್ಟವನ್ನು ಅವಲಂಬಿಸಿರುತ್ತದೆ. ಸಾಮಾನ್ಯವಾಗಿ ಒಂದು ಕೆ.ಜಿ.ಗೆ ೨೫ ರಿಂದ ೪೦ ರೂ.ಗಳವರೆಗೆ ಬೆಲೆ ಕೊಟ್ಟು ಕೊಂಡುಕೊಳ್ಳುತ್ತಾರೆ. ಒಂದು ಕುಟುಂಬವು ಭಂಡಾರದ ಮೇಲೆ ವರ್ಷಕ್ಕೆ ಸುಮಾರು ೨೦೦ ರಿಂದ ೫೦೦ ರೂ.ವರೆಗೆ ವ್ಯಯ ಮಾಡುತ್ತದೆ. ತಮ್ಮ ದೈನಂದಿನ ಬದುಕಿನ ಸಮಸ್ಯೆಗಳು ಪರಿಹಾರವಾಗಲು, ಕುರಿಗಳಿಗೆ ಬರುವ ರೋಗ ರುಜಿನಗಳು ನಿಯಂತ್ರಣ

ದಲ್ಲಿರಲು ಮತ್ತು ವಾಸಿಯಾಗಲು ಇತ್ಯಾದಿ ಉದ್ದೇಶ ಈಡೇರಿಕೆಗಾಗಿ ದೇವರಲ್ಲಿ ಭಂಡಾರ ಹರಕೆಯ ಮೂಲಕ ಮೊರೆ ಹೋಗುತ್ತಾರೆ. ಹರಕೆ ಈಡೇರಿದರೆ ಇಂತಿಷ್ಟು ಭಂಡಾರ ಹಾರಿಸುತ್ತೇವೆ (ಉಗ್ಗುತ್ತೇವೆ) ಎಂದು ಬೇಡಿಕೊಳ್ಳುತ್ತಾರೆ. ಇಂತಹ ಹರಕೆಗಳು ಸಾಮಾನ್ಯವಾಗಿ ೨೫ ರಿಂದ ೫೦ ಕೆ.ಜಿ. ವರೆಗೆ ಇರುತ್ತದೆ. ದೇವರ ಹಬ್ಬ ಅಥವಾ ಜಾತ್ರೆಗಳೆಂದು ಹರಕೆ ನೆರವೇರಿಸುತ್ತಾರೆ. ಇವುಗಳಿಗೆಲ್ಲ ತಗಲುವ ಖರ್ಚು-ವೆಚ್ಚಗಳನ್ನು ಕುರಿಗಳಿಂದ ಬಂದ ಆದಾಯದಿಂದಲೇ ನಿರ್ವಹಿಸುತ್ತಾರೆ.

ದೈವಿಕ ದೃಷ್ಟಿಕೋನ : ಧಾರ್ಮಿಕ ದೃಷ್ಟಿಕೋನದ ಹಿನ್ನೆಲೆಯಲ್ಲಿ ಹಣ ಅಥವಾ ದುಡ್ಡು ಗಣನೆಗೆ ಬರುವುದಿಲ್ಲ. ಇಲ್ಲಿ ದೇವರ ಮೇಲಿಟ್ಟಿರುವ ನಂಬಿಕೆ ಹಾಗೂ ಭಕ್ತಿ ಪ್ರಮುಖ ವಾಗುತ್ತದೆ. ಇವರು ತಮ್ಮ ಆರಾಧ್ಯ ದೈವಗಳಾದ ಬೀರಪ್ಪ, ಮಾಳಿಂಗರಾಯ, ಅಮೋಘ ಸಿದ್ಧ, ಕರಿಸಿದ್ಧ, ಅರಣ್ಯಸಿದ್ಧ, ಮಾಯಮ್ಮ ಇತ್ಯಾದಿ ದೇವರುಗಳ ಪೂಜೆ, ಉತ್ಸವ, ಜಾತ್ರೆ ಸಂದರ್ಭಗಳಲ್ಲಿ ಭಂಡಾರವನ್ನು ದೇವರಿಗೆ ಹಚ್ಚುವುದು ಸಂಪ್ರದಾಯವಾಗಿದೆ. ದೇವರು ಪೂಜೆಯ ನಂತರ ಭಕ್ತರು ಭಂಡಾರವನ್ನು ಭಕ್ತಿಯಿಂದ ಹಣೆಗೆ ಹಚ್ಚಿಕೊಳ್ಳುವುದನ್ನು ಮರೆಯುವುದಿಲ್ಲ. ಜಾತ್ರೆಗಳ ಸಂದರ್ಭದಲ್ಲಿ ಭಂಡಾರದ್ದೇ ವೈಭವ. ಆ ಸಂದರ್ಭಗಳಲ್ಲಿ ಗುಡಿಯ ಆವರಣ, ಗೋಪುರ ಎಲ್ಲವೂ ಭಂಡಾರ ಲೇಪನದಿಂದ ಹಳದಿ ಬಣ್ಣದಿಂದಲೇ ಶೋಭಿಸುತ್ತವೆ. ಭಂಡಾರ ಅಲೆಮಾರಿ ಕುರುಬರಿಗೆ ಪವಿತ್ರ ವಸ್ತು. ಅವರು ತಮ್ಮ ಗುಡಾರದಲ್ಲಿರುವ ದೇವರುಗಳ ಭಾವಚಿತ್ರಗಳಿಗೆ ಭಂಡಾರವಿಟ್ಟು, ತಾವು ಹಣೆಯ ತುಂಬಾ ಧರಿಸುತ್ತಾರೆ. ಪೂಜಾರಿಗಳು ಹೆಗಲಲ್ಲಿ ಭಂಡಾರ ಚೀಲ ಹಾಕಿಕೊಳ್ಳುವದು ಮತ್ತು ಅದರಲ್ಲಿ ಭಂಡಾರ ಇಟ್ಟುಕೊಳ್ಳುವುದು ಕಡ್ಡಾಯವಾದ ಸಂಪ್ರದಾಯ. ಭಕ್ತರು ಪೂಜಾರಿಗಳ ಕಾಲಿಗೆ ಬಿದ್ದು ನಮಸ್ಕಾರ ಮಾಡಿದಾಗ ಪ್ರತಿಯಾಗಿ ಪೂಜಾರಿಗಳು ಭಕ್ತರ ಹಣೆಗೆ ಭಂಡಾರ ಹಚ್ಚಿ ಹರಸುವುದನ್ನು ಅಲೆದಾಡುವ ಪ್ರದೇಶಗಳಲ್ಲಿ, ದೇವರ ಹಬ್ಬ, ಜಾತ್ರೆಗಳಲ್ಲಿ ಕಾಣುತ್ತೇವೆ. ಈ ಕಾರಣದಿಂದಲೇ ಭಂಡಾರ ಶಬ್ದದ ಮೂಲವಾದ ಸಂಪತ್ತು ಎಂಬ ಅರ್ಥದಲ್ಲಿ ಈ ವಸ್ತುವನ್ನು ಪರಿಗಣಿಸಲಾಗಿದೆ.

**ಕುರಿ (ಆಳು)ಮಕ್ಕಳು**

ಕುರಿ ಸಂಗೋಪನೆ ಶ್ರಮ ಆಧಾರಿತ ಉದ್ಯೋಗ. ಆ ಉದ್ಯೋಗ ನಿರ್ವಹಿಸಲು ಅಧಿಕ ಸಂಖ್ಯೆಯ ಶ್ರಮಿಕರು ಬೇಕಾಗುತ್ತಾರೆ. ಒಂದು ಹಿಂಡು ಕುರಿ ಸಂಗೋಪನೆ ಮಾಡಲು ಕನಿಷ್ಠ ನಾಲ್ಕು ಜನರು ಆ ವೃತ್ತಿಯಲ್ಲಿ ತೊಡಗಿಸಕೊಳ್ಳಬೇಕಾಗುತ್ತದೆ. ಅವರಲ್ಲಿ ಇಬ್ಬರು ಕುರಿಗಳಿಗೆ ಮೇವು ಮೇಯಿಸಲು ಅಡವಿಗೆ ಹೋದರೆ, ಒಬ್ಬ ಹೆಣ್ಣು ಮಗಳು ಅಡುಗೆ, ಮರಿಗಳ ಪೋಷಣೆ ಇತ್ಯಾದಿ ಕೆಲಸ ಕಾರ್ಯ ಮಾಡಬೇಕಾಗುತ್ತದೆ. ಮತ್ತೊಬ್ಬನು, ಕುಟುಂಬದ ಅವಶ್ಯಕತೆಗಳ ಪೂರೈಕೆ ಹಾಗೂ ಕುರಿಗಳ ಮೇಲುಸ್ತುವಾರಿಯನ್ನು ನೋಡಿಕೊಳ್ಳ ಬೇಕಾಗುತ್ತದೆ. ಹೀಗೆ ಶ್ರಮಿಕರ ಪ್ರಮಾಣವು ಕುರಿಗಳ ಸಂಖ್ಯೆ ಅಥವಾ ಹಿಂಡುಗಳ ಗಾತ್ರವನ್ನು ಅವಲಂಬಿಸಿರುತ್ತದೆ. ಇವರು ಮೂಲತಃ ಶ್ರಮ ಆಧಾರಿತ ಉದ್ಯೋಗದಲ್ಲಿ ತಮ್ಮ

ಕುಟುಂಬಗಳನ್ನು ತೊಡಗಿಸಿಕೊಂಡು ಬಂದಿರುವ ಅಲೆಮಾರಿ ಕುರುಬರಾಗಿದ್ದು, ತಮ್ಮ ಕುರಿಗಳ ಸಂಖ್ಯೆ ಜಾಸ್ತಿ ಕುಟುಂಬದ ಯುವಕ ಪುರುಷರ ಸಂಖ್ಯೆ ಕಡಿಮೆ ಇದ್ದಾಗ, ಕುರಿ ಸಂಗೋಪನೆಗಾಗಿ ಹೊರಗಿನವರನ್ನು ಆಳುಮಕ್ಕಳನ್ನಾಗಿ ಇಟ್ಟುಕೊಳ್ಳುತ್ತಾರೆ. ಆಳುಮಕ್ಕಳನ್ನು ಕುರಿ ಸಂಗೋಪನೆಗೆ ಇಟ್ಟುಕೊಳ್ಳುವಾಗ ಯಾವುದೇ ನಿರ್ದಿಷ್ಟ ಕೋಮಿಗೆ ಸೀಮಿತಗೊಳಿಸದೇ ಎಲ್ಲ ಸಮುದಾಯದವರನ್ನು ಆಯ್ಕೆ ಮಾಡಿಕೊಂಡಿರುವುದನ್ನು ಕಾಣುತ್ತೇವೆ. ಸಾಮಾನ್ಯವಾಗಿ ಮುಂದುವರಿದ ಸಮುದಾಯದವರನ್ನು ಬಿಟ್ಟು ಇತರೆ ಎಲ್ಲಾ ಸಮುದಾಯವರು ಇರುತ್ತಾರೆ. ಅವರು ಆಳುಮಕ್ಕಳಿಗೂ ಮತ್ತು ತಮ್ಮ ಕುಟುಂಬದ ಇತರ ಸದಸ್ಯರಿಗೂ ವ್ಯತ್ಯಾಸ ಕಾಣವುದಿಲ್ಲ. ಮನೆ ಮಕ್ಕಳಿಗೆ ಯಾವ ತರಹದ ಪ್ರಾಶಸ್ತ್ಯ ಇದೆಯೋ ಅದೇ ತರಹ ಆಳು ಮಕ್ಕಳಿಗೂ ನೀಡುತ್ತಾರೆ. ಊಟ, ಬಟ್ಟೆ, ವಸತಿ ಇತ್ಯಾದಿಗಳನ್ನು ಸಮನಾಗಿ ಅನುಭೋಗಿಸುತ್ತಾರೆ. ಮನೆಮಕ್ಕಳಿಗಿಂತ ಆಳುಮಕ್ಕಳನ್ನು ಹೆಚ್ಚು ಪ್ರೀತಿಯಿಂದ ಕಾಣುತ್ತಾರೆ. ಕಾರಣ ತಂದೆ ತಾಯಿಯರನ್ನು ಬಿಟ್ಟು ತಮ್ಮನ್ನೇ ನಂಬಿ ಬಹಳ ದೂರ ಬಂದಿದ್ದಾರೆಂಬ ದೃಷ್ಟಿಯಿಂದ ಹಾಗೂ ಅವರನ್ನು ಚೆನ್ನಾಗಿ ನೋಡಿಕೊಂಡರೆ ತಮ್ಮ ಕುರಿ-ಮರಿಗಳನ್ನು ಅವರು ಚೆನ್ನಾಗಿ ನೋಡಿಕೊಳ್ಳುತ್ತಾರೆಂಬ ನಂಬಿಕೆಯಿಂದ ಪ್ರೀತಿ-ವಾತ್ಸಲ್ಯದಿಂದ ಕಾಣುತ್ತಾರೆ.

ಆಳುಮಕ್ಕಳು ಸಾಮಾನ್ಯವಾಗಿ ೧೪ ವರ್ಷ ಮೇಲ್ಪಟ್ಟ ಯುವಕರಿಂದ ಹಿಡಿದು ಐವತ್ತು ವರ್ಷ ವಯಸ್ಸಿನ ವಯೋಮಾನದವರೆಗೆ ಇರುತ್ತಾರೆ. ಇವರ ವೇತನವು ವಯಸ್ಸು, ದಕ್ಷತೆ ಮತ್ತು ಅನುಭವ ಆಧಾರದ ಮೇಲೆ ವರ್ಷಕ್ಕೆ ಇಂತಿಷ್ಟು ಎಂದು ನಿಗದಿಯಾಗುತ್ತದೆ. ಆಳುಮಕ್ಕಳಿಗೆ ವೇತನವನ್ನು ಎರಡು ವಿಧಾನಗಳಲ್ಲಿ ನೀಡುತ್ತಾರೆ. ಹಣದ ರೂಪದಲ್ಲಿ ಅಥವಾ ಮರಿಗಳ ಸಂಖ್ಯೆಯ ಪ್ರಮಾಣದಲ್ಲಿ. ಹಣದ ರೂಪದಲ್ಲಿ ನೀಡಿದಾಗ ಊಟ, ಬಟ್ಟೆ ಕೊಟ್ಟು ಒಬ್ಬರಿಗೆ ಕನಿಷ್ಟ ೬೦೦೦ ರೂ.ಗಳಿಂದ ೧೫೦೦೦ ರೂ.ಗಳವರೆಗೆ ಇರುತ್ತದೆ. ಮರಿಗಳ ರೂಪದಲ್ಲಿ ನೀಡಿದಾಗ ೬ ರಿಂದ ೧೨ ಕರಿಗೆ ಮರಿಗಳನ್ನು ನೀಡುತ್ತಾರೆ. 'ಕರಿಗೆಮರಿ' ಎಂದರೆ ಪ್ರೌಢವಸ್ಥೆಗೆ ಬಂದ ಕುರಿಮರಿ. ಹೀಗೆ ಮರಿಗಳ ರೂಪದಲ್ಲಿ ವೇತನ ಪಡೆದ ಆಳುಮಕ್ಕಳು ಐದಾರು ವರ್ಷ ಅವರ ಕುರಿಗಳಲ್ಲಿದ್ದುಕೊಂಡು ತಮ್ಮ ಕುರಿಗಳ ಸಂಖ್ಯೆ ಐವತ್ತು ದಾಟಿದ ನಂತರ ಹೊರಗೆ ಬಂದು ಸ್ವತಂತ್ರವಾಗಿ ಕುರಿಸಂಗೋಪನೆ ಮಾಡಿ ಬದುಕಲು ಆರಂಭಿಸುತ್ತಾರೆ. ಆಳುಮಗನಾಗಿ ದುಡಿಯುವವರೆಗೆ ತನ್ನ ಕುರಿಗಳ ಔಷಧದ ಖರ್ಚು ವೆಚ್ಚಗಳನ್ನು ಕುಟುಂಬದ ಯಜಮಾನನೇ ಭರಿಸುತ್ತಾರೆ. ಒಂದು ವೇಳೆ ಆಳು ಮಗನ ಕುರಿಗಳ ಸಂಖ್ಯೆ ಐವತ್ತು ದಾಟಿದ ನಂತರವೂ ಆಳುಮಗನಾಗಿ ದುಡಿಯಲು ಮುಂದುವರಿದರೆ ಔಷಧದ ಖರ್ಚು-ವೆಚ್ಚಗಳನ್ನು ಕುರಿಗಳ ಸಂಖ್ಯೆಯ ಆಧಾರದ ಮೇಲೆ ಭರಿಸಬೇಕಾಗುತ್ತದೆ. ಈ ರೀತಿಯಾಗಿ ಆಳುಮಕ್ಕಳಾಗಿ ದುಡಿದು ನಂತರ ಸ್ವತಂತ್ರವಾಗಿ ಕುರಿ ಸಂಗೋಪನೆ ಮಾಡುವ ಕುಟುಂಬಗಳನ್ನು ಕಾಣಬಹುದಾಗಿದೆ. ಒಟ್ಟಾರೆಯಾಗಿ ಅಲೆಮಾರಿ ಕುರುಬ ಕುಟುಂಬದ ಸದಸ್ಯರು ಹಾಗೂ ಆಳು ಮಕ್ಕಳು ಆತ್ಮೀಯ ಸಂಬಂಧ ಹೊಂದಿರುವುದನ್ನು ಕಾಣುತ್ತೇವೆ. ಆದರೆ ಇತ್ತೀಚಿನ ದಿನಗಳಲ್ಲಿ ಕುರಿಸಂಗೋಪನೆ ಮಾಡುವುದು ಕಷ್ಟದ ಕೆಲಸ ಎಂಬ ಭಾವನೆ

ಅಲೆಮಾರಿ ಕುರುಬರಲ್ಲಿ ಮನೆ ಮಾಡಿದೆ. ಆಳುಮಕ್ಕಳನ್ನು ಹುಡುಕಿ ತರುವುದೇ ದೊಡ್ಡ ಸಾಹಸವಾಗಿದ್ದು, ಮುಂಗಡವಾಗಿ ಕೇಳಿದಷ್ಟು ಹಣ ನೀಡಿದರೂ ಕುರಿಕಾಯಲು ಬರದಿರುವುದು ಇದಕ್ಕೆ ಕಾರಣವಾಗಿದೆ.

ಇತರೆ ಖರ್ಚುಗಳು

**ಮೆಟ್ಟು (ಚಪ್ಪಲಿ) :** ಅಲೆಮಾರಿ ಕುರುಬರು ಚಪ್ಪಲಿಗಳಿಗೆ ಮೆಟ್ಟು ಎಂದು ಕರೆಯುತ್ತಾರೆ. ಇವರು ಹಾಕಿಕೊಳ್ಳುವ ಮೆಟ್ಟುಗಳು ವಿಶೇಷವಾಗಿದ್ದು ಜನ ಸಾಮಾನ್ಯರು ಬಳಸುವುದಕ್ಕಿಂತ ಭಿನ್ನವಾಗಿವೆ. ಇವು ಸಂಪೂರ್ಣ ದೇಶೀಯ ಉತ್ಪಾದನಾ ವಿಧಾನದಿಂದ ಕೂಡಿದ್ದು ದನಗಳ ಚರ್ಮದಿಂದ ತಯಾರು ಮಾಡಲಾಗಿರುತ್ತದೆ. ಇವು ಬಹಳ ದಪ್ಪವಾಗಿರುವುದರ ಜೊತೆಗೆ ತೂಕವನ್ನು ಹೊಂದಿರುತ್ತವೆ. ಸಾಮಾನ್ಯರು ಹಾಕಿಕೊಂಡು ತಿರುಗುವುದು ಕಷ್ಟ. ಏಕೆಂದರೆ ಒಂದೊಂದು ಮೆಟ್ಟುಗಳ ತೂಕ ಅರ್ಧ ಕೆ.ಜಿ.ಯಿಂದ ಒಂದು ಕೆ.ಜಿ.ಯವರೆಗೆ ಭಾರವಾಗಿ ರುತ್ತವೆ. ಇವರು ಹೆಚ್ಚಾಗಿ ಕಲ್ಲು, ಮುಳ್ಳು, ಕೆಸರುಗಳಲ್ಲಿಯೆ ಅಲೆದಾಡುವುದರಿಂದ ಹಾಗೂ ಬಾಳಿಕೆಯ ದೃಷ್ಟಿಯಿಂದ ಇಂತಹ ಮೆಟ್ಟುಗಳೇ ಬೇಕಾಗುತ್ತವೆ. ಮೆಟ್ಟುಗಳ ಮೂಲಕ ಇವರನ್ನು ಅಲೆಮಾರಿ ಕುರುಬರೆಂದು ಸುಲಭವಾಗಿ ಗುರುತಿಸಬಹುದು. ಇವನ್ನು ತಮ್ಮ ಗ್ರಾಮಗಳಲ್ಲಿರುವ ಸಮಗಾರರಿಗೆ ಕಾಲಿನ ಅಳತೆ ನೀಡಿ ಮೆಟ್ಟು ಮಾಡಿಸಿಕೊಳ್ಳುತ್ತಾರೆ. ಇವುಗಳ ಬೆಲೆ ೨೫೦ ರಿಂದ ೩೫೦ ರೂ.ಗಳವರೆಗೆ ಇದ್ದು ಒಂದು ವರ್ಷ ಬಾಳಿಕೆ ಬರುತ್ತವೆ. ಇವನ್ನೇ ತಮ್ಮ ಸ್ವಗ್ರಾಮಗಳ ಸಂತೆ ಅಥವಾ ನಿಪ್ಪಾಣಿ ಪಟ್ಟಣದಲ್ಲಿ ಕೊಂಡರೆ ೧೫೦ ರಿಂದ ೨೫೦ ರೂ.ಗಳಿಗೆ ಸಿಗುತ್ತವೆ. ಸಂತೆ ಅಥವಾ ಪಟ್ಟಣದಲ್ಲಿ ಮಾರುವ ಮೆಟ್ಟುಗಳು ಇವರಿಗೆ ಬಾಳಿಕೆ ಬರುವುದಿಲ್ಲವಾದ್ದರಿಂದ ಅಳತೆ ಕೊಟ್ಟು ಮಾಡಿಸುವುದೇ ಹೆಚ್ಚು.

**ಅಡಿಕೆ ಚೀಲ :** ಇವರು ಮರಾಠಿ ಭಾಷೆಯಲ್ಲಿ ಇದನ್ನು 'ಬಟಾವೇ' ಎಂದು ಕರೆದರೆ, ಕನ್ನಡದಲ್ಲಿ 'ಅಡಿಕೆ ಚೀಲ'ವೆಂದು ಕರೆಯುವರು. ಮದುವೆಯಾದ ಪ್ರತಿಯೊಬ್ಬ ಅಲೆಮಾರಿ ಕುರುಬರ ನಡುವಿನಲ್ಲಿ ಈ ಚೀಲ ಇರುತ್ತದೆ. ಈ ಚೀಲದಲ್ಲಿ ಎಲೆ, ಅಡಿಕೆ, ಸುಣ್ಣ, ಕಾಚ, ತಂಬಾಕು, ಯಾಲಕ್ಕಿ, ಲವಂಗಗಳನ್ನಿಟ್ಟುಕೊಂಡಿರುತ್ತಾರೆ. ಇವನ್ನು ನೀರು, ಚಹಾ, ಅಥವಾ ಊಟವಾದ ಮೇಲೆ ಹಾಕಿಕೊಳ್ಳುವುದು ಪುರುಷರಿಗೆ ರೂಢಿಯಾಗಿ ಬಿಟ್ಟಿದೆ. ಪ್ರತಿಯೊಬ್ಬ ವ್ಯಕ್ತಿ ದಿನಾಲು ೧೦ ರಿಂದ ೧೫ ರೂ.ಗಳವರೆಗೆ ಇವುಗಳ ಮೇಲೆ ಖರ್ಚುಮಾಡುತ್ತಾನೆ. ಇವರಲ್ಲಿ ಸ್ತ್ರೀಯರು ಎಲೆ, ಅಡಿಕೆ, ಹಾಕಿಕೊಳ್ಳುವವರು ತೀರಾ ಅಪರೂಪ. ಆದರೆ ಇಲ್ಲಿ ಗಮನಿಸುವ ಒಂದು ಪ್ರಮುಖ ಅಂಶವೆಂದರೆ ಸಾಮಾನ್ಯವಾಗಿ ಹೈದ್ರಾಬಾದ್ ಕರ್ನಾಟಕದ ಬಳ್ಳಾರಿ, ರಾಯಚೂರು ಜಿಲ್ಲೆಯ ಗ್ರಾಮೀಣ ಹೆಣ್ಣು ಮಕ್ಕಳಲ್ಲಿ ಎಲೆ ಅಡಿಕೆ ಚೀಲ ನಡುವಿನಲ್ಲಿರುವುದನ್ನು ಕಾಣುತ್ತೇವೆ.

**ಹೊಟ್ಟೆಚೀಲ :** ಕುರಿಗಳಿಗೆ ಮೇವು ಮೇಯಿಸಲು ಅಡವಿಗೆ ಹೋಗುವಾಗ ತೆಗೆದುಕೊಂಡು ಹೋಗುವ ಆಹಾರದ ಚೀಲವಿದು. ಇದರಲ್ಲಿ ಮಧ್ಯಾಹ್ನದ ಬುತ್ತಿ, ಡಬರಿ, ಕುರಿಮುಳ್ಳು ತೆಗೆಯುವ ಚಿಮುಟಿಗೆ, ನಸೆಬಟ್ಟೆ, ಕುರಿಗಳ ಔಷಧ, ಪ್ಲಾಸ್ಟಿಕ್ ಚೀಲ ಇತ್ಯಾದಿ ಸಾಮಾಗ್ರಿ

ಗಳನ್ನು ಇಟ್ಟು ಕೊಂಡಿರುತ್ತಾರೆ. ಈ ಚೀಲದಲ್ಲಿ ಮಧ್ಯಾಹ್ನದ ಆಹಾರ ಇರುವುದರಿಂದಲೇ ಇದಕ್ಕೆ ಹೊಟ್ಟೆಚೀಲ, ಬುತ್ತಿಚೀಲ, ವಡೆಚೀಲ, ತೆರೆಬಟ್ಟೆಚೀಲ, ಬುತ್ತಿಚಿಕ್ಕ ಎಂದು ಸಹ ಕರೆಯುತ್ತಾರೆ. ಇದು ಹತ್ತಿ ನೂಲಿನದಾಗಿದ್ದು, ನರಗುಂದ, ನವಲಗುಂದಗಳಲ್ಲಿ ಕೊಂಡು ತರುತ್ತಾರೆ. ಅಲ್ಲಿ ಕುರಿಗಾರರಿಗೋಸ್ಕರ ಈ ಚೀಲವನ್ನು ತಯಾರು ಮಾಡುತ್ತಾರೆ. ಇದರ ಬೆಲೆ ೧೫೦ ರಿಂದ ೨೦೦ ರೂ.ಗಳಾಗಿದ್ದು ಮೂರರಿಂದ ನಾಲ್ಕುವರ್ಷಗಳವರೆಗೆ ಬಾಳಿಕೆ ಬರುತ್ತದೆ. ಪ್ರತಿಯೊಂದು ಕುರಿಹಿಂಡಿನವರ ಕಂಕುಳದಲ್ಲಿ ಈ ಚೀಲವನ್ನು ಕಾಣಬಹುದು. ಈ ಚೀಲ ವಿವಿಧ ಖಾನೆಗಳನ್ನು ಹೊಂದಿದ್ದು ಪ್ರತಿಯೊಂದು ಖಾನೆಯಲ್ಲಿ ಒಂದೊಂದು ವಸ್ತುಗಳನ್ನಿಟ್ಟುಕೊಳ್ಳಬಹುದು. ಈ ಚೀಲದ ವಿಶೇಷ ಲಕ್ಷಣವೆಂದರೆ ಕಳ್ಳರು ಹಣ ಕದಿಯಲಾರದ ಖಾನೆ ಇರುತ್ತದೆ. ಅದಕ್ಕೆ 'ಕಳ್ಳಖಾನೆ' ಎಂದು ಕರೆಯುತ್ತಾರೆ. ಅದರಲ್ಲಿ ಹಣವನ್ನು ಇಡುವುದು ಮತ್ತು ತೆಗೆಯುವುದು ಅದನ್ನು ಬಳಸುವವನೊಬ್ಬನಿಗೆ ಮಾತ್ರ ಗೊತ್ತಿರುತ್ತದೆ. ಬೇರೆಯವರು ಹಣ ಕದಿಯಲು ಪ್ರಯತ್ನಪಟ್ಟರೂ ಹಣ ಸಿಗುವುದಿಲ್ಲ. ಸಾಮಾನ್ಯವಾಗಿ ಅಲೆಮಾರಿ ಕುರುಬರು ತಮ್ಮಲ್ಲಿರುವ ಅಲ್ಪಸ್ವಲ್ಪ ಹಣವನ್ನು ಹೊಟ್ಟೆಚೀಲದ ಕಳ್ಳ ಖಾನೆಯಲ್ಲಿಟ್ಟು ಕೊಂಡು ರಕ್ಷಿಸಿಕೊಳ್ಳುತ್ತಾರೆ.

**ಕುರಿಬಲೆ ಮತ್ತು ಮರಿಬಲೆ :** ರಾತ್ರಿ ಕುರಿಗಳನ್ನು ನಿಯಂತ್ರಿಸಲು, ಹಗಲು ಮರಿಗಳನ್ನು ಸಂರಕ್ಷಿಸಲು ಪ್ರಮುಖವಾಗಿ ಎರಡು ವಸ್ತುಗಳನ್ನು ಉಪಯೋಗಿಸುತ್ತಾರೆ. ಒಂದು ನೈಲಾನ್ ಅಥವಾ ರೇಷ್ಮೆಯ ದಾರದಿಂದ ತಯಾರಿಸಿದ ಬಲೆ ಮತ್ತೊಂದು ಬಿದರಿನ ಕಟ್ಟಿಗೆಗಳು. ಇವೆರಡನ್ನು ಅಲೆಮಾರಿ ಕುರುಬರು ಮಾರುಕಟ್ಟೆಯಲ್ಲಿ ಕೊಂಡು ತರಬೇಕು. ಬಲೆಯ ವಿಸ್ತಾರ ಮತ್ತು ಬಿದಿರು ಕಟ್ಟಿಗೆಗಳ ಸಂಖ್ಯೆ ಕುಟುಂಬದ ಕುರಿಗಳಿಗನುಗುಣವಾಗಿರುತ್ತದೆ. ಬಲೆಯನ್ನು ಕೈ-ಮಾರು ಅಳತೆಯ ಲೆಕ್ಕದಲ್ಲಿ ತರುತ್ತಾರೆ. ಉದಾಹರಣೆ ಒಂದು ಕುಟುಂಬದ ಕುರಿಗಳ ಸಂಖ್ಯೆ ೨೦೦ ಇದ್ದಾಗ ೪೦ ಮಾರು ಬಲೆ ಮತ್ತು ೧೪ ಬಿದಿರುಕಟ್ಟಿಗೆಗಳು ಬೇಕಾಗುತ್ತವೆ. ಪ್ರತಿಮಾರು ಬಲೆಯ ಬೆಲೆ ಮಾರುಕಟ್ಟೆಯಲ್ಲಿ ೨೫ ರಿಂದ ೩೦ ರೂ.ಗಳವರೆಗೆ ಹಾಗೂ ಪ್ರತಿ ಬಿದಿರಿಗೆ ೧೦ ರೂ. ಗಳಂತೆ ಕೊಟ್ಟು ತರುತ್ತಾರೆ. ಅಂದರೆ ಕುರಿ ಬಲೆಗೆ ೧೦೦೦ ದಿಂದ ೧೨೦೦ ರೂ.ವರೆಗೆ ಹಾಗೂ ಬಿದಿರಿಗೆ ೧೪೦ ರೂ.ಗಳಷ್ಟು ವೆಚ್ಚ ಮಾಡಬೇಕಾಗುತ್ತದೆ. ಇವರಲ್ಲಿಯೇ ಕೆಲವರು ರೇಷ್ಮೆದಾರದ ಉಂಡೆಯನ್ನು ಕೆ.ಜಿ. ಲೆಕ್ಕದಲ್ಲಿ ತಂದು ತಾವೇ ಕುರಿಬಲೆ ಮತ್ತು ಮರಿಬಲೆ ತಯಾರು ಮಾಡಿಕೊಳ್ಳುತ್ತಾರೆ.

**ಕುದುರೆ ಜಾಳಿಗೆ :** ಇದು ನೂಲಿನಿಂದ ಅಥವಾ ನೈಲಾನ್ ಹಗ್ಗದಿಂದ ತಯಾರು ಮಾಡಿದ ಚಿಕ್ಕದಾಕಾರದ (ಸಣ್ಣ ಕಿಂಡಿಗಳಿರುವ) ಚೀಲ. ಇದನ್ನು ತಯಾರು ಮಾಡಲು ೫೦ ರಿಂದ ೭೫ ರೂ.ಗಳವರೆಗೆ ಖರ್ಚು ಬರುತ್ತದೆ. ಇದಕ್ಕೆ ಬೇಕಾಗುವ ನೂಲನ್ನು ಮಾರುಕಟ್ಟೆಯಲ್ಲಿ ಕೊಂಡು ತಾವೇ ತಯಾರಿಸಿಕೊಳ್ಳಲಾಗುತ್ತದೆ. ಈ ಜಾಳಿಗೆ ಆಹಾರಧಾನ್ಯಗಳನ್ನು ಮತ್ತು ಇತರೆ ಜೀವನಾವಶ್ಯಕ ವಸ್ತುಗಳನ್ನು ಶೇಖರಿಸಲು ಹಾಗೂ ಸಾಗಿಸಲು ಇದನ್ನು ಬಳಸ ಲಾಗುತ್ತದೆ. ಆಹಾರಧಾನ್ಯನಗಳು ಮತ್ತು ಇತರೆ ಜೀವನಾವಶ್ಯಕ ವಸ್ತುಗಳನ್ನು

ಚಾಳಿಗೆಯಲ್ಲಿಟ್ಟು ಕುದುರೆಯ ಬೆನ್ನಿನ ಮೇಲೆ ಎಡಭಾಗಕ್ಕೊಂದು ಮತ್ತು ಬಲಭಾಗಕ್ಕೊಂದು ಇಳಿಬಿಟ್ಟು ಗುಡಾರ ಬದಲಾಯಿಸುವ ಸ್ಥಳಕ್ಕೆ ವರ್ಗಾಯಿಸುತ್ತಾರೆ. ಗುಡ್ಡಗಾಡು ಪ್ರದೇಶದಲ್ಲಿ ಅಥವಾ ರಸ್ತೆ ಸಂಪರ್ಕವಿಲ್ಲದ ಹೊಲ ಗದ್ದೆಗಳಲ್ಲಿ ಗುಡಾರ ಹೂಡಿದಾಗ ಸಮೀಪದ ಗ್ರಾಮದ ಅಂಗಡಿಯಲ್ಲಿ ಅಥವಾ ಸಂತೆಯಲ್ಲಿ ದಿನ ನಿತ್ಯದ ಸಾಮಾನುಗಳನ್ನು ಚಾಳಿಗೆ ಯಲ್ಲಿಟ್ಟುಕೊಂಡು ಕುದುರೆಯ ಮೂಲಕ ಸಾಗಿಸಲಾಗುತ್ತದೆ.

**ಜಲ್ಲೆಪುಟ್ಟಿ :** ಇವನ್ನು ಹೆಣ್ಣು ಬಿದರಿನಿಂದ ತಯಾರಿಸಲ್ಪಟ್ಟಿದ್ದು ಎಲ್ಲಾ ಅಲೆಮಾರಿ ಕುರುಬ ಕುಟುಂಬದವರಲ್ಲಿ ಇರುವುದು ಕಂಡುಬರುತ್ತದೆ. ಜಲ್ಲೆಪುಟ್ಟಿಗಳು ವಲಸೆ ಬಂದ ಪ್ರದೇಶದಲ್ಲಿ ಸಿಗುವುದಿಲ್ಲವಾದ್ದರಿಂದ ತಮ್ಮ ಊರಿನ ಮೇದಾರ ಅಥವಾ ಕೊರಚರಿಗೆ ಹೇಳಿ ಮಾಡಿಸಿ ತೆಗೆದುಕೊಂಡು ಬರುತ್ತಾರೆ. ಒಂದಕ್ಕೆ ೧೫೦ ರಿಂದ ೨೫೦ ರೂಪಾಯಿ ಬೆಲೆ ಕೊಟ್ಟು ಕೊಂಡು ತರುತ್ತಾರೆ. ವಿಭಕ್ತ ಕುಟುಂಬದಲ್ಲಿ ಒಂದು ಇದ್ದರೆ ಅವಿಭಕ್ತ ಕುಟುಂಬ ಗಳಲ್ಲಿ ೨ ಅಥವಾ ೩ ಜಲ್ಲೆಪುಟ್ಟಿಗಳಿರುತ್ತವೆ.

ಈ ಜಲ್ಲೆಪುಟ್ಟಿಯು ವರ್ಷವಿಡಿ ಬಳಕೆಗೆ ಬರುತ್ತದೆ. ಗುಡಾರದಲ್ಲಿರುವಾಗ ಮತ್ತು ಗುಡಾರ ಬದಲಾಯಿಸುವಾಗ ಬಳಸುತ್ತಾರೆ. ಗುಡಾರದಲ್ಲಿರುವಾಗ ಸಣ್ಣ-ಪುಟ್ಟ ಸಾಮಾನುಗಳು ಬೇಗನೆ ಕೈಗೆ ಸಿಗಲಿ ಎಂಬ ಉದ್ದೇಶದಿಂದ ಬೆಂಕಿಪೊಟ್ಟಣ, ಇಳಿಗೆ, ದೇವರ ಭಾವಚಿತ್ರ, ಬೇಳೆಗುಂಡು, ಉಪ್ಪು, ಭಂಡಾರದ ಚೀಲ, ಸಾಂಬಾರ ಪದಾರ್ಥಗಳು, ಅನ್ನ, ರೊಟ್ಟಿ ಇತ್ಯಾದಿಗಳನ್ನು ಅದರಲ್ಲಿಟ್ಟು ಕೊಂಡಿರುತ್ತಾರೆ. ಪಂಚಾಮೃತಗಳಾದ ಹಾಲು, ಮೊಸರು, ಮಜ್ಜಿಗೆ, ಬೆಣ್ಣೆ, ತುಪ್ಪ ಹಾಗೂ ಅಡಿಗೆ ಎಣ್ಣೆ, ಕೊಬ್ಬರಿ ಎಣ್ಣೆ, ಇತರೆ ವಸ್ತುಗಳು ಉರುಳ ದಂತೆ ಜಲ್ಲೆಪುಟ್ಟಿಯಲ್ಲಿಟ್ಟುಕೊಂಡಿರುತ್ತಾರೆ. ಗುಡಾರ ಬದಲಾಯಿಸುವಾಗ ಈ ಮೇಲಿನ ಎಲ್ಲಾ ಸಾಮಾನುಗಳನ್ನು ಹೊತ್ತೊಯ್ಯಲು ಬಳಸಲಾಗುತ್ತದೆ. ಇದರಲ್ಲಿರುವ ಸಾಮಾನುಗಳು ೨೦ ರಿಂದ ೨೫ ಕೆ.ಜಿ. ಭಾರವಿದ್ದು, ಗುಡಾರ ಹೂಡಿದಾಗ ಗುಡಾರದ ಒಳಗಿನ ಹಿಂಭಾಗದಲ್ಲಿದ್ದರೆ, ಗುಡಾರ ಬದಲಾಯಿಸುವಾಗ ಮಹಿಳೆಯ ತಲೆಯ ಮೇಲಿರುತ್ತದೆ.

**ಕಟುಕರು (ಕುರಿ ವ್ಯಾಪಾರಸ್ಥರು)**

ಕಟುಕ ಎಂಬುದು ಸಮುದಾಯದ ಪದ. ಆ ಸಮುದಾಯದ ಮೂಲ ವೃತ್ತಿ ಕುರಿಗಾರರಿಂದ ಕುರಿಗಳನ್ನು ಕೊಳ್ಳುವುದು ಹಾಗೂ ಅದರ ಉಪ ಉತ್ಪನ್ನವಾದ ಮಾಂಸವನ್ನು ಗ್ರಾಹಕರಿಗೆ ಮಾರಾಟ ಮಾಡಿ ಜೀವನ ಸಾಗಿಸುವುದು. ಇತ್ತೀಚಿನ ದಿನಗಳಲ್ಲಿ ಇವರು ಹಲವಾರು ವೃತ್ತಿಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇವರ ಐತಿಹಾಸಿಕ ಹಿನ್ನೆಲೆ ಕುರಿತು ನವಿಲಿಹಾಳ್‌ದ ಸಾವಿರಕುರಿ ಲಿಂಗಪ್ಪ ಅವರು ಹೀಗೆ ಹೇಳುತ್ತಾರೆ. "ಬಸವಣ್ಣನವರ ಕಾಲದಲ್ಲಿ ಕಲ್ಯಾಣ ಪಟ್ಟಣದೊಳಗೆ ಶಾಂತಮುತ್ತಯ್ಯ ನವರು ಟಗರು ಪವಾಡ ಮೆರೆಸಿದರು. ಆ ಸಮಯದಲ್ಲಿ ಸತ್ತ ಟಗರು ಎದ್ದು ಓಡುತ್ತದೆ. ಟಗರು ಎದ್ದು ಓಡುವಾಗ ಟಗರಿನ ಕೊಂಬು ಹಿಡಿದವ ಟಗರುಜೋಗಿ ಆದ, ಕಾಲುಹಿಡಿದವ ಕಟುಕನಾದ" ಈ ಹೇಳಿಕೆಯಿಂದ ಕುರುಬ ಮತ್ತು ಕಟುಕನಿಗೆ ಮೊದಲಿನಿಂದಲೂ ಸಂಬಂಧವಿದೆ ಎಂಬುದು ಸ್ಪಷ್ಟವಾಗುತ್ತದೆ.

ಅಲೆಮಾರಿ ಕುರುಬರು ಮತ್ತು ಕಟುಕರಿಗೆ ಅವಿನಾಭಾವ ಸಂಬಂಧ ಇರುವುದು ಅವರು ಕೈಗೊಂಡ ವೃತ್ತಿಯಿಂದ ಗೊತ್ತಾಗುತ್ತದೆ. ಕುರಿಗಾರರು ತಮ್ಮ ಕುರಿಗಳನ್ನು ಕಟುಕರಿಗೆ ಮಾರಾಟ ಮಾಡಿ ಜೀವನ ಸಾಗಿಸಿದರೆ, ಕಟುಕರು ಕುರಿಗಾರರಿಂದ ಕುರಿಗಳನ್ನು ಕೊಂಡು ಗ್ರಾಹಕರಿಗೆ ಮಾಂಸ ಮಾರಾಟ ಮಾಡಿ ಜೀವನ ಸಾಗಿಸುತ್ತಾರೆ. ಒಂದು ಸಮುದಾಯವನ್ನು ಬಿಟ್ಟು ಮತ್ತೊಂದು ಸಮುದಾಯ ಮೂಲ ವೃತ್ತಿಯಲ್ಲಿ ಮುಂದುವರಿಯಲು ಸಾಧ್ಯವಿಲ್ಲ ಎಂಬುದು ಸ್ಪಷ್ಟವಾಗುತ್ತದೆ.

ಅಲೆಮಾರಿ ಕುರುಬರು ಕಟುಕರನ್ನು ಮಕ್ಕಳ ಸಮಾನವಾಗಿ ಕಾಣುತ್ತಾರೆ. ಹಾಗೆಯೇ ಕಟುಕರು ಕುರಿಗಾರರನ್ನು 'ಕಾಕ' ಎಂದು ಸಂಭೋದಿಸುತ್ತಾರೆ. ನಿಯತ್ತಿರುವ ಕೆಲವು ಕಟುಕರು ಕುರಿಗಾರರ ಕಾಲಿಗೆ ಬಿದ್ದು ನಮಸ್ಕಾರ ಮಾಡುತ್ತಾರೆ. ಕುರಿ ವ್ಯಾಪಾರವೇ ಕಟುಕರ ಮೂಲ ವೃತ್ತಿಯಾದ್ದರಿಂದ ಕುರಿ ತಬ್ಬಿದ ಸ್ಥಳದಲ್ಲಿ ಅಥವಾ ಕುರಿ ಮಾರುಕಟ್ಟೆಯಲ್ಲಿ ಕುರಿ-ಮರಿಗಳನ್ನು ಕೊಳ್ಳುತ್ತಾರೆ. ಮರಿ ಕೊಳ್ಳುವಾಗ ಮರಿ ನಡುವಿನ ಮೇಲೆ ಕೈಯಾಕಿ ಹಿಚುಕಿ ಅದರ ಪ್ರಮಾಣ (ಮೌಲ್ಯ) ತಿಳಿದು ಕೊಳ್ಳುತ್ತಾರೆ. ಕುರಿ ಕೊಳ್ಳುವಾಗ ಅದರ ಹಲ್ಲುಗಳನ್ನು ನೋಡಿ ಬೆಲೆ ನಿರ್ಧರಿಸುತ್ತಾರೆ. ಕಟುಕರು ಅಲೆಮಾರಿ ಕುರುಬರಿಂದ ೨೦ ಕುರಿಮರಿ ಕೊಂಡರೆ ಒಂದು ಹೆಚ್ಚು ಮರಿಯನ್ನು ಕಟುಕರಿಗೆ ಬಿಡಬೇಕು. ಅದಕ್ಕೆ 'ಅಂಬ್ಲಿಮರಿ' ಎನ್ನುವರು. ಹಾಗೆಯೇ ೪೦ ಕೊಂಡರೆ ಎರಡು, ೬೦ ಕೊಂಡರೆ ಮೂರು. ಹೀಗೆ ಕುರಿಮರಿಗಳ ಸಂಖ್ಯೆ ೨೦ರಂತೆ ಹೆಚ್ಚು ಕೊಂಡಂತೆಲ್ಲ

೬

# ಸಾಹಿತ್ಯ, ಕಲೆ ಮತ್ತು ಭಾಷೆ

ಪ್ರಪಂಚದ ಸಮುದಾಯಗಳ ಇತಿಹಾಸದಲ್ಲಿ ಅಲೆಮಾರಿ ಕುರುಬ ಸಮುದಾಯಕ್ಕೆ ಪ್ರಾಚೀನ ಇತಿಹಾಸ ಇರುವಂತೆ ವಾದ್ಯ ಪರಿಕರಗಳಲ್ಲಿ ಡೊಳ್ಳಿಗೂ ಪುರಾತನ ಇತಿಹಾಸವಿದೆ. ಇದು ವಿಶ್ವದ ಪ್ರಥಮ ವಾದ್ಯವೂ ಹೌದು. ಡೊಳ್ಳಿನ ಉಗಮ ಸಂಗೀತದ ಉದ್ದೇಶದಿಂದ ಹುಟ್ಟಿದ್ದಲ್ಲ. ಅದರ ಆರಂಭಿಕ ಹಿನ್ನಲೆಯು ಅಲೆಮಾರಿ ಕುರಿಕಾಯುವಾಗ ಕಾಡು ಪ್ರಾಣಿಗಳಿಂದ ಕುರಿಗಳನ್ನು ಮತ್ತು ತನ್ನನ್ನು ರಕ್ಷಣೆ ಮಾಡಿಕೊಳ್ಳಲು ಸುತ್ತಮುತ್ತಲಿನ ಪರಿಸರದ ಸಂಪರ್ಕ ಪಡೆಯಲು, ಅಪಾಯದ ಮುನ್ಸೂಚನೆ ತಿಳಿದು ಬಂದಾಗ, ಜಾಗೃತ ರಾಗಲು ಬಳಸುತ್ತಿದ್ದರೆಂದು ತಿಳಿದು ಬಂದಿದೆ. ಪುರಾತನ ಡೊಳ್ಳುಗಳು ಇಂದಿನ ಕಾಲದಂತೆ ದೊಡ್ಡ ಗಾತ್ರದವುಗಳು ಆಗಿರದೆ ಚಿಕ್ಕವು ಆಗಿದ್ದವು. ಇವನ್ನು ಕುರಿಮೇಯಿಸುವಾಗ ಅಲೆಮಾರಿ ಕುರುಬರು ಯಾವಾಗಲೂ ತಮ್ಮ ಹೆಗಲಿಗೆ ಹಾಕಿಕೊಂಡೆ ಇರುತ್ತಿದ್ದರು. ಆಗ ಅದು ಶಾಸ್ತ್ರೀಯ ಸ್ಥಾನ-ಮಾನ ಪಡೆದಿರಲಿಲ್ಲ. ಕಾಲಕ್ರಮೇಣ ಲಯಬದ್ಧವಾಗಿ ಬಾರಿಸುವಿಕೆಯಿಂದ ಶಾಸ್ತ್ರೀಯ ವಿಧಾನಕ್ಕೆ ಇದನ್ನು ತರಲಾಯಿತು. ಕಾಲಾಂತರದಲ್ಲಿ ಇದು ಮನರಂಜನೆಗಾಗಿ ದೈವಾರಾಧನೆಗಾಗಿ ಬಳಕೆಗೆ ಬಂದಿರಬೇಕೆನಿಸುತ್ತದೆ. ಇದರ ಅಭಿವೃದ್ಧಿಯ ಹಂತದಲ್ಲಿ ಜನರನ್ನು ಕೂಡಿಸುವ ಉದ್ದೇಶಕ್ಕಾಗಿ ಬಾರಿಸುವ ವಾದ್ಯವಾಯಿತು. ಇದು ದೇವರನ್ನು ಮೆಚ್ಚಿಸಲು ಭಕ್ತಿಯ ಸಂತೃಪ್ತಿಗೆ ಅರ್ಹವಾದ ನಂತರ ದೈವ ಪರಿವಾರಗಳಲ್ಲಿ ಬೆಳೆದು ಬಂದಿತು. ಇದು ಅಷ್ಟ ಒಡ್ಡೋಲಗದಲ್ಲಿ ಶ್ರೇಷ್ಠವಾಯಿತು. ಆದ್ದರಿಂದ ಡೊಳ್ಳನ್ನು ಸತ್ಕಾರ್ಯಗಳಲ್ಲಿ ದೈವಾಚರಣೆಗಳಲ್ಲಿ, ಮಂಗಲ ಕಾರ್ಯಗಳಲ್ಲಿ ಗುಡಿಗುಂಡಾರುಗಳಲ್ಲಿ ಹಬ್ಬ ಹರಿದಿನಗಳ್ಲಿ, ಜಾತ್ರೆ-ಉತ್ಸವಗಳಲ್ಲಿ ಜಾನಪದ ಕಲಾಮೇಳಗಳಲ್ಲಿ ಮಾತ್ರ ನುಡಿಸಬೇಕು ಎಂದು ರೂಢಿ ಸಂಪ್ರದಾಯಗಳು ಹೇಳುತ್ತವೆ. ಪುರಾಣದ ಕತೆಗಳನ್ನು ಡೊಳ್ಳಿನ ಹಾಡುಗಳ ಮೂಲಕ ಜನರಿಗೆ ತಿಳಿಸುತ್ತವೆ. ಇದು ಇಂದು ಪ್ರದರ್ಶನ ಕಲೆಯಾಗಿಯೂ ಹೊರಹೊಮ್ಮಿದೆ.

ಡೊಳ್ಳು ಭಾರತ ದೇಶದಲ್ಲಿ ಮತ್ತು ಪ್ರಪಂಚದ ನಾನಾ ಭಾಗದಲ್ಲಿ ವಾಸಿಸುತ್ತಿರುವ ಪಶುಪಾಲಕ ಸಮುದಾಯಗಳು ತಮ್ಮದೆ ದಾಟಿಯಲ್ಲಿ ಬಾರಿಸುತ್ತ ಲಯಬದ್ಧವಾಗಿ ಹಾಡಿ ಕುಣಿಯುತ್ತಿರುವದನ್ನು ಕಾಣಬಹುದಾಗಿದೆ. ದೈಹಿಕ ಮಾನಸಿಕ ದಣಿವನ್ನು ನಿವಾರಿಸಿಕೊಳ್ಳಲು

ಪಶುಪಾಲಕರು ಇದರ ಅಧೀನರಾಗಿದ್ದಾರೆ. ಬೇರೆ ಬೇರೆ ಪ್ರದೇಶಗಳಲ್ಲಿರುವ ಡೊಳ್ಳಿನ ಆಕಾರಗಳಲ್ಲಿ ವ್ಯತ್ಯಾಸ ಕಂಡರೂ ಡೊಳ್ಳು ತಯಾರಿಕೆಯಲ್ಲಿ ಕುರಿ ಆಡು ಹೋತು, ಹಾಗೂ ಟಗರಿನ ಚರ್ಮವನ್ನು ಮಾತ್ರ ಬಳಸಲಾಗುತ್ತದೆ. ಇದರಿಂದ ಪ್ರಪಂಚದ ಪಶುಪಾಲಕರು ಡೊಳ್ಳು ತಯಾರಿಕೆಯಲ್ಲಿ ಸಮಾನ ವಿಧಿವಿಧಾನಗಳನ್ನು ಬಳಸಿಕೊಂಡು ಬಂದಿರುವುದು ಗಮನಾರ್ಹ(ಬಿಜ್ಜರಗಿ, ಚಂದ್ರಕಾಂತ:೨೦೦೬:೩೮೦) ಅಂಶವಾಗಿದೆ.

ಡೊಳ್ಳು ಕಲೆಯು ಒಂದು ಜನಪದ ಗಂಡು ಕಲೆಯಾಗಿದೆ. ಪ್ರಾಚೀನ ಕಾಲದಲ್ಲಿ ತಮ್ಮ ರಕ್ಷಣೆಗೆ ಬಳಸುತ್ತಿದ್ದ ಈ ಕಲೆಯು ಇಂದು ಸಾರ್ವತ್ರೀಕರಣಗೊಂಡಿದೆ. ಡೊಳ್ಳು ಬಾರಿಸುವಿಕೆ ಮತ್ತು ಕುಣಿಯುವಿಕೆಯಿಂದ ಪ್ರಸಿದ್ಧ ಪಡೆದ ಈ ಕಲೆ ಭಾರತ ರಾಜಧಾನಿಯಾದ ದೆಹಲಿಯಲ್ಲಿ ಪ್ರದರ್ಶನವಾಗಿ ನಂತರ ರಶಿಯಾ ದೇಶದ ರಾಜಧಾನಿಯಾದ ಮಾಸ್ಕೋ ನಗರದಲ್ಲಿ ಪ್ರದರ್ಶನವಾಯಿತು. ಬಳಿಕ ಈ ಕಲೆಯ ವೈಭವ ವಿಶ್ವದಲ್ಲಡೆ ಬೀರಿತು. ವಿಜಯವಿಠಲ ದೇವಸ್ಥಾನದಲ್ಲಿ ಡೊಳ್ಳು ಬಾರಿಸುವ ಶಿಲ್ಪ ಮೂರ್ತಿಯನ್ನು ನೋಡಿದಾಗ ಆ ಕಾಲದ ಡೊಳ್ಳು ಹೇಗಿದೆ ಎಂಬ ಯೋಚನೆ ಹೊಳೆಯುತ್ತದೆ. ಪ್ರಾಚೀನ ಕಾಲದ ಡೊಳ್ಳಿ ನೋಲಗ ತಿಳಿದುಕೊಂಡರೆ ಅಲೆಮಾರಿ ಕುರುಬರ ಪರಂಪರೆಯ ಅರಿವು ನಮಗಾಗುತ್ತದೆ.

ಉಗಮ : ಡೊಳ್ಳು ಒಂದು ಚರ್ಮವಾದ್ಯ ಈ ವಾದ್ಯವು ಅಲೆಮಾರಿ ಕುರುಬರಿಗೂ ಮತ್ತು ಕುಣಿತಕ್ಕೆ ಬಿಡಿಸಲಾರದ ಅವಿನಾಭಾವ ಸಂಬಂಧವಿದೆ. ಇದು ಶಿವನ ಡಮರುಗದ ದೊಡ್ಡ ರೂಪವೇ ಆಗಿದೆ. ಈ ಡೊಳ್ಳು ಶಿವನಿಗೆ ಪ್ರಿಯವಾದ ವಾದ್ಯವೆಂದು ಅಲೆಮಾರಿ ಕುರುಬರು ನಂಬಿದ್ದಾರೆ. ಡೊಳ್ಳಿನ ಉಗಮದ ಬಗೆಗೆ ಕೆಲವೊಂದು ಪುರಾಣ ಕಥೆಗಳು ಪ್ರಚಾರದಲ್ಲಿದೆ. ಅಂಥದೊಂದು ಕಥೆ ಹೀಗಿದೆ. ಹಿಂದೆ ಡೊಳ್ಳಾಸೂರನೆಂಬ ರಾಕ್ಷಸನಿದ್ದ ಆತ ಪರಮಾತ್ಮನನ್ನು ಒಲಿಸಿಕೊಳ್ಳಲು ಸೂಜಿಯ ಮೇಲೆ ನಿಂತು ತಪಸ್ಸನ್ನಾಚರಿಸಿದ. ಒಂದು ದಿನ ದೇವರು ಅವನಿಗೆ ಪ್ರತ್ಯಕ್ಷನಾಗಿ ವರ ಕೇಳುವಂತೆ ಹೇಳಿದ ಆಗ ಡೊಳ್ಳಸೂರನು ನಿನ್ನನ್ನೇ ನುಂಗಬೇಕೆಂದು ವರ ಕೇಳಿದನು. ಶಿವ ತಥಾಸ್ತು ಎಂದಾಗ ಡೊಳ್ಳುಸುರನು ಶಿವನನ್ನೇ ನುಂಗಿ ಬಿಟ್ಟನು. ಆಗ ಮೂರು ಲೋಕವು ಪ್ರಳಯವಾಯಿತು. ದೇವಾನುದೇವತೆಗಳು ಬೊಬ್ಬಿಟ್ಟರು ಶಿವನು ಆ ರಾಕ್ಷಸನ ಹೊಟ್ಟೆಯಲ್ಲಿಯೇ ಬೆಳೆಯತೊಡಗಿದನು. ಬಾರ ತಡೆಯಲಾರದೆ ಆತ ನೀನು 'ಹೊರಗೆ ಬಾ' ಎಂದು ಹೇಳಲಾಗಿ ಶಿವ ಆತನ ಹೊಟ್ಟೆಯನ್ನು ಸೀಳಿ ಹೊರಬಂದನು. ಆ ಮೇಲೆ ಆತನ ಡಿಂಬವನ್ನು ಡೊಳ್ಳುಮಾಡಿದ ಚರ್ಮ ಸುಲಿದು ಅದರ ಇಬ್ಬದಿಗಳಿಗೆ ಬಿಗಿದ ಕರುಳಿನಿಂದ ಹಗ್ಗ ಬಿಗಿದ ಕೈಗಳನ್ನು ಗುಣ ಮಾಡಿದ ಆಮೇಲೆ ಅದನ್ನು ಹಾಲುಮತದವನಿಗೆ ದಾನ ಮಾಡಿದ.

ಇನ್ನೊಂದು ಪೌರಾಣಿಕ ಕಥೆಯ ಪ್ರಕಾರ ಡೊಳ್ಳಾಸುರನನ್ನು ಸಂಹರಿಸಿದ ಬಳಿಕ ಆತನ ದೇಹದ ವಿವಿಧ ಅಂಗಾಂಗಳಿಂದ ಶಿವನೇ ಸ್ವಯಂ ಡೊಳ್ಳನ್ನೇ ನಿರ್ಮಿಸಿದನು. ಶಿವನು ಡೊಳ್ಳನ್ನು ನುಡಿಸಿ ಬೆರಗಾದನು. ಆಮೇಲೆ ಭೂಮಿಯಲ್ಲಿ ಕುರಿ ಸಂಗೋಪನೆ ಮಾಡುವ ಕುಲವನ್ನು (ಕುರಬರನ್ನು) ಶಿವನು ನಿರ್ಮಿಸಿ ಅವರಿಗೆ ಡೊಳ್ಳನಿತ್ತು. ಡೊಳ್ಳನ್ನು ಅವರ

ಕೈಗೊಪ್ಪಿಸುವಾಗ ಶಿವ ಹೀಗೆಂದು ಎಚ್ಚರಿಸಿದ, ಕೆಟ್ಟಕಾರ್ಯಕ್ಕೆ ಡೊಳ್ಳನ್ನು ಬಡಿದರೆ ನಾಶವಾಗಿ ಹೋಗುತ್ತೀರಿ ಒಳ್ಳೆಯ ಕಾರ್ಯಕ್ಕೆ ಮಾತ್ರ ಡೊಳ್ಳನ್ನು ಬಾರಿಸಿರಿ (ಒಡೆಯರ್, ಡಿ. ಹೆಗ್ಗಡೆ :೨೦೦೩:೧೩೮).

ಮತ್ತೊಂದು ಪುರಾಣ ಕಥೆಯ ಪ್ರಕಾರ ಒಂದಾನೊಂದು ದಿನ ಪಾರ್ವತಿ ಮತ್ತು ಪರಮ ಶಿವರು ಜೂಜಾಡತ್ತಿದ್ದರು. ಸೋತವರು ತಮ್ಮ ಸರ್ವಸ್ವವನ್ನು ಬಿಟ್ಟು ಕೈಲಾಸ ತೊರೆದು ಯಾರಿಗೂ ಕಾಣದಂತೆ ಜೀವಿಸಬೇಕೆಂದು ಪಣಕಟ್ಟಿಕೊಂಡರು. ಅದರಂತೆ ಶಿವ ಸೋತ. ಪಣದಂತೆ ಭೂಲೋಕಕ್ಕೆ ಬಂದ ಶಿವ ಒಂದು ಗವಿಯಲ್ಲಿ ಕಲ್ಲಾಗಿ ಬಿದ್ದ ಜಾಗದಲ್ಲಿ ಮಾಯಾಮೂರ್ತಿ ಮಾಯರೂಪದಿಂದ ಕಾಯುತಿದ್ದ. ಹೀಗೆ ಬಹಳ ಸಮಯ ಕಳೆದವು. ಶಿವನಿಲ್ಲದ ಜಗತ್ತಿಗೆ ಜಗತ್ತೇ ಗೋಳಾಡಿತು. ಪಾರ್ವತಿಗೆ ಲೋಕಪಾಲನೆಯನ್ನು ಮಾಡುವುದು ಸಾಕಾಗಿ ಹೋಯಿತು. ಅನಂತರ ನಾರದನು ಶಿವನನ್ನು ಪತ್ತೆಮಾಡಿ ಮಾಯಾಮೂರ್ತಿಯನ್ನು ಕೊಂದರು. ಆಗ ತನಗೆ ಕಾವಲಿದ್ದ ಮಾಯಾ ಮೂರ್ತಿಯನ್ನು ಬಿಟ್ಟು ಬರಲಾರದೆ ಶಿವನು ಅವನ ಕಳೇಬರದಿಂದ ಡೊಳ್ಳನ್ನು ಮಾಡಿದ. ನಾರದ ಈ ಡೊಳ್ಳನ್ನು ಬಾರಿಸುತ್ತ 'ದೇವಿಯ ನಿಮ್ಮಯ ದೇವರು ಬಂದಾರೆ ಬನ್ನೀರೆ' ಎಂದು ಕರೆದನು. ಆಗ ಪಾರ್ವತಿಯು "ಸ್ವಾಮಿ ನಮ್ಮಯ ದೇವರು ಬಂದಾರ ಬನ್ನೀರಿ" ಎಂದು ಸಖಿಯರೊಂದಿಗೆ ಸಂಭ್ರಮದಿಂದ ಗಂಡನನ್ನು ಸ್ವಾಗತಿಸಿದಳು (ಬೋರಲಿಂಗಯ್ಯ,ಹಿ ಚಿ: ೧೯೯೯:೧೦೭).

ಮೇಲಿನ ಪೌರಾಣಿಕ ಕಥೆಗಳಲ್ಲಿ ಪಾಠಂತರುಗಳಿದ್ದರೂ ಡೊಳ್ಳಿನ ಉಗಮಕ್ಕೆ ಧಾರ್ಮಿಕ ಹಿನ್ನಲೆ ಇರುವದು ವಿಧಿವತಾಗುತ್ತದೆ. ಈ ಡೊಳ್ಳು ಅಷ್ಟೋಲಗದಲ್ಲಿ ಶ್ರೇಷ್ಠವಾದುದೆಂದೂ ಹಾಗೂ ಸತ್ಕರ್ಮಗಳಲ್ಲಿ ಮಾತ್ರ ಅದನ್ನು ಬಾರಿಸುಬೇಕೆಂದು ರೂಢಿ ಹೇಳುತ್ತದೆ. ಶಿವನೇ ಅಲೆಮಾರಿ ಕುರುಬರಿಗೆ ಡೊಳ್ಳು ದಯ ಪಾಲಿಸಿರುವನೆಂದು ನಂಬಿರುವುದರಿಂದಾಗಿ ಅದರ ಪಾವಿತ್ರತೆಯನ್ನು ಮನಗಾಣಬಹುದಾಗಿದೆ.

**ಡೊಳ್ಳಿನ ರಚನೆ :** ಸಿಲಿಂಡರಕಾರದ ಮರದ ದಿಮ್ಮಿಯನ್ನು ತೆಗೆದುಕೊಂಡು ಅದನ್ನು ಒಳಭಾಗದಲ್ಲಿ ಪೊಳ್ಳು ಮಾಡಲಾಗುವುದು. ಈ ದಿಮ್ಮಿಗಳು ಹಗುರವಾಗಿರಬೇಕು. ಅದಕ್ಕೆಂದೇ ಶಿವಾಲಿಯ ಅಥವಾ ಕರಿಮತ್ತಿಯ ಮರಗಳನ್ನು ಆಯ್ಕೆ ಮಾಡಿಕೊಳ್ಳುವರು. ಬಯಲು ನಾಡಿನವರು ಸಾಮಾನ್ಯವಾಗಿ ಸಿಗಬಹುದಾದ ಮಾವು ಬೇವು ಮರದ ದಿಮ್ಮೆ ಕೊಂಡು ಸೂಕ್ಷ್ಮವಾಗಿ ಅರ್ಧಗಾತ್ರ ಅಂಚನ್ನು ಬಿಟ್ಟು ಒಳಗೆ ಪೊಳ್ಳು ಮಾಡಿಕೊಂಡಾಗ ಅದಕ್ಕೆ ಸಿಲಿಂಡರ ಸ್ವರೂಪ ಬರುತ್ತದೆ. ಇವು ಪೊಳ್ಳಾದ ಬಳಿಕ ಹಗುರಾಗಿ ಮತ್ತು ಗಟ್ಟಿಯಾಗಿ ಇರುವವು. ಇವುಗಳನ್ನು ವಿವಿಧ ಬಗೆಯ ಸಿಲಿಂಡರುಗಳನ್ನಾಗಿ ಮಾಡುವರು. ಕೆಲವು ಚಿಕ್ಕವಾಗಿದ್ದರೆ ಇನ್ನು ಕೆಲವು ದೊಡ್ಡವು ಆಗಿರುತ್ತವೆ. ಇವು ಅವುಗಳ ಸ್ವರೂಪವನ್ನು ತಿಳಿಸುತ್ತವೆ. ಅತೀ ಚಿಕ್ಕ ಹಾಗೂ ಗಟ್ಟಿ ಡೊಳ್ಳಿಗೆ 'ಕೈಪಟ್ಟು' ಎಂದು ಕರೆಯಲಾಗುತ್ತದೆ. ಈ ಕೈಪಟ್ಟನ್ನು ಗುಣಿಯಿಂದ ಬಾರಿಸದೇ ಕೈಯಿಂದ ಬಡಿದು ಅಥವಾ ಬಲಗೈಯ ಸಣ್ಣ ಚಿಬಕಿ (ಬಿರುಸಾದ ಕಟ್ಟಿನೆಯ ಎಸಳು)ನಿಂದ ಬಾರಿಸಲಾಗುತ್ತದೆ. (ಡೊಳ್ಳು ಬಡಿತಕ್ಕೆ ೧೮-

೨೪ ಇಂಚು ಉದ್ದದ ಬಿದಿರಿನ ಅಥವಾ ಮಸಿವಾಳ ಕಟ್ಟಿಗೆಯಿಂದ ಬಾರಿಸುವ ಗುಣಿಗಳನ್ನು ತಯಾರಿಸಲಾಗುತ್ತದೆ. ಗುಣಿಗೆಯಿಂದ ಬಾರಿಸುವ ಗುಣಿಗಳನ್ನು ತಯಾರಿಸಲಾಗುತ್ತದೆ. ಗುಣಿಗಳಲ್ಲೂ ವಿಧವಿಧವಾದ ಆಕಾರಗಳನ್ನು ಮಾಡಲಾಗುತ್ತಿದೆ).

ಡೊಳ್ಳಿನ ಆಕಾರದ 'ಬಿದಿರಿನ ಬಳಿ'ಯನ್ನು ತಯಾರಿಸಿ ಆಡು-ಹೋತುಗಳ ಚರ್ಮಗಳನ್ನು ನೆನೆಸಿಟ್ಟು ಇಪ್ಪತ್ತೊಂದು ದಿನಗಳವರೆಗೆ ಹದಮಾಡಿ (ಮೂರು ನಾಲ್ಕು ದಿನ ಸುಣ್ಣದ ನೀರನ್ನು ಎರಚಬೇಕು) ಅಂತರದಲ್ಲಿ ತೂಗುಹಾಕಿ ನೆರಳಲ್ಲಿಯೇ ಒಣಗಿಸಬೇಕು. ನಂತರ ಚರ್ಮದ ಕೂದಲುಗಳನ್ನು ರೆಂಪಿಗೆಯಿಂದ ಕರೆದು ಎರಡು ಬದಿಯನ್ನು ನಯಗೊಳಿಸಬೇಕು. ಬಲಬದಿಗೆ ಹೋತಿನ ಚರ್ಮ ಎಡಗಡೆಗೆ ಆಡಿನ ಚರ್ಮಗಳನ್ನು ಹೊದಿಕೆ ಮಾಡಿ 'ಬಿದಿರಿನ ಬಳಿ'ಗೆ ಕೆಲವರು (ಕಬ್ಬಿಣದ ಬಳಿ ತಯಾರಿಸುತ್ತಾರೆ). ಅಂಟಿಸಿಟ್ಟು ಕೊಂಡು (ಕಟ್ಟಿ) ನಾರು ಅಥವಾ ಚರ್ಮದಿಂದ ವಿರುದ್ಧವಾಗಿ ಬಿಗಿಯಲಾಗುತ್ತದೆ. ಅಂಥ ಕಲೆ ಹಿಂದಿನಿಂದಲೂ ಒಬ್ಬರಿಂದ ಒಬ್ಬರಿಗೆ ಹರಿದು ಬಂದಿದೆ. ಹೀಗೆ ಬಿಗಿದ ಡೊಳ್ಳನ್ನು ಎಂಟತ್ತು ದಿನಗಳವರೆಗೆ ಹಾಗೆ ಇಟ್ಟು ಬಲಭಾಗದ (ಹೋತಿನ ಚರ್ಮ) ಡೊಳ್ಳಿನ ಹೊರಭಾಗದ ತುಂಬೆಲ್ಲ ಬಾಳೆಯ ಸೊಪ್ಪಿನ ಬೂದಿ ಹಾಗೂ ಎಣ್ಣೆಯಲ್ಲಿ ತಯಾರಿಸಿದ ಜಿಗಿಯನ್ನು ತೆಳ್ಳಗೆ ಲೇಪಿಸಲಾಗುತ್ತದೆ. ಇದರಿಂದಾಗಿ ಆ ಭಾಗ ದಪ್ಪಗಿನ ಮಂದನಾದ ಕೊಡುತ್ತಿದೆ. ಎಡಭಾಗವು (ಆಡಿನ ಚರ್ಮ) ಸಾಮಾನ್ಯವಾಗಿ ಬೆಳ್ಳಗಿರುತ್ತಿದ್ದು ತೆಳುವಾದ ತಾರನಾದ ಕೊಡುತ್ತದೆ. ಡೊಳ್ಳಿನ ಬಲಭಾಗ ವನ್ನು ಸುಮಾರು ಹದಿನೆಂಟು ಇಪ್ಪತ್ತು ಇಂಚು ಉದ್ದದ ಬಿದಿರಿನ ಅಥವಾ ಮಸಿವಾಳ ಕಟ್ಟಿಗೆಯಿಂದ ತಯಾರಿಸಿದ ಗುಣಿ ಹಿಡಿದು ಬಲಗೈಯಿಂದ ಬಾರಿಸಿದರೆ ಎಡಗಡೆ ಭಾಗವನ್ನು ಎಡಗೈ ನಾಲ್ಕು ಬೆರಳುಗನ್ನು ಸೇರಿಸಿ ಏಕಕಾಲಕ್ಕೆ ಪೆಟ್ಟು ಹಾಕಿ ನುಡಿಸಲಾಗುತ್ತದೆ. ಹೀಗೆ ತಯಾರಿಸಿದ ಹೊಸ ಡೊಳ್ಳನ್ನು ಅಮವಾಸೆಯ ದಿನ ಆರಾಧ್ಯ ದೇವರುಗಳ (ಬೀರೇಶ್ವರ. ಮಾಳಿಂಗರಾಯ ಎದುರಲ್ಲಿ ಕಂಬಳಿ ಹಾಸಿ ಕಂಬಳಿಯ ಮೇಲೆ ಡೊಳ್ಳನ್ನು ಇಟ್ಟು ಭಂಡಾರ ಹೂಗಳನ್ನು ಧರಿಸಲಾಗುತ್ತದೆ. ನಂತರ ಐದು ಕೈಗಳನ್ನು ಬಾರಿಸಲಾಗುತ್ತದೆ. ಇದು ಪರಂಪರಾಗತವಾಗಿ ಬಂದಿರುವ ಡೊಳ್ಳಿನ ರಚನೆಯಾಗಿರುವುದು.

**ಡೊಳ್ಳು ಕುಣಿತ :** ಜನಪದ ಕಲೆಗಳಲ್ಲಿಯೇ ಗಂಡು ಕಲೆ ಎಂದು ಕರೆಸಿಕೊಂಡಿರು ಡೊಳ್ಳು ಕುಣಿತವು ಅಲೆಮಾರಿ ಕುರುಬ ಗಂಡು ಮಕ್ಕಳೇ ಕರಗತ ಮಾಡಿಕೊಂಡಿದ್ದಾರೆ. ಒಳ್ಳೆ ಮೈಕಟ್ಟು ಮತ್ತು ಶಕ್ತಿಯುಳ್ಳ ಪುರುಷರು ಮಾತ್ರ ಈ ಕಲೆಯನ್ನು ಸಮರ್ಥವಾಗಿ ಪ್ರದರ್ಶಿಸಬಲ್ಲರು. ಈ ಕಲೆಯನ್ನು ಜಾತ್ರೆ-ಉತ್ಸವ, ಶ್ರಾವಣ ಸೋಮವಾರ ದೀಪಾವಳಿ, ಮಹಾನವಮಿ, ಯುಗಾದಿ, ಹಬ್ಬ ಹರಿದಿನಗಳು ಹಾಗೂ ರೇವಣಸಿದ್ಧ, ಬೀರೇಶ್ವರ. ಅಮೋಘಸಿದ್ಧ ಮಾಳಿಂಗರಾಯ, ಮಾಯವ್ವ, ಕರಿಲಿಂಗೇಶ್ವರ ಇತ್ಯಾದಿ ದೇವರುಗಳ ಜಾತ್ರೆ, ಉತ್ಸವಗಳ ಸಂದರ್ಭದಲ್ಲಿ ನೆರದ ಜನಸಮೂಹದೆದರು ಕಲಾವಿಧರು ಡೊಳ್ಳು ಕುಣಿತ ಕಲೆ ಪ್ರದರ್ಶಿಸು ತ್ತಾರೆ. ಡೊಳ್ಳು ಬಾರಿಸುವುದಕ್ಕೆ ವಯಸ್ಸಿನ ನಿರ್ಬಂಧ ಇಲ್ಲ. ಆದರೆ ಅವರು ಮಡಿಯಿಂದ ಬಂದಿರಬೇಕು. ಮನೆಯಲ್ಲಿ ಸೂತಕ, ಮುಟ್ಟು ಆಗಿರಬಾರದು. ದೈವಿಕ ಹಿನ್ನಲೆಯಲ್ಲಿ ಬೆಳೆದು

ಬಂದಿರುವ ಈ ಕಲೆಯು ಮೊದಲು ಡೊಳ್ಳು ಕಟ್ಟಿಕೊಳ್ಳುವ ಹಕ್ಕು ಸಮುದಾಯದ ದೈವಿಕ ದುರೀಣರಾದ ಈರಗಾರರದು. ಇವರು ಹಣೆಗೆ ಭಂಡಾರ ಧರಿಸಿ, ಟೊಂಕಕ್ಕೆ ಗೊಂಗಡಿ (ಕಂಬಳಿ)ಯನ್ನು ಸುತ್ತಿಕೊಂಡು ಅದರ ಮೇಲೆ ಹಗ್ಗದಿಂದ ಡೊಳ್ಳು ಕಟ್ಟುವಂತೆ ತನ್ನ ಸಹಚರರಿಗೆ ಹೇಳುತ್ತಾರೆ. ಬಳಿಕ ಇತರೆ ಡೊಳ್ಳು ಕಲಾವಿಧರ ಟೊಂಕಿಕ್ಕು ಕಂಬಳಿ ಸುತ್ತಿ ಹಗ್ಗದಿಂದ ಡೊಳ್ಳು ಕಟ್ಟಲಾಗುತ್ತದೆ. ಈರಗಾರ ದೇವರ ಮುಂದೆ ಮೂರು ಸಾರಿ ಡೊಳ್ಳು ಬಾರಿಸಿ, ಅನಂತರ ಕಲಾವಿಧರು ಜೋರಾಗಿ ಡೊಳ್ಳು ಆರಂಭಿಸುತ್ತಲೇ ಇತರೇ ಕಲಾವಿಧರು ಜೋರಾಗಿ ಡೊಳ್ಳು ಬಡಿಯಲು ಆರಂಭಿಸುತ್ತಾರೆ. ಡೊಳ್ಳು ಕುಣಿತದಲ್ಲಿ ಐದರಿಂದ ಹದಿನೈದು-ಇಪ್ಪತ್ತು ಕಲಾವಿಧರಿರುತ್ತಾರೆ.

ಆದರೆ ಇಷ್ಟೆ ಜನ ಇರಬೇಕೆಂಬ ನಿಯಮವಿಲ್ಲ. ಸಾಮಾನ್ಯವಾಗಿ ಸಮಸಂಖ್ಯೆಗಿಂತ ಬೆಸ ಸಂಖ್ಯೆಯ ಕಲಾವಿಧರಿರಬೇಕೆಂಬ ನಂಬಿಕೆ ಇದೆ ಡೊಳ್ಳು ಕುಣಿತಕ್ಕೆ ಹಿನ್ನಲೆಯಾಗಿ ಚವತಾಳ ಕೊಳಲು ನುಡಿಸುವುದು ಕೇಳಿ ಬರುತ್ತದೆ. ಡೊಳ್ಳು ಬಾರಿಸುವಾಗ ಬಲಗೈಯ ಬಡಿತ "ಬ್ರಹ್ಮದೊಡ್" ಎಂಬ ಶಬ್ದ ಮಾಡಿದರೆ ಎಡಗೈ ಪೆಟ್ಟು "ಡಾಂವ್" ಎಂಬ ನಾದ ಹುಟ್ಟಿಸುತ್ತದೆ. ಹೀಗೆ ಅದು "ಬ್ರಹ್ಮ ದೊಡ್ಡಾಂವ" ಎಂದು ಉದ್ಗರಿಸುತ್ತದೆ.

ಡೊಳ್ಳು ಬಡಿಯುವ ಕಲಾವಿದರು ವೃತ್ತಾಕಾರವಾಗಿನಿಂತು ಧಾನವಾಗಿ ಡೊಳ್ಳು ಬಡಿಯುತ್ತಾ ಎಡಗಡೆಯ ಕಾಲಿನ ಕಡೆಯಿಂದ ತಿರುಗುತ್ತಾರೆ. ಹಿಮ್ಮೇಳವು ಜೊತೆಗೂಡಿ ರುತ್ತದೆ. ಕ್ರಮೇಣ ಡೊಳ್ಳು ಬಡೆಯುವ ವಿಧಾನ ನಿಧಾನದಿಂದ ಜೋರುಗೊಂಡು ಅದರ ಲಬ್ಬರ ಏರುತ್ತಾ ಹೋದಂತೆ ಕೇಳುವವರ ಕಿವಿ ಗಡಚಿಕ್ಕುವ ಮಟ್ಟಕ್ಕೇರಿ ಮತ್ತೆ ಮತ್ತೊಂದು ಗತ್ತು ತೋರುವಾಗ ನಿಧಾನಕ್ಕಿಳಿಯುತ್ತದೆ. ಗತ್ತುಗಳೆಲ್ಲವು ಮುಗಿದ ಮೇಲೆ ಬಾರಿಸುವದನ್ನು ನಿಲ್ಲಿಸಿ ಹಾಡಿಗೆ ಹೊಳ್ಳವು ಹಾಕಲಾಗುತ್ತದೆ.

"ಹಳ್ಳಿಯಿಂದ ದಿಲ್ಲಿಗೆ ಹೋದರು ಡೊಳ್ಳಿಗೆ ಒಂದೇ ಪೆಟ್ಟು" ಎನ್ನುವ ಗಾದೆ ಚಾಲ್ತಿ ಯಲ್ಲಿದೆ. ಬಾರಿಸುವ ವಿಧಾನ ಎಲ್ಲ ಗತ್ತುಗಳಲ್ಲಿಯೂ ಒಂದೇ ರೀತಿಯಾಗಿರುತ್ತದೆ. ಗುಣಿ ಲೆಕ್ಕದಲ್ಲಿ ಬಾರಿಸುವಿಕೆ ಹೊಡೆತಗಳ ಸಂಖ್ಯೆಯನ್ನು ಸೂಚಿಸುತ್ತದೆ. ಒಂದು ಗುಣಿ (ಬಲ)ಪೆಟ್ಟಿ ನಂತರ ಒಂದು ಕೈ (ಎಡ) ಪೆಟ್ಟಿ ಇದೇ ಕ್ರಮೇಣ ಹೆಚ್ಚುತ್ತಾ ಹೋಗುತ್ತದೆ. ಉದಾಹರಣೆಗೆ ಒಂಟಿ ಗುಣಿ ಡಂ... ಡಂ... ಬಲಗೈಯಿಂದ ಪಂಗ, ಪಂಗ್... ಪಂಗ್... ಎಡಗೈಯಿಂದ ಹೀಗೆ ಇಪ್ಪತ್ತೊಂದು ಸಲ ಎಣಿಕೆಯಿಂದ ನಡೆಯುತ್ತದೆ. ಇಪ್ಪತ್ತೊಂದನೆಯ ಗುಣಿಗೆ ಸಿಡಿ ಬಡಿಯುವವನು ಸಪ್ಪಳದಿಂದಲೇ ಸಂಜ್ಞೆ ನೀಡುತ್ತಾನೆ. ಆಗ ಡೊಳ್ಳು ಬಡಿಯುವವರು ಎರಡನೆಯ ಗುಣಿ ಅಂದರೆ ಜೋಡು ಗುಣಿ ಬಾರಿಸುವಿಕೆಯಲ್ಲಿ ತೊಡಗುತ್ತಾರೆ.

ಸಾಮಾನ್ಯವಾಗಿ ಗುಣಿಯಲ್ಲಿ ಬೆಸ ಸಂಖ್ಯೆ ಇರುವುದು ಕಂಡುಬರುತ್ತದೆ. ಆದರೆ ಕಲಾವಿದರು ಏಳು (ಗುಣಿ) ಪೆಟ್ಟನ್ನು ಮಾತ್ರ ಬಾರಿಸುವುದಿಲ್ಲ. ಏಕೆಂದರೆ ಏಳು ಅಶುಭ ಸಂಖ್ಯೆ ಎಂದು ಭಾವಿಸಿದುದೇ ಕಾರಣವಾಗಿದೆ(ಶಿವಾನಂದ ಗುಬ್ಬಣ್ಣವರ: ೧೨೧).

ಡೊಳ್ಳು ಬಡಿತದ ಈ ಕಲೆಯೂ ಮೂಲದಿಂದ ಕಾಲಕ್ರಮೇಣ ಬದಲಾಗುತ್ತಾ ಅನೇಕ ವಿಧಗಳನ್ನು ಮುಟ್ಟಿದೆ. ಅವುಗಳಲ್ಲಿ ಪ್ರಮುಖವಾದ ಕೆಲವು ಈ ಕೆಳಗಿನಂತಿವೆ.

**ಕೂತುಪಾಲಿ :** ಡೊಳ್ಳು ಬಾರಿಸುವ ವ್ಯಕ್ತಿ ಕುಕ್ಕರಗಾಲಿನಲ್ಲಿ ಕುಳಿತುಕೊಂಡು ಡೊಳ್ಳು ಬಾರಿಸುತ್ತ ನಂತರ ಕುಪ್ಪಳಿಸುವನು ಇದು ನಿಧಾನಗತಿಯಲ್ಲಿ ನಡೆಯುವುದು ವಿಶೇಷವಾಗಿದೆ.

**ಹಾರಿ ಬಾರಿಸುವುದು :** ಡೊಳ್ಳು ಬಾರಿಸುತ್ತಲೆ ಎರಡು ಮೂರು ಅಡಿ ಮೇಲೆ ಜಿಗಿಯುವುದು

**ಲಾಗ ಹೊಡೆಯುವುದು :** ಲಾಗ ಹೊಡೆದು ಡೊಳ್ಳು ಬಾರಿಸುವುದನ್ನು ತಂಡದಲ್ಲಿಯ ಒಂದೆರಡು ಜನರು ಮಾತ್ರ ಅಭ್ಯಾಸ ಮಾಡಿರುತ್ತಾರೆ. ಡೊಳ್ಳು ಬಾರಿಸುತ್ತಿರುವಾಗಲೇ ಗತ್ತಿಗೆ ತಕ್ಕಂತೆ ಕೋತಿಯಂತೆ ಲಾಗ ಹೊಡೆಯುವುದು ಮತ್ತೆ ನೇರ ಸ್ಥಿತಿಗೆ ಬಂದು ಗತ್ತು ತಪ್ಪದಂತೆ ಪೆಟ್ಟು ಹಾಕುವುದು.

**ಮರಗಾಲು ಬಡಿತ :** ಡೊಳ್ಳು ಬಡಿಯುವ ಕಲಾವಿದ ಕಾಲಿಗೆ ಒಂದೆರಡು ಅಡಿ ಎತ್ತರದ ಮರದಿಂದ ಮಾಡಿದ ಮರಗಾಲನ್ನು ಕಟ್ಟಿಕೊಂಡು ಡೊಳ್ಳು ಕುಣಿತ ಪ್ರದರ್ಶಿಸುವುದು.

**ಮಂಡಿ ಬಡಿತ :** ಇಬ್ಬರು ಕಲಾವಿದರು ವೇಗ ಬಡಿತದ ಸಂದರ್ಭದಲ್ಲಿ ಎಡಗಾಲು ಮಂಡಿಯನ್ನು ನೆಲಕ್ಕೆ ಒತ್ತಿ ಬಲಗಾಲನ್ನು ಊರಿ ಡೊಳ್ಳು ಬಾರಿಸುವರು.

**ಗಾಡಿಚಕ್ರದ ಬಡಿತ :** ಕಬ್ಬಿಣದ ಆಚ್ಚಿನ ಮೇಲೆ ಎತ್ತಿನ ಗಾಡಿಯ ಚಕ್ರವನ್ನಿಟ್ಟು ಅದರ ಮೇಲೆ ನಿಂತುಕೊಂಡು ತಲೆಯ ಮೇಲೆ ತುಂಬಿದ ಕೊಡವನ್ನಿಟ್ಟುಕೊಂಡು ಡೊಳ್ಳು ಬಾರಿಸುವರು(ಗುಬ್ಬಣ್ಣವರ, ಶಿವಾನಂದ ;೧೯೮೦: ೧೨೨). ಈ ರೀತಿಯಾಗಿ ಬಾರಿಸುವುದು ವಿಶೇಷ ಪ್ರಕಾರ ವೆನಿಸುತ್ತದೆ. ಅದರೆ ಈ ರೀತಿ ಬಾರಿಸುವವರು ತುಂಬಾ ವಿರಳ.

ಇದಲ್ಲದೆ ತುಂಬಿದ ಕೊಡವನ್ನು ಬಾಯಿಯಿಂದ ಹಿಡಿದುಕೊಂಡು ನೀರು ಚೆಲ್ಲದಂತೆ ಡೊಳ್ಳು ಬಾರಿಸುತ್ತ ಕುಣಿಯುವುದು; ಒಂದು ದೊಡ್ಡ ಡೊಳ್ಳಿನ ಮೇಲೆ ಮತ್ತೊಂದು ಸಣ್ಣ ಡೊಳ್ಳನ್ನಿಟ್ಟು ಎರಡು ಡೊಳ್ಳುಗಳನ್ನು ಒಂದಾದ ನಂತರ ಮತ್ತೊಂದವಂತೆ (ಸರದಿಯಂತೆ) ಬಾರಿಸುವುದು. ಕಲಾವಿದನ ಮುಂಭಾಗ ಹಾಗೂ ಹಿಂಭಾಗಗಳಿಗೆ ಒಂದೊಂದು ಡೊಳ್ಳನ್ನು ಕಟ್ಟಿ ಆ ಡೊಳ್ಳಿನ ಮೇಲೆ ಚಿಕ್ಕ ಮಕ್ಕಳನ್ನು ಕೂರಿಸಿಕೊಂಡು ಎರಡು ಡೊಳ್ಳುಗಳನ್ನು ಬಾರಿಸುವುದು. ಇವುಗಳಲ್ಲದೆ ಒಂದೆಚ್ಚೆ ಕುಣಿತ, ಎರಡೆಚ್ಚೆ ಕುಣಿತ, ಮಂಡಲ ಕುಣಿತ, ಜೆಗ್ಗಿನ ಕೈಯಿ, ಜೋಡು ಪಾಲಿ ಇತ್ಯಾದಿ ಪ್ರಕಾರಗಳಿವೆ.

ಡೊಳ್ಳು ಕುಣಿತದಲ್ಲಿ ಮತ್ತೊಂದು ವಿಶೇಷ ಪ್ರಕಾರವೆಂದರೆ 'ಲವಳ' ಹಾಕುವುದು. ಇದನ್ನು ಕೆಲವು ಕಡೆ "ಜಡೆ ಹೆಣೆಯುವುದು" ಎಂದು ಕರೆಯುತ್ತಾರೆ. ವೃತ್ತಾಕಾರದ ಸಣ್ಣ ಹಲಗೆಯ ಮೇಲು ಭಾಗದಲ್ಲಿ ಒಂದು ಕಬ್ಬಿಣದ ಕೊಂಡಿಯನ್ನು ಲಗತ್ತಿಸಿ ಅದರ ಸುತ್ತಲೂ ಎಂಟರಿಂದ ಹತ್ತು ರಂಧ್ರಗಳನ್ನು ಮಾಡಿ ಆದಕ್ಕೆ ನೂಲಿನ ಸಣ್ಣ ಹಗ್ಗಗಳನ್ನು ಸೇರಿಸಿ ಇಳಿಬಿಟ್ಟಿರುತ್ತಾರೆ. ಎಂಟು ಹತ್ತು ಅಡಿ ಎತ್ತರದಲ್ಲಿ ಕಟ್ಟಿರುವ ಬಿದಿರು ಬೊಂಬೆಗೆ ಈ ಕೊಂಡಿಯನ್ನು ಹುರಿಯಿಂದ ಭದ್ರಪಡಿಸಿರುತ್ತಾರೆ. ಡೊಳ್ಳು ಹಿಡಿದು, ಬಲಗೈಯಲ್ಲಿ ಡೊಳ್ಳುಬಾರಿಸುತ್ತ

ಗತ್ತಿಗನುಸಾರವಾಗಿ ಕುಣಿಯುತ್ತಾರೆ. ಎದುರು ಬದರು, ಅಕ್ಕಪಕ್ಕ, ವೃತ್ತಾಕಾರವಾಗಿ ಹೀಗೆ ಒಂದು ಕ್ರಮದಲ್ಲಿ ಸುತ್ತುತ್ತಾರೆ. ಮಧ್ಯದಲ್ಲಿ ನಾಯಕ ನಿಂತು ಪದ ಹೇಳುತ್ತಾನೆ. ಕಲಾವಿದರು ಕ್ರಮವಾಗಿ ಸುತ್ತಿದಾಗ ಹಗ್ಗಗಳು ಜಡೆಯಂತೆ ಹೆಣೆದುಕೊಳ್ಳುತ್ತವೆ. ಹಾಗೆಯೇ ಕುಣಿತವನ್ನು ಹಿಮ್ಮುಖ ಮಾಡಿದರೆ ಆ ಜಡೆ ಬಿಚ್ಚಿಕೊಳ್ಳುತ್ತದೆ. ಹೀಗೆ ಡೊಳ್ಳು ಕುಣಿತದ ವಿವಿಧ ಪ್ರಕಾರಗಳನ್ನು ನೋಡಿದಾಗ ಶಕ್ತಿ ಮತ್ತು ಬುದ್ಧಿವಂತಿಕೆ ಎರಡನ್ನೂ ಮೈಗೂಡಿಸಿಕೊಂಡು ಬಂದಿರುವುದು ವಿಶೇಷ ಕಲೆ ಎಂಬುದು ಸ್ಪಷ್ಟವಾಗುತ್ತದೆ.

ಡೊಳ್ಳಿನ ಹಾಡು

ಕನ್ನಡ ಜನಪದ ಸಾಹಿತ್ಯದಲ್ಲಿ ಡೊಳ್ಳಿನ ಹಾಡುಗಳು ಒಂದು ಪ್ರಕಾರವಾಗಿ ಗುರುತಿಸಲ್ಪಟ್ಟಿವೆ. ಡೊಳ್ಳಿನ ಹಾಡಿನ ಸಂಪ್ರದಾಯ ಕರ್ನಾಟಕದಲ್ಲಿರುವ ಬಹುಸಂಖ್ಯಾತ ಹಾಲುಮತ ಕುರುಬ ಸಮುದಾಯಕ್ಕೆ ಸಂಬಂಧಿಸಿದ್ದಾಗಿದೆ. ಆದರೂ ಸಹ ಬೆಳಗಾವಿ ಜಿಲ್ಲೆಯ ಅಲೆಮಾರಿ ಕುರುಬರಲ್ಲಿ ವಿಶಿಷ್ಟ ಪ್ರಾಮುಖ್ಯತೆ ಪಡೆದುಕೊಂಡಿವೆ. ಈ ಹಾಡುಗಳು ಅಲೆಮಾರಿ ಕುರುಬರ ಆರಾಧ್ಯ ದೇವರುಗಳಾದ ರೇವಣಸಿದ್ಧ, ಬೀರೇಶ್ವರ, ಮಾಳಿಂಗರಾಯ, ಕರಿಸಿದ್ಧ, ಹಾಲಸಿದ್ಧ, ಅಮೋಘಸಿದ್ಧ, ಮಾಯಕ್ಕ ಹಾಗೂ ಶಿವಪಾರ್ವತಿ ಕುರಿತಂತೆ ಸಾಹಿತ್ಯ ಭಕ್ತಿ ಎರಡನ್ನು ಸ್ಫುರಿಸುತ್ತವೆ. ಕುಲದೈವವನ್ನಲ್ಲದೆ ಬೇರೆ ವಿಷಯಗಳನ್ನೊಳಗೊಂಡ ಹಾಡುಗಳು ಇತ್ತಿತ್ತಲಾಗಿ ರಚಿತಗೊಂಡಿರಬೇಕು.

ಡೊಳ್ಳಿನ ಹಾಡುಗಳು ಸಂದರ್ಭದ ದೃಷ್ಟಿಯಿಂದ ಎರಡು ರೀತಿಯಾಗಿ ಹಾಡಲ್ಪಡುತ್ತವೆ. ಒಂದು ಊರಾಡುವ ಸಂದರ್ಭದಲ್ಲಿ ಹಾಡುವ ಹರಕೆಯ ಹಾಡು ಸಂಪ್ರದಾಯವಾಗಿ ಬೆಳೆದು ಬಂದಿದೆ. ಎರಡು ದಿಮ್ಮಿಟ್ಟು ಹಾಡುವ ಗೋಷ್ಠಿ ವಿಧಾನ ದೇವರ ಸೇವೆಗಾಗಿ ಬಂದಿದ್ದು ಈ ಎರಡು ಸಂದರ್ಭಗಳಲ್ಲಿ ಪ್ರತಿಯೊಂದು ಹಾಡೂ "ಸ್ವಾಮಿ ನಮ್ಮಯ್ ದೇವರ್ ಬಂದಾವ್ಕ ಬನ್ನಿರೇ" ಎಂಬ ಪಲ್ಲವಿಯೊಂದಿಗೆ ಆರಂಭವಾಗುತ್ತದೆ. ಈ ಪಲ್ಲವಿಯ ಹಿಂದೆ ಒಂದು ಸಂಪ್ರದಾಯವೇ ಇರಬಹುದೆನಿಸುತ್ತದೆ. ಊರಾಡಲು ದೇವರ ಪಲ್ಲಕ್ಕಿ ಹೊತ್ತು ತಮ್ಮ ತಮ್ಮ ಭಕ್ತರ ಊರುಳಿಗೆ ಭಿಕ್ಷೆಗೆ ಹೋಗುವುದುಂಟು. ಇದಕ್ಕೆ ಒಳ್ಳೆಯ ಉದಾಹರಣೆ ಕೊಣ್ಣೂರು ಕರಿಸಿದ್ಧನ ಪಲ್ಲಕ್ಕಿಗಳು ಊರೂರು ಅಡ್ಡಾಡುತ್ತ ಭಕ್ತರ ಮನೆಗಳಿಗೆ ಹೋಗುತ್ತವೆ. ಭಕ್ತರ ಊರಿಗೆ ಹೋಗುವ ದೇವರು ಆ ಊರಿನಲ್ಲಿರುವ ತನ್ನ ಭಕ್ತರ ಮನೆಯಲ್ಲಿ ಒಂದೊಂದು ವಸ್ತಿ ಮಾಡುವುದುಂಟು. ಪಲ್ಲಕ್ಕಿಯ ಹಿಂದೆ ಬಂದಿರುವ ಪೂಜಾರಿಗಳೆಲ್ಲ ಆ ಮನೆಯಲ್ಲಿಯೇ ಊಟವನ್ನು ಮಾಡಿಸಿ ತೃಪ್ತಿಪಡಿಸಲಾಗುತ್ತದೆ. ಮರುದಿನ ಮುಂಜಾನೆ ಪಲ್ಲಕ್ಕಿ ಮನೆಯಿಂದ ಹೊರಟ ಸಂದರ್ಭದಲ್ಲಿ ಭಕ್ತ ತನ್ನ ಶಕ್ತ್ಯಾನುಸಾರ ದೇವರಿಗೆ ಕಾಣಿಕೆ ನೀಡುತ್ತಾನೆ.

ಹಾಡುಗಳ ಸ್ವರೂಪ

ಡೊಳ್ಳಿನ ಹಾಡುಗಳು ಬಹುತೇಕ ಕಥಾವಾಹಕಗಳು ಕಥೆ ಇರದ ಹಾಡುಗಳು ಇವೆ. ಆದರೆ ಅವು ಸಂಖ್ಯೆಯಲ್ಲಿ ಕಡಿಮೆ. ಸ್ತುತಿ, ಮುಖ್ಯಹಾಡು, ಹರಕೆಯ ಹಾಡು ಯಾವುದೇ

ಇರಲಿ ಕೊನೆಯಲ್ಲಿ ಹಾಲುಮತರ ಮೇಲ್ಲೊಂದು ಗಿರಿಯೊ ಗಿರಿಗೊಂದ ಕ್ಯಾಣಗನುರದೇವೊ ಎಂದೂ ಹೆಚ್ಚೆ ಹೆಚ್ಚೆಗೆ ಪಾವಡ ಮಾಡಯಾನ ಗುಜ್ಜಿ ಮಾಯವ್ವನ ತಮ್ಮಾನೋ ಎಂದು ಮುಕ್ತಾಯ ಪಡೆಯುತ್ತೇವೆ (ಶ್ರೀರಾಮ, ಇಟ್ಟಣ್ಣನವರ...: ೧೯೭೭:೮೨). ಸ್ತುತಿ ಪದಗಳು ಸಾಮಾನ್ಯವಾಗಿ ಕುಲದೈವವನ್ನು ಕುರಿತಿರುತ್ತವೆ. ಮುಖ್ಯ ಹಾಡು ಸಾಮಾನ್ಯವಾಗಿ ದೀರ್ಘವಾಗಿರುತ್ತದೆ. ಎರಡು ಅಥವಾ ನಾಲ್ಕು ಸಾಲಿಗೆ ಒಂದರಂತೆ ಒಂದೊಂದು ನುಡಿ ಇರುತ್ತದೆ. ಬಿಡಿ ಕಥೆಗಳು ಅಥವಾ ಕಥೆಯಿರದ ಬಹಳಷ್ಟು ವಿಷಯಗಳು ಒಂದೊಂದೇ ಹಾಡಿನಲ್ಲಿ ಮುಕ್ತಾಯ ಪಡೆಯುತ್ತವೆ. ಆದರೆ ಭೀರದೇವರ ಚರಿತ್ರೆಯಂಥ ಸುದೀರ್ಘ ವಿಷಯವನ್ನು ಎತ್ತಿಕೊಂಡಾಗ ಹಾಡು ಎರಡಾಗಿ, ಮೂರಾಗಿ ಒಡೆಯುವುದುಂಟು. ಘಟನಾವಳಿಗಳ ಕ್ರಮದಲ್ಲಿಯೇ ಹಾಡು ಸಾಗುತ್ತವೆ. ಮುಂದೆ ಕಥೆ ಉಳಿದಿದ್ದರೆ ಈ ಸಂದರ್ಭದಲ್ಲಿ "ಇಲ್ಲಿಗೆ ಒಂದು ಸಂದಿಹೇಳ ಗುರುವ ಹಾಡತೀವ ಪದ ಮುಂದೇಳೊ" ಎಂಬುದಾಗಿ ಬರುವ ಮಾತು ಹಿಂದಿನ ಹಾಡು ಒಂದು ಘಟ್ಟಕ್ಕೆ ಒಂದು ನಿಂತುದನ್ನು ಹೇಳುವುದಲ್ಲದೆ ಮುಂದಿನ ಹಾಡಿನ ಬಗೆಗೆ ಕುತೂಹಲ ಉಳಿಯುವಂತೆ ಮಾಡುತ್ತದೆ. ದೊಡ್ಡವಾದ ಕೆಲವು ಡೊಳ್ಳಿನ ಹಾಡುಗಳಲ್ಲಿ 'ವಚನ'ವನ್ನು ಬಳಸಿಕೊಳ್ಳುವುದಿದೆ. 'ವಚನ'ವೆಂದರೆ ವಿಷಯವನ್ನು ಗದ್ಯದಲ್ಲಿ ಹೇಳುವ ರೀತಿ. ಇದನ್ನು ಡಾ. ಶಿವಾನಂದ ಗುಬ್ಬಣ್ಣವರ ಸಂಪಾದನೆಗಳಲ್ಲಿ ವಚನಗಳನ್ನು ಹೊಂದಿರುವ ಡೊಳ್ಳಿನ ಹಾಡುಗಳನ್ನು ನೋಡಬಹುದಾಗಿದೆ. ಕಲಾವಿದರು ವಚನಗಳನ್ನು ಹಾಡುವುದಕ್ಕೆ ಬದಲಾಗಿ ವಾಚಿಸುತ್ತಾರೆ. ಇದು ಹಾಡಿನ ಏಕತಾನತೆಯನ್ನು ಮೊಟಕುಗೊಳಿಸುವದರ ಜೊತೆಗೆ ಪದ್ಯ ವಿಷಯದ ಗದ್ಯ ಸಾರಾಂಶವಾಗಿರುವುದರಿಂದ ಪಂಡಿತರಲ್ಲದ ಶ್ರೋತೃಗಳಿಗೆ ಹಾಡಿನ ಅಂತರ್ಯ ತಿಳಿದು ಕೊಳ್ಳಲು ಸಹಾಯಕವಾಗುತ್ತದೆ. ಹೀಗೆ ಹಾಡಿನ ಮಧ್ಯದಲ್ಲಿ ಬರುವ ವಚನ ಬಹಳ ಹೊತ್ತಿನವರೆಗೆ ಲಯಬದ್ಧವಾಗಿ ಹಾಡಬೇಕಾಗಿ ಬಂದ ಕಲಾವಿಧರಿಗೆ ಬದಲಾವಣೆ ಹಾಗೂ ಸ್ವಲ್ಪ ಮಟ್ಟಿಗೆ ವಿರಾಮವನ್ನು ತಂದು ಕೊಟ್ಟರೆ ಹಾಡಿನ ಏಕತಾನತೆಯಿಂದ ಬೇಸರಗೊಂಡ ಶ್ರೋತೃಗಳನ್ನು ಲವಲವಿಕೆಯಿಂದ ಇರುವಂತೆ ಮಾಡುತ್ತದೆ.

**ಹಾಡಿನ ಸೃಷ್ಟಿ**

ಡೊಳ್ಳಿನ ಹಾಡುಗಳು ಕೆಲವು ನಿರಕ್ಷರಿಗಳಿಂದ ಕಿವಿಯಿಂದ ಕಿವಿಗೆ ಬಂದಿರುವಂತೆಯೇ ಈಗಲೂ ರಚನೆಗೊಳ್ಳುತ್ತಿವೆ. ಆದರೆ ಡೊಳ್ಳಿನ ಹಾಡು ಕಟ್ಟುವವನು ಕವಿಯಾಗಿರಬಹುದು. ಅಥವಾ ಪ್ರಾಥಮಿಕ ಶಿಕ್ಷಣ ಹೊಂದಿದ ಇಲ್ಲವೆ ಚೆನ್ನಾಗಿ ಓದು ಬರಹ ಬಲ್ಲ ಅಲೆಮಾರಿ ಕುರುಬರ ಹಾಲುಮತಕ್ಕೆ ಸಂಬಂಧಿಸಿದ ಧಾರ್ಮಿಕ ಗ್ರಂಥಗಳು, ರಾಮಾಯಣ ಮಹಾಭಾರತ ಹಾಗೂ ಇದರೇ ಪುರಾಣ, ಪುಣ್ಯ ಕತೆಗಳನ್ನು ಸ್ವಯಂ ಅಧ್ಯಯನ ಮಾಡಿಯೋ ಅಥವಾ ಬಲ್ಲವರಿಂದ ಅವುಗಳಲ್ಲಿಯ ವಿಚಾರಗಳನ್ನು ತಿಳಿದು ತಮ್ಮ ಜ್ಞಾನ ಭಂಡಾರವನ್ನು ಹೆಚ್ಚಿಸಿಕೊಳ್ಳುವುದರ ಜೊತೆಗೆ ಅವುಗಳನ್ನು ತಮ್ಮ ಕೃತಿರಚನೆಯಲ್ಲಿ ಬಳಸಿಕೊಂಡಿರುವುದು ವಿಧಿತವಾಗುತ್ತದೆ. ಉದಾಹರಣೆಗೆ ಭೃಂಗಿ, ಆದಿಗೊಂಡ, ರೇವಣಸಿದ್ಧೇಶ್ವರ, ಭೀರೇಶ್ವರ,

ಮಾಳಿಂಗರಾಯ ಮುಂತಾದ ಹಾಡುಗಳಿಗೆ ರಸ್ತಾಪುರ ಭೀಮಕವಿ ವಿರಚಿತ ಶ್ರೀ ರೇವಣಸಿದ್ದೇಶ್ವರ ಲೀಲಾ ಸಂಯುಕ್ತ ಹಾಲುಮತ್ತೋತ್ತೇಜಕ ಪುರಾಣ ಪ್ರಮುಖ ಆಕರ ವಾಗಿದೆ.

ಡೊಳ್ಳು ಹಾಡು ರಚಿಸುವವನು ಕವಿಯಾಗಿರುತ್ತಾನೆ. ಕೆಲವೊಮ್ಮೆ ಹಾಡುಗಾರನೂ ಆಗಿರಬಹುದು. ಒಂದು ಮಾತು ನಿಜ ಡೊಳ್ಳಿನ ಹಾಡಿಗೆ ಕವಿಗಾರನಾಗಿ ಒಂದೆಡೆ ಕರ್ತೃ ಒಬ್ಬನಿರುತ್ತಾನೆ. ಈತ ಬರೆಯಬಲ್ಲವನಾಗಿದ್ದರೆ ಹಾಡಿನ ಮೇಳದವರು ಇಂತಿಂಥ ಒಂದು ಕಥೆಯನ್ನೊಳಗೊಂಡ ಹಾಡನ್ನು ಕಟ್ಟಿಕೊಡಲು ಕೇಳಿಕೊಂಡಾಗ ಆ ಕವಿ ತಾನು ಕೇಳಿದ ಪರಂಪರಾಗತ ಹೇಳಿಕೆಗಳನ್ನು ಅವಲಂಬಿಸಿ ಅಥವಾ ಕ್ವಚಿತ್ತಾಗಿ ತನ್ನಲ್ಲಿರುವ ಪುಸ್ತಕಗಳನ್ನೋ ಹಸ್ತಪ್ರತಿಗಳನ್ನೋ ಅವಲಂಬಿಸಿ ಹಾಡುಕಟ್ಟಿ ಕೊಡುವುದುಂಟು. ಇದನ್ನು ಹವ್ಯಾಸವೆಂದು ಮಾಡುವವರು ಕೆಲವರಾದರೆ ಇದನ್ನೇ ವೃತ್ತಿಯನ್ನಾಗಿ ಮಾಡಿಕೊಂಡ ಅಪರೂಪದ ವ್ಯಕ್ತಿಗಳೂ ಸಿಗುತ್ತಾರೆ. ಅಂಥ ಅಪರೂಪದ ವ್ಯಕ್ತಿಗಳಲ್ಲಿ ಬೆಳಗಾವಿ ಜಿಲ್ಲೆಯ ಯಾದವಾಡದ ರಾಮಚಂದ್ರ ಶೇರಖಾನೆ ಒಬ್ಬರಾಗಿದ್ದಾರೆ. ಯಾರಾದರೂ ಒಂದು ವಿಷಯ ಹೇಳಿ ಹಾಡು ಬರೆದುಕೊಡಲು ಕೇಳಿಕೊಂಡರೆ ಸಾಕು ಬರೆದು ಕೊಡುತ್ತಿದ್ದರು. ಇವರು ಹಾಡು ಬರೆದು ಕೊಡುತ್ತಿರುವುದಲ್ಲದೆ ಊರಿಂದೂರಿಗೆ ಹಾಡು ಕಲಿಸಲೂ ಹೋಗುತ್ತಿದ್ದರು. ಸಾಮಾನ್ಯವಾಗಿ ಕಲಿಸಲು ಹೋದ ಊರುಗಳಲ್ಲಿ ತಾವು ಬರೆದ ಹಾಡುಗಳನ್ನೇ ಕಲಿಸುತ್ತಿದ್ದರು. ಒಂದು ಮೇಳವನ್ನು ಸುಮಾರು ಎರಡು ಮೂರು ತಿಂಗಳಲ್ಲಿ ತಯಾರಿಸುತ್ತಿದ್ದರು. ಹೀಗೆ ಕವಿಯಿಂದ ಒಂದು ಮೇಳ ಹಾಡುಗಳನ್ನು ಕಲಿತುಕೊಂಡ ಮೇಲೆ ಈ ಹಾಡುಗಳು ಮುಂದೆ ಮೇಳದಿಂದ ಮೇಳಕ್ಕೆ ಪ್ರಸಾರಗೊಳ್ಳುತ್ತವೆ, ಮುಂದುವರಿಯುತ್ತವೆ. ಹಾಡಿನ ಮೇಳದಲ್ಲಿ ಬಹುಪಾಲು ಜನ ಅನಕ್ಷರಸ್ಥರಾಗಿರುತ್ತಾರೆ. ಹಾಡುಗಳನ್ನು ಬರೆದಿಟ್ಟುಕೊಳ್ಳುವುದಕ್ಕೆ ಅಥವಾ ಒಬ್ಬ ರಾದರೂ ಅಕ್ಷರವಂತನಿರುತ್ತಾರೆ. ಈ ಅಕ್ಷರಸ್ಥನೆ ಸಾಮಾನ್ಯವಾಗಿ ಮೇಳದ ಮುಖ್ಯಸ್ಥ ನಾಗಿರುತ್ತಾನೆ.

ಡೊಳ್ಳು ಹಾಡು ರಚನೆಯಲ್ಲಿ ಹಾಲುಮತ ಪುರಾಣವನ್ನು ಪ್ರಮುಖ ಆಕಾರವನ್ನಾಗಿ ಬಳಸಿಕೊಂಡರೂ ಅದರ ಜೊತೆಗೆ ಶೈವ, ವೀರಶೈವ, ವೈಷ್ಣವ ಮತ ಸಂಬಂಧಿ ಪುರಾಣ ಪುಣ್ಯ ಕಥೆಗಳನ್ನು ಬಳಸಿಕೊಂಡು ಕೃತಿ ರಚಿಸಿ ಹಾಡುವ ಮೂಲಕ ಧಾರ್ಮಿಕ ವಿಶಾಲ ಮನೋಭಾವ ಪ್ರಕಟಿಸಿ ಸರ್ವ ಮತದವರ ಪ್ರೀತಿ ವಿಶ್ವಾಸಗಳಿಗೆ ಪಾತ್ರರಾಗಿರುವುದು ಸಾಹಿತ್ಯ ಸಮಾಜ ದೇಶಕ್ಕೆ ಡೊಳ್ಳಿನ ಹಾಡುಗಳು ವಿಶಿಷ್ಟ ಕೊಡುಗೆಯಾಗಿವೆ.

ಇಷ್ಟಾದರೂ ಹಾಡು ರಚನೆಯ ಮೇಲೆ ವೀರಶೈವ ಸಂಪ್ರದಾಯ ಪ್ರಭಾವ ಬೀರಿರುವುದು ವಿಶೇಷವಾಗಿ ಕಂಡು ಬರುತ್ತದೆ. ಇದಕ್ಕೆ ಎರಡು ಪ್ರಮುಖ ಕಾರಣಗಳನ್ನು ನೀಡಬಹುದು. ಒಂದು ಪಾರ್ವತಿ ಪರಮೇಶ್ವರರಿಂದ ಹಾಲುಮತದ ಉಗಮ ಮತ್ತು ಎರಡು ವೀರಶೈವ ಪಂಚ ಪೀಠಾಧಿಪತಿಗಳಲ್ಲಿ ಪ್ರಮುಖರಾದ ಶ್ರೀ ರೇವಣಸಿದ್ಧೇಶ್ವರರನ್ನು ಗುರುವಾಗಿ ಸ್ವೀಕರಿಸಿದ್ದು. ಈ ಎರಡೂ ಸಂಗತಿಗಳೂ ಹಾಡಿನ ರಚನಾಕಾರರ ಜೊತೆಗೆ ಸಮಗ್ರ ಕುರುಬ

ಜನಾಂಗದ ದೈನಂದಿನ ಆಚಾರ ವಿಚಾರಗಳ ಮೇಲೂ ಪ್ರಭಾವ ಬೀರಿರುವದೊಂದು ವಿಶೇಷ ವಾಗಿದೆ.

ಹಾಡಿನ ಗೋಷ್ಠಿ

ಡೊಳ್ಳು ಹಾಡಿನ ಗೋಷ್ಠಿಗೆ ಮತ್ತೊಂದು ಹೆಸರು "ದಿಮ್ಮು ಇಡು"ವುದು ಎಂದು ಕರೆಯುತ್ತಾರೆ. ಈ ಗೋಷ್ಠಿಗಳು ಮುಖ್ಯವಾಗಿ ಎರಡು ಸಂದರ್ಭಗಳಲ್ಲಿ ನಡೆಯುತ್ತವೆ. ಒಂದು ಕುಲದೇವರ ಉತ್ಸವದ ದಿನ ರಾತ್ರಿ ಎರಡು ದೇವರ ಪಾಲಕಿಯೊಂದಿಗೆ ಪೂಜಾರಿಗಳು ಊರಾಡಲು ತನ್ನ ಭಕ್ತನ ಮನೆಗೆ ಹೋದ ರಾತ್ರಿ ಮೊದಲನೆಯದರಲ್ಲಿ ಆಹ್ವಾನಿತ ಮೇಳಗಳು ಭಾಗವಹಿಸುತ್ತವೆ. ಎರಡನೆಯದರಲ್ಲಿ ಪಾಲಕಿಯೊಂದಿಗಿದದ ಪೂಜಾರಿಗಳು ಭಾಗವಹಿಸುತ್ತಾರೆ. ಅವರಿಗೆ ಮಧ್ಯ ಮಧ್ಯ ಒಂದಿಷ್ಟು ವಿಶ್ರಾಂತಿ ಕೊಡಲು ಆ ಊರಿನ ಮೇಳದವರು ಭಾಗವಹಿಸುತ್ತಾರೆ.

ಉತ್ಸವಗಳಲ್ಲಿ ಭಾಗವಹಿಸುವ ಮೇಳಗಳಿಗೆ ಮುಂಚಿತವಾಗಿ ಆಹ್ವಾನ ನೀಡಬೇಕು. ಈ ಕ್ರಮಕ್ಕೆ ಜನಪದರಲ್ಲಿ "ಬಟ್ಟು ಕೊಡು"ವುದು ಎನ್ನುತ್ತಾರೆ. ಖ್ಯಾತ ಹಾಡುಗರ ಮೇಳ ಗಳನ್ನು ಆಮಂತ್ರಿಸುವ ಪರಿಪಾಠ ಈಗಲೂ ಹಳ್ಳಿಗಳಲ್ಲಿ ನಡೆದುಕೊಂಡು ಬಂದಿರುವ ಸಂಪ್ರದಾಯವಾಗಿದೆ. ಕಲಾಪ್ರದರ್ಶನಕ್ಕೆ ಕೆಲವು ದಿನ ಮೊದಲು ಮೇಳದ ಮುಖಂಡನಿಗೆ ಭಂಡಾರ ಪಟ್ಟಿ ವೀಳ್ಯದೆಲೆಯೊಂದಿಗೆ ಎರಡು ಅರಿಷಿಣ ಕೊಂಬನ್ನು ಕೊಟ್ಟು ಹಾಡು ಹೇಳುವುದಕ್ಕೆ ಭಿನ್ನವಿಸಿಕೊಳ್ಳಲಾಗುತ್ತದೆ. ಭಿನ್ನಹ ಮನ್ನಿಸುವ ಸಂಕೇತವಾಗಿ ಮೇಳದ ಮುಖಂಡ ಭಂಡಾರ ಹಿಡಿಯುತ್ತಾನೆ. ಒಮ್ಮೆ ಭಂಡಾರ ಹಿಡಿದ ಮೇಲೆ ತಪ್ಪಿಸುವಂತಿಲ್ಲ. ಮೊದಲು ಯಾವ ಪ್ರತಿಫಲಾಪೇಕ್ಷೆಯೂ ಇಲ್ಲದೆ ಆಹ್ವಾನಿಸಿದವರ ಊರಿಗೆ ಹೋಗಿ ಹಾಡಿ ಬರುತ್ತಿದ್ದರು. ಇತ್ತೀಚಿನ ದಿನಗಳಲ್ಲಿ ಸಂಭಾವನೆಯನ್ನು ಮೊದಲೆ ಗೊತ್ತುಪಡಿಸುತ್ತಿದ್ದಾರೆ.

ಹಾಡುಗಾರಿಕೆ ಪ್ರದರ್ಶನವನ್ನು ರಾತ್ರಿ ಊಟವಾದ ನಂತರ ಏರ್ಪಡಿಸಲಾಗುತ್ತದೆ. ಪ್ರದರ್ಶನ ಸಮಯದಲ್ಲಿ ಮೇಳಗಳು ಒಂದಕ್ಕಿಂತ ಹೆಚ್ಚಿದ್ದರೆ ಆಮಂತ್ರಿಸಿದವರ ನಿರ್ದೇಶನದಂತೆ ಸರದಿ ಪ್ರಕಾರ ಹಾಡಬೇಕಾಗುತ್ತದೆ. ಹಾಡುವಾಗ ಮುಮ್ಮೇಳ, ಹಿಮ್ಮೇಳ ಮಾಡಿಕೊಂಡು ಹಾಡುವುದು ವಾಡಿಕೆ. ಮುಮ್ಮೇಳದಲ್ಲಿ ಇಬ್ಬರು ಹಾಗೂ ಹಿಮ್ಮೇಳದಲ್ಲಿ ಇಬ್ಬರಿಗಿಂತ ಹೆಚ್ಚು ಇರಬಹುದು. ಹಿಂದಿನ ಕಾಲದಲ್ಲಿ ಮುಮ್ಮೇಳ ಹಿಮ್ಮೇಳದವರಿಬ್ಬರೂ ಕುಳಿತು ಹಾಡುತ್ತಿದ್ದರು. ಆದರೆ ಡೊಳ್ಳಿನ ಹವ್ಯಾಸ ಹೆಚ್ಚುತ್ತಿರುವ ಇಂದಿನ ದಿನಗಳಲ್ಲಿ ಮುಮ್ಮೇಳದವರು ನಿಂತು ಹಾಡುತ್ತಾರೆ. ಹಿಮ್ಮೇಳದವರು ಕುಳಿತು ಹಾಡುತ್ತಿದ್ದಾರೆ. ಅವರು ಕಲಾಪ್ರದರ್ಶನಕ್ಕೆ ಬೇಕಾದ ವಾದ್ಯ ಪರಿಕರಗಳನ್ನು ಹೊಂದಿರುತ್ತಾರೆ. ಹಿಮ್ಮೇಳದವರು ವಾದ್ಯಗಳನ್ನು ಹಿಡಿದಿರುತ್ತಾರೆ. ಡೊಳ್ಳು ಈ ಮೇಳದ ಪ್ರಮುಖ ವಾದ್ಯ. ಇದರ ಸಂಗಡ ತಾಳ ಇರುತ್ತದೆ. ಕೊಳಲು ಇರಬಹುದು. ಇರಲಿಕ್ಕಿಲ್ಲ. ಆಧುನಿಕ ಹಾಡುಗರು ಮನರಂಜನೆಗೆ ಕಾಲುಪೇಟೆ, ಟೋಕರಾ, ತಬಲಾದಂತಹ ವಾದ್ಯಗಳನ್ನು ಬಳಸುತ್ತಿದ್ದಾರೆ.

ಮುಮ್ಮೇಳದವರು ಹಾಡನ್ನು ಪ್ರಾರಂಭಿಸುವ ಮುನ್ನ ಹಿಮ್ಮೇಳದ ಕಲಾವಿದರು

ದುಮ್ ತಂಗ ತಂಗ ತಂಗ... ದುಮ್ ತಂಗ ತಂಗ ತಂಗ

ದುಮ್ ತಂಗ ತಂಗ ತಂಗ... ದುಮ್ ದುಮ್ ತಂಗ ಎಂದು ಬಾರಿಸಿದರೆ

ಅದಕ್ಕೆ ತಾಳಿನವ ಸಾಥಿ ಕೊಡುತ್ತಾನೆ. ಮೊದಲು ಮಂದಗತಿಯಲ್ಲಿ ಸಾಗಿದ ತಾಳ ಬರಬರುತ್ತಾ ಅವಸರದಲ್ಲಿ ಡೊಳ್ಳು ನುಡಿಸುವುದಕ್ಕೆ ತಕ್ಕಂತೆ ಸಹ ಕಲಾವಿದರು ಚೆಪ್ಪಾಳೆ, ಕೋಲು ಬಾರಿಸುತ್ತಾರೆ. ಅವಸರದ ಗತಿಯಲ್ಲೇ ಒಂದು ಸುತ್ತು ಬಾರಿಸಿ ತರುವಾಯ ಹಿಮ್ಮೇಳ ವಾದ್ಯ ತಾಳದ ಸಾಮಾನ್ಯ ನಡಿಗೆ ಬರುತ್ತದೆ. ನಿದಾನಕ್ಕಿಳಿಸಿದಾಗ ಈ ಹಂತದಲ್ಲಿ ಮುಮ್ಮೇಳದವರು ಹೇ ಗುರುವೇ ನಮ್ಮಯ್ ದೇವರ್ ಬಂದಾವ್ ಬನ್ನಿರೇ ಎಂದು ಪ್ರಾರಂಭಿಸುತ್ತಾರೆ. ಈ ಪಲ್ಲವಿಯನ್ನು ಹಿಮ್ಮೇಳದವರೂ ಮುಮ್ಮೇಳದವರೊಂದಿಗೆ ಸಣ್ಣಗೆ ಅನ್ನುತ್ತಿರುತ್ತಾರೆ. ಈ ಪಲ್ಲವಿಯನ್ನು ಹಾಡುವಾಗ ಮೇಳದವರಲ್ಲ ಡೊಳ್ಳು ಮುಟ್ಟಿ ನಮಸ್ಕರಿಸುತ್ತಾರೆ.

ಮುಮ್ಮೇಳ ಹಾಡಿದ ಚರಣವನ್ನು ಹಿಮ್ಮೇಳ ಪುನರುಕ್ತಿಗೊಳಿಸುವಾಗ ಮುಮ್ಮೇಳ ಮೌನವಾಗಿರುತ್ತದೆ. ಹಿಮ್ಮೇಳ ಹಾಡಿನ ಚರಣ ಹಾಡಿ ಮುಗಿಸುತ್ತಿದ್ದಂತೆಯೇ ಮುಮ್ಮೇಳ ಮುಂದಿನ ಚರಣಗಳನ್ನು ಹಾಡಲು ಪ್ರಾರಂಭಿಸುತ್ತದೆ. ಕೆಲವು ಹಾಡುಗಳು ಮುಂದುವರಿದಂತೆ ಪಲ್ಲವಿಯನ್ನು ಪುನರಾವರ್ತನೆಗೊಳಿಸುವುದಿಲ್ಲ. ಇನ್ನು ಕೆಲವು ಹಾಡುಗಳನ್ನು ಹಾಡುವಾಗ ಹಿಮ್ಮೇಳದವರು ಮುಮ್ಮೇಳದವರ ಎಲ್ಲ ಚರಣಗಳನ್ನು ಪುನರುಚ್ಚರಿಸದೆ ನಡಿಗೊಂದಾವರ್ತಿ ಪಲ್ಲವಿಯನ್ನೇ ಅನ್ನುತ್ತ ಹೋಗುತ್ತಾರೆ. ಮುಮ್ಮೇಳದವರು ಹಾಡುವಾಗ ಸೌಮ್ಯವಾಗಿರುವ ವಾದ್ಯ ಪರಿಕರಗಳು ಹಿಮ್ಮೇಳದವರು ಹಾಡುವಾಗ ರಭಸಗೊಳ್ಳುತ್ತವೇ ಹಿಮ್ಮೇಳದಿಂದ ಮೇಳಕ್ಕೆ ರಂಗೇರಿದಾಗ ಮೇಳದಲ್ಲಿಯೇ ಇರುವ ಒಬ್ಬ ಹೌದ ಎಂದು ಸಿಳ್ಳೆ ಹಾಕಿ ವಾತವರಣ ದಲ್ಲಿ ಮತ್ತಷ್ಟು ಚೈತನ್ಯ ತುಂಬುತ್ತಾನೆ. ಎಲ್ಲ ಮೇಳದವರು ಪ್ರಾರಂಭದಲ್ಲಿ ಸ್ತುತಿ ಪದ್ಯ ಹಾಡುತ್ತಾರೆ. ಅದು ಮುಗಿದ ನಂತರ ಮುಖ್ಯ ಹಾಡೊಂದನ್ನೆತ್ತಿಕೊಳ್ಳುತ್ತಾರೆ. ಹಾಡು ಹಾಲುಮತಕ ಮೇಲೊಂದ ಗಿರಿಯೋ... ಅಂದು ಮುಗಿಸಿದ ಮೇಲೆ ಮುಮ್ಮೇಳ ಹಿಮ್ಮೇಳದವರು ಹಾಡುವುದನ್ನು ನಿಲ್ಲಿಸುತ್ತಾರೆ. ಆದರೆ ವಾದ್ಯ ಬಾರಿಸುವುದನ್ನು ನಿಲ್ಲಿಸುವುದಿಲ್ಲ. ಹಾಡುವುದನ್ನು ನಿಲ್ಲಿಸಿದ ನಂತರ ವಾದ್ಯದವರು ಅವಸರದಲ್ಲಿ ಒಂದು ಸುತ್ತು ಬಾರಿಸಿ ಕೊನೆಗೆ ತಾಳದಲ್ಲಿ ಮುಕ್ತಾಯ ಹಾಕಿ ತಟ್ಟನೆ ನಿಲ್ಲಿಸುತ್ತಾರೆ. ತರುವಾಯ ಡೊಳ್ಳು ಮುಟ್ಟಿ ನಮಸ್ಕರಿಸಿ ಬಿಡುಗಡೆಯ ವಿಶ್ರಾಂತಿ ಪಡೆಯುತ್ತಾರೆ. ಮೇಳದವರು ಹಾಡುತ್ತಿರುವಂತೆ ಪೂಜಾರಿಗಳು ಆಗಾಗ್ಗೆ ಬಂದು ಹಾಡುಗರ ಹಣೆ, ಗಲ್ಲಗಳಿಗೆ ಭಂಡಾರ ಹಚ್ಚುತ್ತಾರೆ. ಹಾಗೆಯೇ ಮೇಳದ ಮೇಲೆ ಭಂಡಾರ ತೂರಲಾಗುತ್ತದೆ. ಈ ಮೇಳಗಳು ಇಡೀ ರಾತ್ರಿ ನಡೆಯುತ್ತವೆ.

ಪಲ್ಲಕ್ಕಿಯೊಂದಿಗೆ ಊರಾಡಲು ಬರುವ ಪೂಜಾರಿಗಳು ಭಕ್ತರ ಮನೆಯ ಅಂಗಳದಲ್ಲಿ ರಾತ್ರಿ ನಡೆಸುವ ಗೋಷ್ಠಿ ಇದಕ್ಕಿಂತ ಭಿನ್ನವಾಗಿರುವುದಿಲ್ಲ. ಆದರೆ ಪೂಜಾರಿಗಳು ಮರುದಿನ ಮುಂದಿನ ಊರಿಗೆ ಪಲ್ಲಕ್ಕಿ ಹೊತ್ತು ಹೋಗಬೇಕಾಗಿರುವುದರಿಂದ ಮಧ್ಯರಾತ್ರಿ ಮುಗಿ ಯುತ್ತಲೆ ಮಂಗಳ ಹಾಡುತ್ತಾರೆ.

ಭಾಷೆ

ಬೆಳಗಾವಿ ಜಿಲ್ಲೆಯ ಮಹಾರಾಷ್ಟ್ರದ ಗಡಿಭಾಗವಾದ್ದರಿಂದ ಮರಾಠಿ ಮತ್ತು ಕನ್ನಡ ಎರಡೂ ಭಾಷೆಗಳನ್ನು ಮಾತನಾಡುತ್ತಾರೆ. ಕನ್ನಡ ಮಾತನಾಡುವಾಗ ಮರಾಠಿ ಪದಗಳನ್ನು ಬಳಸುತ್ತಾರೆ. ಕುರಿ ಸಂಗೋಪಾನೆಯಲ್ಲಿ ಕುರಿ ಮೇಕೆಗಳಿಗೆ ತಮ್ಮದೇ ಆದ ಭಾಷೆ ಬಳಸುತ್ತಾರೆ.

**ಕುರಿ-ಮೇಕೆಗಳ ಹೆಸರುಗಳು :** ಅಲೆಮಾರಿ ಕುರುಬರು ನೂರಾರು ಸಂಖ್ಯೆಯಲ್ಲಿ ಕುರಿ-ಮೇಕೆಗಳನ್ನು ಸಾಕಣೆಮಾಡುತ್ತಿದ್ದಾರೆ. ಅವುಗಳನ್ನು ಸ್ವಲ್ಪ ಅಂತರದಿಂದ ನೋಡಿದಾಗ ಎಲ್ಲ ಕುರಿ-ಮೇಕೆಗಳು ಒಂದೇ ರೀತಿಯಾಗಿ ಗೋಚರಿಸುತ್ತವೆ. ಆದರೆ ಅವುಗಳನ್ನು ಹತ್ತಿರದಿಂದ ಸೂಕ್ಷ್ಮವಾಗಿ ನೋಡಿದಾಗ ಪ್ರತಿಯೊಂದು ಕುರಿ-ಮೇಕೆಗಳ ಕಾಲು, ಅಥವಾ ಕಿವಿ, ಕೊಂಬು, ಬಾಯಿ, ಮೂಗು, ತಲೆ, ಬಾಲ, ಬೆನ್ನು, ಹೊಟ್ಟೆ, ಹಾಗೂ ಅವುಗಳ ಮೇಲಿರುವ ಬಣ್ಣ ಇತ್ಯಾದಿ ಅಂಶಗಳಲ್ಲಿ ಭಿನ್ನತೆ ಇರುವುದು ಗೋಚರಿಸುತ್ತವೆ. ಈ ತರಹದ ಭಿನ್ನತೆಗಳನ್ನು ಆಧಾರವಾಗಿಟ್ಟುಕೊಂಡು, ತಮ್ಮ ಪ್ರತಿಯೊಂದು ಕುರಿ-ಮೇಕೆಗೂ ಒಂದೊಂದು ಹೆಸರಿಟ್ಟಿರುತ್ತಾರೆ. ಆ ಹೆಸರುಗಳ ಮೂಲಕವೇ ಗುರುತಿಸಿ ಕರೆಯುತ್ತಾರೆ. ಉದಾಹರಣೆಯಾಗಿ ಕೆಲವೊಂದು ಕುರಿಗಳ ಶರೀರದಲ್ಲಿಯ ಭಿನ್ನತೆ ಮತ್ತು ಆ ಕುರಿಗಳಿಗೆ ಅಲೆಮಾರಿ ಕುರುಬರು ಇಟ್ಟಿರುವ ಹೆಸರುಗಳನ್ನು ಈ ಕೆಳಗೆ ನೀಡಲಾಗಿದೆ.

| ಶರೀರದಲ್ಲಿಯ ಭಿನ್ನತೆಯ ಅಂಶಗಳು | ಕುರಿಗಳ ಹೆಸರು |
| --- | --- |
| ಕಿವಿಗಳು ಉದ್ದವಾಗಿದ್ದರೆ | ಕಡ್ಡಕುರಿ |
| ಕಿವಿಗಳು ಚಿಕ್ಕವಾಗಿದ್ದರೆ | ಕರೆಬಸರ ಕುರಿ |
| ಹೊಟ್ಟೆಕೆಳಗೆ ಕೆಂಪು ಬಣ್ಣ ಇದ್ದರೆ | ಮುಸುಕು ಕುರಿ |
| ದೇಹಕ್ಕೆ ಮತ್ತು ಮುಖಕ್ಕೆ ಕತ್ತೆ ಬಣ್ಣ ಇದ್ದರೆ | ಶ್ಯಾಂಬ್ರ ಕುರಿ |
| ದೇಹದ ಮೇಲಿನ ಬಣ್ಣ ಅರ್ಧ ಕಪ್ಪು- ಮತ್ತು ಅರ್ಧ ಬಿಳಿಯದಾಗಿದ್ದರೆ | ಯಾಂಡ್‌ಕುರಿ |
| ಬಾಲ ಬಿಳಿಯದಾಗಿದ್ದರೆ | ಬಲ್ ಕುರಿ |
| ನಾಲ್ಕು ಕಾಲು ಮತ್ತು ಬಾಲ ಬಿಳಿಯದಾಗಿದ್ದರೆ | ಪಂಚಗಾಲ ಕುರಿ |
| ಕಿವಿಗಳು ಬಹಳ ಚಿಕ್ಕವಾಗಿದ್ದರೆ | ಗುನ್‌ಕುರಿ |
| ಕಿವಿಗಳು ಚೂಪಾಗಿದ್ದರೆ | ಸೂಜಿಗುನ್ ಕುರಿ |
| ದೇಹ ಬೂದು ಬಣ್ಣದ್ದಾಗಿದ್ದರೆ | ಎಳಗ್ ಕುರಿ |
| ಹಿಂದಿನ ಎರಡು ಕಾಲುಗಳು ಬಿಳಿ ಬಣ್ಣದವುಗಳಾಗದ್ದರೆ | ಬಿಳಿಕಲ್‌ಕುರಿ |
| ತಲೆಯ ಮೇಲೆ ಬಿಳಿಯ ಬಣ್ಣವಿದ್ದರೆ | ಅಣಚಿಕ್ (ಉಂಡ) ಕುರಿ |
| ಮೈಯಲ್ಲಿ ಬಿಳಿ ಕಪ್ಪು ಕೆಂಪು, ಬೂದು - | |

| | |
|---|---|
| ಬಣ್ಣ ಇದ್ದರೆ | ಚಿತ್ರಬಂಡೆ ಕುರಿ |
| ಹೊಟ್ಟೆ ಕೆಳಗೆ ಮತ್ತು ಕಾಲುಗಳಲ್ಲಿ ಬಿಳಿ - | |
| ಬಣ್ಣ ಇದ್ದರೆ | ಜಾಲಕುರಿ |
| ಶರೀರವೆಲ್ಲ ಬಿಳಿಯ ಬಣ್ಣ ಇದ್ದರೆ | ಬಿಳಿಕುರಿ |
| ಶರೀರವೆಲ್ಲ ಕೆಂಪು ಬಣ್ಣ ಇದ್ದರೆ | ಕೆಂಗುರಿ |
| ಶರೀರವೆಲ್ಲ ಕಪ್ಪು ಬಣ್ಣ ಇದ್ದರೆ | ಕರೆ ಕುರಿ |
| ಮುಖದ ಮೇಲೆ ಮಚ್ಚೆಗಳಿದ್ದರೆ | ಮಚ್ಚೆಕುರಿ ಇತ್ಯಾದಿ. |

ಮೇಲಿನ ಹೆಸರುಗಳನ್ನು ಅಲೆಮಾರಿ ಕುರುಬರು ತಮ್ಮ ಕುರಿ-ಮೇಕೆಗಳಿಗೆ ಮೇವು ಮೇಯುಸುವಾಗ ಹಾಲುಣಿಸುವಾಗ ಹಾಲಿಂಡುವಾಗ, ಔಷಧ ಹಾಕುವಾಗ, ಉಣ್ಣೆ ಕತ್ತರಿಸುವಾಗ ಪ್ರಸೂತಿಕಾರ್ಯ ಇತ್ಯಾದಿ ಎಲ್ಲ ಪ್ರಸಂಗಗಳಲ್ಲೂ ಹೆಸರಿಟ್ಟು ಕರೆಯುವುದು ಕಂಡುಬರುತ್ತದೆ.

**ಕುರಿಗಳಿಗೆ ಬಳಸುವ ಭಾಷೆ**

ಮೇವು ಮೇಯಿಸಲು ಅಡವಿಗೆ ಹೋದಾಗ ಹಾಗೂ ಕುರಿಮರಿ ಪೋಷಣೆ ಸಮಯದಲ್ಲಿ ಅಲೆಮಾರಿ ಕುರುಬರು ತಮ್ಮ ಬದುಕುಗಳ ಚಲನೆ-ವಲನೆಯನ್ನು ನಿಯಂತ್ರಿಸಲು, ನಿರ್ದೇಶಿಸಲು ಅಥವಾ ತಮ್ಮ ಕಡೆ ಒಲಿಸಿಕೊಳ್ಳಲು ತಮ್ಮದೇ ಆದ ಭಾಷೆಯನ್ನು ಬಳಸುತ್ತಾರೆ. ಆ ಭಾಷೆಯ ಮೂಲಕವೇ ಅವರ ಬದುಕುಗಳು ತಮ್ಮ ವರ್ತನೆಯನ್ನು ಬದಲಾಯಿಸಿಕೊಂಡು ಕುರಿಗಾಯಿಗೆ ಸ್ಪಂದಿಸುತ್ತವೆ. ಅಂತಹ ಭಾಷೆಯನ್ನು ಈ ಕೆಳಗಿನಂತೆ ಪಟ್ಟಿ ಮಾಡಲಾಗಿದೆ.

| | |
|---|---|
| "ಕುರಿಗಳನ್ನು ನಿಲ್ಲುಸುವಿಕೆ | ಹ್ಯಾಹಾ ಪ್ಪಪ ಹ್ಯಾಹಾ ಪ್ಪಪ... |
| ಕುರಿಗಳನ್ನು ಮುಂದಕ್ಕೆ ಹೊಡೆಯುವುದು | ಸ್ಯೂ... ಸ್ಯೂ... ಸ್ಯೂ.... |
| ಕುರಿಗಳನ್ನು ತಮ್ಮತ್ತ ಕರೆಯುವುದು | ಅಯ್... ಅಯ್.... ಅಯ್... |
| ಮರಿಗೆ ಹಾಲುಣಿಸಲು ಕುರಿಯನ್ನು ಕರೆಯುವುದು | ತ್ಟ್ರುಹಃ... ತ್ಟ್ರುಹಃ... ತ್ಟ್ರುಹಃ... |
| ಮರಿಗೆ ಹಾಲುಣಿಸುವ ಮೇಕೆಯನ್ನು ಕರೆಯುವುದು | ಚೆಯ್ಚಿ... ಚೆಯ್ಚಿ... ಚೆಯ್ಚಿ... |
| ಗುಂಪಾದ ಕುರಿಗಳನ್ನು ಅಗಲಿಸುವುದು | ಟರ್ರ್ಃ... ಟರ್ರ್ಃ.... ಟರ್ರ್ಃ... |
| ಕುರಿಗಳನ್ನು ಹಿಂದಕ್ಕೆ ಅಥವಾ | ಅಯ್... ಆ್ಹ.. ಆ್ಹ..., |
| ಮುಂದಕ್ಕೆ ಕರೆಯುವುದು | ಅಯ್... ಆ್ಹ.. ಆ್ಹ.. |
| ಕುರಿ ತಪ್ಪಿಸಿಕೊಂಡಾಗ ಅಥವಾ ಕಣ್ಣಿಗೆ | |
| ಕಾಣದೇ ಇದ್ದಾಗ | ಕುರ್ಹೋ, ಕುರ್ಹೋ, ಕುರ್ಹೋ... |
| ಕುದುರೆಗಳನ್ನು ಕರೆಯುವುದು | ಭ್ಹಾ... ಭ್ಹಾ... ಭ್ಹಾ... |
| ಕುದುರೆಗಳನ್ನು ಮುಂದಕ್ಕೆ ಹೊಡೆಯುವುದು | ಹಟ್.... ಹಟ್... ಹಟ್..." |

(ಮಾಹಿತಿದಾರ: ವಾಸು ಪೂಜಾರಿ:ಕಡಕಲಾಟ)

| | | | |
|---|---|---|---|
| **ಶರೀರದ ಅಂಗಗಳು** | | | |
| ಕಾಲ್ಬೆರಳು | ಪಾಯಚಿಬೊಟೆ | ಕೈಬೆರಳು | ಹಾತಬೊಟ |
| ಹೆಬ್ಬೆರಳು | ಅಂಗಟ | ತುಟಿ | ಸೊಂಡಿ |
| ಹಿಮ್ಮಡಿ | ಹಿಮ್ನ | ಭುಜ | ಹೆಗಲು |
| ಕಿರುಬೆರಳು | ಕಿರುಬಳ್ಳು | ಕಂಕಳು | ಕೊಕ್ಕಳ |
| ಮುಷ್ಟಿ | ಬಲಿ | ರೋಮ | ಕೂದಲು |
| ಜುಟ್ಟು | ಶೆಂಡಿಕೆ | ಮೆದಳು | ಮಿದುಡು |
| ಉಗುರು | ಉಂಗರು | ಶಿರ | ಗೋಣು |
| ರೆಪ್ಪೆ | ಉಬ್ಬು | ರೋಗಿ | ರೋಗದವ |
| **ರೋಗಗಳು ಮತ್ತು ದೇಹದ ಸ್ಥಿತಿಗಳು** | | | |
| ಅಜೀರ್ಣ | ಪಚನ | ಕುರುಡ | ಕುಡ್ |
| ವಾಂತಿ | ಕಾರುವುದು | ಕಾಮಾಲೆ | ಕಾಮಣಿ |
| ತುರಿ | ಗವಾಡಿಸುತ್ತದೆ | ಗಂಟಲುಕೆರೆತ | ಗಂಟಲುಗರಸುತ |
| ತಲೆಸುತ್ತುವುದು | ಚಕ್ರಬರುವುದು | ಬೊಜ್ಜುಮ್ಮೆ | ಬಾತಗ |
| ಸೀನುವುದು | ಸೀನದ | ಚಳಿಜ್ವರ | ತಂಡಿಉರಿ |
| ಚಳಿ | ತಂಡಿ | ಹೊಟ್ಟೆನೋವು | ಹೊಟ್ಟೆಮುರುತ |
| ನಿದ್ರೆ | ನಿದ್ದೆ | ಬಿಳಿಸೆರಗು | ಬಿಳುಪು |
| ಬಾಯರಿಕೆ | ಬಾಯಿ ಒಣಗಿದೆ | ಮೊಡವೆ | ಮೊಡೆಗುಳ್ಳಿ |
| ಮಚ್ಚೆ | ಮತೀ | ಮೂತ್ರ | ಉಚ್ಚೆ |
| ಕುಂಟ | ಸೊಟ್ಟ | ಶೀತಜ್ವರ | ತಂಡಿಉರಿ |
| ಊತ | ಬಾತತೇ | ಧ್ವನಿ | ಅವಾಜ್ |
| **ವೇಷಭೂಷಣ, ಆಭರಣ** | | | |
| ಕುಪ್ಪಸ | ಜಂಪರ | ಬಟ್ಟೆ | ಅರವಿ |
| ಕಂಬಳಿ | ಗೊಂಗಡಿ | ಪ್ಯಾಂಟು | ಇಜರ |
| ಲಂಗ | ಪಲ್ಕರು | ಕಾಲುಚೀಲ | ಪಾಯಿಮಾಚ್ |
| ಒಳಗಿನ ಚಡ್ಡಿ | ಚಡ್ಡಿ | ಜೇಬು | ಕೀಸೆ |
| ಟೋಪಿ | ಟೋಬಕಿ | ಕರವಸ್ತ್ರ | ರೂಮಾಲು |
| ಪೇಟಾ | ಪಟಗಾ | ಕಡಗ | ಹತರಿ |
| ಕಿವಿವೋಲೆ | ಕಿವಿ ಹೂವು | ಡಾಬು | ನಡುವಿನಪಟ್ಟಿ |
| ಕಾಲ್ಕಡಗ | ವಾಳೆತುಡಿ | ಬಸಿನು | ಮುಂಡಾ |

**ಧಾನ್ಯಗಳು ಮತ್ತು ಖಾದ್ಯಪದಾರ್ಥಗಳು**

| | | | |
|---|---|---|---|
| ಅನ್ನ | ಬಾನ, ಕಿಚಡಿ | ಉಪಹಾರ | ನಾಷ್ಟ |
| ಅವಲಕ್ಕಿ | ಪಾವೇ | ಸಾರು | ಒನಗೆ |
| ತರಕಾರಿ | ಕಾಯಿಪಲ್ಲೆ | ಹಾಲು | ಹಾಲ |
| ರೊಟ್ಟಿಯ ತುಂಡು | ರೊಟ್ಟಿತುಂಡಕ | ಹಾಲೊಡಕು | ಹಾಲಗುನ್ನ |
| ಮಾಂಸ | ಖಂಡ | ದನದಮಾಂಸ | ದನದಖಂಡ |
| ಕುರಿಮಾಂಸ | ಕುರಿಖಂಡ | ಹಂದಿಮಾಂಸ | ಹಂದಿಖಂಡ |
| ಸಿಹಿತಿಂಡಿ | ಜಲ್ಲ, ಅಡಿಗೆ | ಒಗ್ಗರಣೆ ಅನ್ನ | ಅಕ್ಕಿ ಉಪ್ಪಿಟ್ಟು |
| ಹುರುಳಿಕಾಯಿ | ಹುರುಳಿ | ಪಲ್ಯ | ಎಸುಳೆ |

**ಬಾಂಧವ್ಯ**

| | | | |
|---|---|---|---|
| ತಂದೆ | ಬಾಬ, ಅಪ್ಪ | ತಾಯಿ | ಅಮ್ಮ |
| ಚಿಕ್ಕಪ್ಪ | ತಾತ್ಯ, ಸಣ್ಣಪ್ಪ | ಚಿಕ್ಕಮ್ಮ | ಕಾಕಿ |
| ಮಾವ | ಮಾವ | ಶಿಷ್ಯ | ಪಾಸಾರಿ |
| ಅತ್ತೆ | ಮಾಮಿ | ಸಂಬಂಧಿಕ | ಪಾವಣೇರು |
| ತಾತ | ಅಜ್ಜ | ಅಜ್ಜಿ | ಆಯಿ |
| ಮಿತ್ರ | ಗೆಳೆಯ | ಭಾವಮೈದುನ | ಮೇವನಾ |
| ಸೊಸೆ | ಮೇವನೀ | ಸೋದರ | ತಮ್ಮ, ಅಣ್ಣ |

**ತರಕಾರಿ ಮತ್ತು ಹಣ್ಣುಗಳು**

| | | | |
|---|---|---|---|
| ತೆಂಗಿನಕಾಯಿ | ಕಾಯಿ | ವೀಳ್ಯದೆಲೆ | ಎಲೆ |
| ಸೊಪ್ಪು | ಪಲ್ಲೆ | ಈರುಳ್ಳಿ | ಉಳಗಡ್ಡಿ |
| ನೆಲಗಡಲೆಕಾಯಿ | ಬೊಮ್ಮಕಾಯಿ | ಮೂಸಂಬಿ | ಸಂತ್ರೆ |
| ಗೆಣಸು | ಗೆಣಸಿನಕಾಯಿ | ಹತ್ತಿ | ಅಳ್ಳಿ |
| ಸಬ್ಬಕ್ಕಿ | ಸ್ಯಾಬು | ಸೇಬು | ಸಪ್ಪರಚಂದ |

**ಕಟ್ಟಡ ಮತ್ತು ಅದರ ಭಾಗಗಳು**

| | | | |
|---|---|---|---|
| ಆಸ್ಪತ್ರೆ | ದವಖಾನೆ | ಕಟ್ಟಡ | ಗೋಡೆ |
| ಕೋಣೆ | ಕೋಲೆ | ಗುಡಿಸಲು | ಕೊಪ್ಪಿ |
| ಹೆಂಚು | ಕಾಪಿರಿ | ಕಣಜ | ಆಗೇ |
| ದೇವಸ್ಥಾನ | ಗುಡಿ | ಮೆಟ್ಟಿಲು | ಪೈರಿ |
| ಸಿಮೆಂಟ್ | ಗಾರೆ | ಸ್ಥಂಭ | ಕಂಬ |
| ಕಬ್ಬಿಣ | ಲೊಕಂಡಿ | ಸೌದೆ | ಕಟ್ಟಿಗೆ, ಉರಲು |

**ಸಾಮಾನ್ಯ ಪದಗಳು**

| | | | |
|---|---|---|---|
| ರೊಟ್ಟಿ | ಬಾಕರಿ | ದಪ್ಪರವೆ | ಮಟ್ಟಿಕವಾ |
| ಪ್ರೂರ | ಕಪ್ಪುರ | ನೆಲ್ಲಿಕಾಯಿ | ಅವಳೇಕಾಯಿ |
| ಕರಿಜೀರಿಗೆ | ಜೀರಿಗೆ | ಕೇಸರಿ | ಪವಳಾ |
| ಗಸಗಸೆ | ಕಸಕಸ | ಅರಿಶಿಣ | ಭಂಡಾರ |
| ಗರಗಸ | ಕರವತ್ | ಕತ್ತರಿ | ಕತ್ರಿ |
| ರೊಟ್ಟಿಡಬ್ಬಿ, | ಬೋಗಾಣಿ | ಸೌಟು | ಪಳಗಿ |
| ಬಾಚಣಿಕೆ | ಹನಿಗಿ, ಕಂಗ್ಗ | ಬುದ್ಧಿವಂತ | ಶ್ಯಾಣತ |
| ದುಪ್ಪಟಿ | ದುಬಟಿ | ಬೀಗದಕ್ಕೈ | ಬಾವಿ |
| ಕೋಲು | ಬಡಿಗಿ | ಕೊಡೆ | ಛತ್ರಿ |
| ಪರಕೆ | ಹುಡುಗೋಲು | ಉಯ್ಯಾಲೆ | ಜೋಕಾಲಿ |
| ಬುಟ್ಟಿ | ಬುಟ್ಟಿ | ದಿಂಬು | ಊಸಾಪಿ |
| ಮಂಚ | ಪಲ್ಲಂಗ | ಬಟ್ಟಲು | ಡಬರಿ |
| ಎಣ್ಣೆಗಿರಿಣಿ | ಎಣ್ಣೆಗಾಣ | ಅಳತೆಸಾಧನ | ಮಾಪಮಾಡುವುದು |
| ಕುಡುಗೋಲು | ಕುರಿಸಿ | ಚೂರಿ | ಚಾಕು |
| ಸುತ್ತಿಗೆ | ಹತೋಡಿ | ನೇಗಿಲು | ರಂಟೆ |
| ಬೀಗ | ಕೀಲಿ | ತಟ್ಟೆ | ತಾಟಿ |
| ಕನ್ನಡಿ | ಕಂದಾಳ | ಹಲ್ಲುಕಡ್ಡಿ | ಹಲ್ಲುಕಡಿ |
| ನಲಿ | ಬಾವಿ | ಗಡಿಗೆ | ಚಟಗಿ |
| ಬಕೆಟ್ | ಬಾರಡೇ | ಕಡೆಗೋಲು | ರವಿಗಿ |
| ಮೋಂಬತ್ತಿ | ಮೇಣಬತ್ತಿ | ಪಾತ್ರೆ | ತಾಟಿ |
| ದೀಪ | ಚಿಮಣಿ, ಪಣತಿ | ಅಡಿಕೆ ಕತ್ತರಿ | ಅಡತೊಕ್ಕು |
| ಶೀಸೆ | ಬಾಟಲಿ | ಯುದ್ಧ | ಲಡಾಯಿ |
| ಒಪ್ಪಂದ | ರಾಜೀ | ಕಟುಕ | ಕಟುಗ |
| ರೈತ | ಶೇತಕರಿ | ದಂತವೈದ್ಯ | ಹಲ್ಲಿನ ಡಾಕ್ಟರ್ |
| ಅಂಗಡಿದಾರ | ದುಖಿನದಾರ | ನೃತ್ಯಗಾರ | ಕುಣಿಯುವವ |
| ಪುರೋಹಿತ | ಭಟ್ಟರು | ಬಟ್ಟೆ ವ್ಯಾಪಾರಿ | ಅರಿವೆ ವ್ಯಾಪಾರಿ |
| ಅಡಿಗೆಯವನು | ಅಚ್ಚೇರಿ | ಬಸ್ ನಿರ್ವಾಹಕ | ಕಂಡಕ್ಟರ್ |
| ಬೆಸ್ತ | ಕೋಳೇರು | ಮಾಲೀಕ | ಮಾಲಕ |
| ಕಮ್ಮಾರ | ಕಂಬಾರ | ಅಧ್ಯಾಪಕ | ಮಾಸ್ತರ |
| ಅಕ್ಕಸಾಲಿಗ | ಸತ್ತಾರ | ಕ್ಷೌರಿಕ | ನಾಲಗೇರು |

| | | | |
|---|---|---|---|
| ಜೇಬು ಪುಸ್ತಕ | ಪಾಕೇಟ | ಮೇಜು | ಟೆಬಲ್ |
| ಆಮಂತ್ರಣ | ಕರೆಯೊಲೆ ಪತ್ರ | ರಬ್ಬರ್ | ಕೊಡ್ನಲಬ್ಬರ |
| ಕಸದ ಬುಟ್ಟಿ | ಕಸಬುಟ್ಟಿ | ಸಾಲ | ಕರಜ, ರೀಣ |
| ಸಂಪಾದನೆ | ಗಳಿಸಿದ್ವಾನೆ | ಸಾಲಕೊಡುವವ | ಸಾಹುಕಾರ |
| ಬೆಲೆ | ಕಿಮ್ಮತ್ತು | ಮಾರಾಟ | ವ್ಯಾಪಾರ |
| ಪರಿಳಿತ | ಹೆಚ್ಚುಕಮ್ಮಿ | ದಿವಾಳಿ | ದೇಗಲ |
| ಅಂಗಡಿ | ದುಖಾನ | ನಗದುಸಾಲ | ನಗದು ಕರಜ |
| ಆದಾಯ | ಲಾಭ | ಹಿಂದಿನ ಲೆಕ್ಕ | ಪಳೆಯ ಲೆಕ್ಕ |
| ಸಾಲ | ಕರ್ಜ | ನಷ್ಟ | ಲುಕ್ಸಾನ |
| ಲೇಖನಿ | ಪಾಠನ್ | ಬಿರುಡೆ | ಬೂಚ್ |
| ಕಾರ್ಡ್ | ಟಪಾಲು | ಆರಾಮ ಕುರ್ಚಿ | ನಿವಂತ ಕುರ್ಚಿ |
| **ಪ್ರಾಣಿಗಳು** | | | |
| ಹೇಸರಗತ್ತೆ | ದಾಸರಕತ್ತೆ | ಹಸು | ಆಕಳು |
| ಅಳಿಲು | ಇಂಚಿ | ಕುದುರೆ | ಕುದರಿ |
| ಹೆಣ್ಣು ಕುದರೆ | ಹೆಣ್ಣುಗುದರಿ | ಚಿರತೆ | ಹೊನಗ್ಯಾ |
| ಮುಂಗುಸಿ | ಮುಂಗಲಿ | ಪಶು | ದನ |
| ಮೇಕೆ | ಆಡು | ಗಂಡು ಮೇಕೆ | ಓತ |
| ಕರು | ಕರ | ಮೇಕೆ ಮರಿ | ಆಡುಮರಿ |
| ಕೋತಿ | ಮಂಗ್ಯ, ವಾಂಡೆ | ಕರಡಿ | ಕಲ್ಡಿ |
| ಇಲಿ | ಇಲಿಪಟಿಗೆ | ಕಿರುಬ | ಕತ್ತೆಗರಕ |
| ಬೇಟೆನಾಯಿ | ಶಿಖಾರಿ ನಾಯಿ | ಕೊಂಬು | ಕೋಡು |
| ಬಾವಲಿ | ವಾಗಳ್ | ಕೌಜುಹಕ್ಕಿ | ಕೌಜ |
| ಕೊಕ್ಕು | ಬೆಳ್ಳಿಹಕ್ಕಿ | ರೆಕ್ಕೆ | ಪಕ್ಕ |
| ಬಾತುಕೋಳಿ | ಬದಕ | ಗಿಡುಗ | ಬಡಿಗ |
| ನವಿಲು | ಮೊರ್ | ಕೊಕ್ಕರೆ | ಕೊರಕಂಚು |
| **ಹುಳುಗಳು ಮತ್ತು ಕೀಟಗಳು** | | | |
| ಹೆಬ್ಬಾವು | ಹಜಗರ | ನಾಗರಹಾವು | ನಾಗ |
| ಎರೆಹುಳು | ದತ್ತುಂಡ | ಏಡಿ | ಏಂಡಿ |
| ಶಿಗಣೆ | ತೊಗಣೆ | ಊಣೆಚಿಗುಟ | ತಾಂಬಿ |
| ಹಲ್ಲಿ | ಪಾಲ | ವಿಷ | ವಿಸ |
| ಮಿಣುಕು ಹುಳು | ಹೊನ್ನಿಹುಳ | ಕಣಜ | ಅಗೇ |

| | | | |
|---|---|---|---|
| ಜಿಗಣೆ | ಜಿಗಳಿ | ಚಿಟ್ಟೆ | ಪಾತ್ರು |
| ಹಡೆ | ಹಡಿ | ಚೇಳು | ಚೋಳು |
| ನೊಣ | ನಣಾ | ಜೇಡನ ಬಲೆ | ಜಾಡಗೂಡು |
| ಸೊಳ್ಳೆ | ನರಜ್ | ಮೀನು | ಮೀನ |
| ಜೇನು ನೊಣ | ಜೇನುಹುಳ | ಏಡಿ | ಕೇಕಡ |
| ಕಪ್ಪೆ | ಕೊಪ್ಪೆ | ಹಾವು | ಉದ್ದಂದ, ಹುಳ |
| ಮುತ್ತಿನ ಚಿಪ್ಪು | ಸಿಪ್ಪೆ | ಗೊಬೆ | ಗೂಗಿ |
| ಮರಕುಟುಕ | ಬಡಿಗ | ಕಾಗೆ | ಕಾಂಗಿ |

ಸಂಖ್ಯೆಗಳು

| | | | |
|---|---|---|---|
| ಅರವತ್ತು | ಮೂರು ಇಪ್ಪತ್ತು | ಎಪ್ಪತ್ತು | ಮೂರು ಇಪ್ಪತ್ತು ಹತ್ತು |
| ಎಂಭತ್ತು | ನಾಕಿಪ್ಪತ್ತು | ಹತ್ತನೆಯ | ಮ್ಯಾಟ್ರಿಕ್ |
| ಐನೂರು | ಪಾಸೆ | ಒಂದು ಸಾವಿರ | ಹಜರಾ |
| ಲಕ್ಷ | ಲಾಕ | ಕಾಲುಭಾಗ | ಗಿರ್ದ |
| ಮುಕ್ಕಾಲು | ಪಾವನೆ ಒಂದು | ಐವತ್ತು | ಐದು ಹತ್ತು |

ವಾರದ ದಿನಗಳು

| | | | |
|---|---|---|---|
| ಸೋಮವಾರ | ಸೋಮಾರ | ಮಂಗಳವಾರ | ಮುಂಗಳಾರ |
| ಬುಧವಾರ | ಬುಧರಾ | ಗುರುವಾರ | ಬೇಸ್ತವಾರ |
| ಶುಕ್ರವಾರ | ಶುಕ್ರಾರ | ಶನಿವಾರ | ಶನಿವಾರ |
| ಭಾನುವಾರ | ಆಯಿತಾರ | | |

ವರ್ಷದ ತಿಂಗಳು (ಅಮವಾಸ್ಯೆಗಳಲ್ಲಿ)

ದೀಳಿಗೆ ಹಬ್ಬ ಅಮವಾಸ್ಯೆ

ಸಣ್ಣದೀಳಿಗೆ

ಸೂನದ ಅಮವಾಸ್ಯೆ

ಹಿಸ್ತ್ಯಾಳ ಅಮವಾಸ್ಯೆ

ಶಿವರಾತ್ರಿ

ಯುಗಾದಿ

ಆಕ್ಕಿತಿ ಅಮವಾಸ್ಯೆ

ಬಾರಮೆ

ಮಣ್ಣೆತ್ತಿನ

ನಾಗರಪಂಚಮಿ

ಮಹಾನವಮಿ

೯

# ಕುರಿ ಸಂಗೋಪನೆ

ಶಿಲಾಯುಗದಲ್ಲಿ ಮನುಷ್ಯ ಪ್ರಾಣಿಗಳನ್ನು ಬೇಟೆಯಾಡಿ ಜೀವನ ಸಾಗಿಸುತ್ತಿದ್ದ. ಕಾಲಕ್ರಮೇಣ ತನ್ನ ಸಂತತಿ ಬೆಳೆದಂತೆಲ್ಲ ಪ್ರಾಣಿಗಳನ್ನು ಬೇಟೆಯಾಡಿ ಆಹಾರ ಸಂಗ್ರಹಿಸುವುದು ಅವನಿಗೆ ಕಷ್ಟವಾಯಿತು. ಈ ಸಮಸ್ಯೆಯು ಮಾನವನನ್ನು ನೆಲೆ ನಿಲ್ಲುವಂತೆ ಮಾಡಿ ಪ್ರಾಣಿಗಳನ್ನು ಸಾಕಲು, ನಂತರ ಕೃಷಿ ಚಟುವಟಿಕೆಯಲ್ಲಿ ತೊಡಗಿಸಿಕೊಳ್ಳಲು ಅನುವು ಮಾಡಿಕೊಟ್ಟಿತು. ಕೃಷಿ ಚಟುವಟಿಕೆ ಕೈಗೊಳ್ಳುವುದಕ್ಕಿಂತ ಮುಂಚೆ ತನ್ನ ದಿನನಿತ್ಯದ ಆಹಾರ ಪಡೆಯಲು ಮತ್ತು ದೇಹ ಮುಚ್ಚಿಕೊಳ್ಳಲು ಸಾಧು ಹಾಗೂ ಸರಳ ಸ್ವಾಭಾವದ ಕುರಿ-ಮೇಕೆಗಳನ್ನು ಪಳಗಿಸಿ ಸಾಕಲು ಆರಂಭಿಸಿದ. ಈ ಪಳಗಿಸುವ ಕ್ರಿಯೆಯು ಎಲ್ಲಿಂದ, ಯಾವ ಕಾಲದಿಂದ ಆರಂಭವಾಯಿತು ಎಂಬ ಬಗ್ಗೆ ಸ್ಪಷ್ಟತೆಯಿಲ್ಲ. ಕುರಿಗಳನ್ನು ಪಶ್ಚಿಮ ಏಶಿಯಾದಲ್ಲಿ ಮೊದಲು ಪಳಗಿಸಲಾಯಿತೆಂದು ದೊರೆತ ಮಾಹಿತಿಯಂತೆ ತಿಳಿದುಬರುತ್ತದೆ. ಇಂದು ಈ ಪ್ರದೇಶವನ್ನು ಇರಾಕ್, ಇರಾನ್, ಇಸ್ರೇಲ್, ಜೋರ್ಡಾನ್, ಲೆಬನಾನ್, ಸಿರಿಯಾ ಮತ್ತು ಟರ್ಕಿ ರಾಷ್ಟ್ರಗಳು ವಶಪಡಿಸಿಕೊಂಡಿವೆ.

**ಮೂಲ : ಸಾಕಣೆ ಇತಿಹಾಸ : ಹರಡುವಿಕೆ**

ಮೂಲ (Origin) : ಮೇಕೆ, ಆಕಳು (Bovine) ಕುಟುಂಬಕ್ಕೆ ಸೇರಿದ್ದಾಗಿದ್ದು ತಲೆಯ ಮೇಲೆ ಟೊಳ್ಳಾದ ಕೊಂಬುಗಳನ್ನುಳ್ಳ ಕಾರ್ಪ (Carpa) ವರ್ಗಕ್ಕೆ ಸೇರಿದ ಮೆಲಕು ಹಾಕುವ ಸಸ್ಯ ಪ್ರಾಣಿ (ಕಾರ್ಪ ವರ್ಗವೆಂದರೆ ಭಿನ್ನವಾಗಿ ಕಾಣುವ ೭ ಕಾಡು ಪ್ರಾಣಿಗಳನ್ನು ೪೦ ವರ್ಗಗಳನ್ನಾಗಿ ಮಾಡಲಾಗಿದೆ. ಅದರಲ್ಲಿ Carpa ಎನ್ನುವುದೊಂದು ವರ್ಗ). ಪಳಗಿಸಿದ ಮೇಕೆಯ ಸಂತತಿ ಯುರೋಪಿನ ಕ್ರೇಟನ್ (Cretan) ಮತ್ತು ಸೈಕ್ಲೇಡ್ಸ್ (Cyclades) ಕುಲದಿಂದ ಬಂದಿದೆ. ಬಹುಮಟ್ಟಿಗೆ ಪಶ್ಚಿಮ ಏಶಿಯಾ ಮೇಕೆಯ ಮೂಲಸ್ಥಳವಾಗಿದ್ದು, 'ಪರ್ಶಿಯನ್' ಕುಲವೆಂದು ದಾಖಲಾಗಿದೆ.

ಆಕಳು ಕುಟುಂಬಕ್ಕೆ ಮೇಕೆ ಸೇರಿದ್ದರೆ, ಮೇಕೆಯ ಉಪಕುಟುಂಬಕ್ಕೆ ಕುರಿ ಬರುತ್ತದೆ. ಕೊಂಬಿರುವ ಮತ್ತು ಕೊಂಬಿಲ್ಲದಿರುವ ಕಾಲುಬೆರಳುಗಳಿರುವ ಮೆಲಕು ಹಾಕುವ ಪ್ರಾಣಿಯದು. ಈ ರೀತಿಯ ಗುಣಲಕ್ಷಣವನ್ನು ಎಲ್ಲಾ ತಳಿ (ಜಾತಿ) ಕುರಿಗಳಲ್ಲಿ ಕಾಣುತ್ತೇವೆ.

ಇವು ಮೂಲತಃ ಎತ್ತರ ಮತ್ತು ಬೆಟ್ಟ-ಗುಡ್ಡಗಳ ಪ್ರದೇಶಗಳಲ್ಲಿ ಪ್ರತ್ಯೇಕ ಗುಂಪುಗಳಾಗಿ ಅಸಂಖ್ಯಾ ಪ್ರಮಾಣದಲ್ಲಿ ಜಾತಿ, ಉಪಜಾತಿ, ಮತ್ತು ಸ್ಥಳೀಯ ಸಂತತಿಗಳಾಗಿ ಅಭಿವೃದ್ಧಿ ಹೊಂದಿವೆ. ಪ್ರಾಣಿಶಾಸ್ತ್ರದ ವರ್ಗೀಕರಣದಲ್ಲಿ ಕುರಿ-ಮೇಕೆಗಳ ವಂಶಪರಂಪರೆ ಕಲ್ಪನೆಗೆ ಸಂಬಂಧಿಸಿದಂತೆ ಇತರೆ ಪಳಗಿಸಿದ ಪ್ರಾಣಿಗಳಿಗಿಂತ ಬಹಳಷ್ಟು ಭಿನ್ನ ವಾದಗಳಿವೆ. ಭಿನ್ನವಾಗಿ ಕಾಣುವ ೭ ಕಾಡು ಪ್ರಾಣಿಗಳನ್ನು ೪೦ ಬೇರೆ ಬೇರೆ ವರ್ಗಗಳನ್ನಾಗಿ ಗುರುತಿಸಲಾಗಿದೆ. ಕಾಡು ಮತ್ತು ಬೆಟ್ಟ-ಗುಡ್ಡಗಳಲ್ಲಿ ವಾಸಿಸುವ ಎಲ್ಲಾ ಪ್ರಾಣಿಗಳಲ್ಲಿ ಪ್ರಾಮುಖ್ಯತೆ ನೀಡಿ ಪಳಗಿಸಿದ ಮೊದಲ ಪ್ರಾಣಿ ಕುರಿ ಆಗಿದೆ. ಮೊದಲ ಮೂರು ಕುರಿ ತಳಿಗಳೆಂದರೆ ೧. ಮಧ್ಯ ಏಷ್ಯಾದ Argali (Ovis mamman) ೨. ಏಷ್ಯಾದ ಮತ್ತೊಂದು ತಳಿ Urial (Ovis Vignei) ಮತ್ತು ೩. ಯುರೋಪಿನ Moufflon (Ovis musimon) ತಳಿಗಳು.

**ಸಾಕಣೆ ಇತಿಹಾಸ (History of Domestication) :** ಪಶ್ಚಿಮ ಏಷ್ಯಾದ "ಅರ್ಲೋ-ಕಾಸ್ಪಿಯನ್ ಸ್ಟೆಪೇ" (Arolo-Caspion steppe) ಪ್ರಾಣಿಗಳನ್ನು ಪಳಗಿಸಿದ ಮೂಲಸ್ಥಳವಾಗಿದೆ. ಈ ಪ್ರದೇಶ ಇಂದು ಇರಾನ್ ಮತ್ತು ಇರಾಕ್ ರಾಷ್ಟ್ರಗಳ ವ್ಯಾಪ್ತಿಯಲ್ಲಿದೆ. ಉತ್ತರ ಇರಾಖ್‌ದ Zawi-chemi Shanidar ಸ್ಥಳದಲ್ಲಿ ೧೦,೫೦೦ ವರ್ಷಗಳ ಹಿಂದೆ ಕುರಿ-ಮೇಕೆಗಳನ್ನು ಸರಿಯಾದ ಮಾರ್ಗದಲ್ಲಿ ಪಳಗಿಸಲಾಯಿತೆಂದು ತಿಳಿದು ಬಂದಿರುತ್ತದೆ. ಈಗಲೂ ಅಮೇರಿಕದಲ್ಲಿ ಚಾಲ್ತಿಯಲ್ಲಿರುವ ದೊಡ್ಡ ಕೊಂಬಿನ (Ovis canadensis) ಕುರಿ ತಳಿಯನ್ನು ಪಳಗಿಸಲಾಗಿಲ್ಲ ಹಾಗೂ ಇದು ಆಧುನಿಕ ವಂಶಾವಳಿಗೆ ಯಾವುದೇ ಕೊಡುಗೆ ನೀಡಿಲ್ಲವೆಂದು ತಿಳಿದುಬಂದಿದೆ. ಆದರೆ ಕ್ರಿ.ಶ. ೧೪೯೩ರಲ್ಲಿ ಕೊಲಂಬಸ್‌ನು ೩ನೇ ಜಲ ಪರ್ಯಾಟನೆ ಕೈಗೊಂಡನಂತರ ಕುರಿ-ಮೇಕೆಗಳನ್ನು ಪಳಗಿಸಿದ ಇತಿಹಾಸ ಅಮೇರಿಕಾದ ದಿನಚರಿಯಲ್ಲಿ ವಾಸ್ತವವಾಗಿ ದಾಖಲಾಗಿದೆ. ಯುರೋಪಿನಲ್ಲಿ ನೆಲೆನಿಂತ ನಂತರವೇ ಆಸ್ಟ್ರೇಲಿಯಾದಲ್ಲಿ ನಿಜವಾದ ಸಸ್ತನಿ(ಕುರಿ-ಮೇಕೆ Mammalas)ಗಳನ್ನು ಪಳಗಿಸಲಾಯಿತು. ಕಾಡು ಜಾತಿಯ ಕುರಿ-ಮೇಕೆಗಳು ಆಫ್ರಿಕಾದಲ್ಲಿ ಯಾವ ಕಡೆಯೂ ನೆಲೆಸಿರುವುದು ಕಂಡುಬರುವುದಿಲ್ಲ. ಉತ್ತರ ಏಶ್ಯಿಯಾದ 'ಕಾಡು ಕುರಿ'(Ammotragus lervia) ಎಂದು ಕರೆಸಿಕೊಳ್ಳುವ ಕುರಿತಳಿ ದಕ್ಷಿಣ ಸೂಡಾನ್‌ದಲ್ಲಿರುವುದಾದರೂ ಅವು ನಿಜವಾದ ಕುರಿ ಅಥವಾ ಆಡುಗಳಲ್ಲ. ಈ ತಳಿಯ ಕುರಿಗಳಿಗೆ ಉದ್ದವಾದ ಕೂದಲುಗಳಿದ್ದು, ಗಡ್ಡ ಇರುವುದಿಲ್ಲ. ಇವುಗಳ ನಡುವೆ ಮುಖ ಲಕ್ಷಣ ಮತ್ತು ಕಾಲುಭಾಗದ ಲಕ್ಷಣಗಳು ಹೋಲಿಕೆಯಾಗುವುದಿಲ್ಲವೆಂದು ಹೇಳಲಾಗಿದೆ. ಹಾಗಾಗಿ ದಕ್ಷಿಣ ಸೂಡಾನ್ ಕುರಿಗಳು ಉತ್ತರ ಏಶಿಯಾ ಕಾಡು ಕುರಿ ತರಹದ ಕಾಡು ಆಡು ಎಂದು ಗುರುತಿಸಲಾಗಿದೆ.

ಏಷಿಯಾ ಮೂಲದ ಕುರಿ-ಮೇಕೆಗಳು ಪಶ್ಚಿಮದವರೆಗೆ ಮತ್ತು ಭಾರತದ ಉಪಖಂಡವನ್ನು ದಾಟಿ ಯುರೋಪ್ ಮತ್ತು ಆಫ್ರಿಕಾವನ್ನೊಳಗೊಂಡು ವಿಸ್ತರಿಸಿವೆ. ಇತ್ತೀಚಿನ ದಿನಗಳಲ್ಲಿ ಏಶಿಯಾ ಮೂಲದ ಕುರಿಗಳನ್ನು ಅಮೇರಿಕಾ ಮತ್ತು ಒಸೇನಿಯಾ ರಾಷ್ಟ್ರಗಳಿಗೆ ಪರಿಚಯಿಸಲಾಗಿದೆ ಎಂದು ಕುರಿಗಳ ಇತಿಹಾಸದ ಮೂಲಕ ತಿಳಿದುಬರುತ್ತದೆ.

ಕುರಿ-ಮೇಕೆಗಳನ್ನು ಪ್ರಮುಖವಾಗಿ ಜೀವನಧಾರೆಕ್ಕಾಗಿ ಬಳಸಲಾಗುತ್ತಿತ್ತು ಎಂದು ಪ್ರಾಚ್ಯವಸ್ತು ಸಂಶೋಧನೆಯು ತಿಳಿಸುತ್ತದೆ. ಮೇಕೆಗಳನ್ನು ಮಾಂಸಕ್ಕಾಗಿ ಬಳಸಲಾಗುತ್ತಿತ್ತು ಎಂದು ಟೆಂಕೋ ಮತ್ತು ತಸ್ಮ ನಾಗರಿಕತೆಗಳ ಸ್ಮಾರಕ ವಸ್ತುಗಳಿಂದ ತಿಳಿದುಬರುತ್ತದೆ. ಮೇಕೆಯ ಎಲುಬಿನ ಅವಶೇಷಗಳಿಂದ ಮೇಕೆಯ ಜೀವಂತಿಕೆಯನ್ನು ಗುರುತಿಸಲಾಗಿದೆ ಯಾದರೂ ಇದು ಕಾಡು ಪ್ರಾಣಿಯೋ ಪಳಗಿಸಿದ ಪ್ರಾಣಿಯೋ ಎಂಬುವುದನ್ನು ನಿರ್ದಿಷ್ಟವಾಗಿ ಗುರುತಿಸಲಾಗಿಲ್ಲ. ೨೦,೦೦೦ ವರ್ಷಗಳ ಹಿಂದಿನ ಗುಹೆ ಕಲೆಗಳಲ್ಲಿ ಬಹಳಷ್ಟು ವಿವಿಧ ಪ್ರಾಣಿಗಳನ್ನು ಕೆತ್ತಲಾಗಿದೆ. ಅವುಗಳಲ್ಲಿ ಕುರಿ-ಮೇಕೆ ಗಳು ಪ್ರಮುಖವಾದವು. ಪದೇ ಪದೆ ಅಲಂಕಾರಿಕ ಮತ್ತು ಭೂಷಣ ವಸ್ತುಗಳನ್ನಾಗಿ ಮಾಡಿರುವುದು, ಗುಹೆ ಕಲೆಗಳಲ್ಲಿ ಕುರಿ-ಮೇಕೆಗಳನ್ನು ಬಳಸಿರುವುದು ಏನನ್ನು ಸೂಚಿಸುತ್ತದೆ. ಮಾನವನ ದೀರ್ಘಾವಧಿ ಜೀವನದಲ್ಲಿ ಕುರಿ-ಮೇಕೆಗಳಿರುವ ಸ್ಥಾನ ಮೌಲ್ಯವನ್ನು ತಿಳಿಸುತ್ತದೆ ಅಲ್ಲವೇ?.

**ಹರಡುವಿಕೆ (Dispersion) :** ಪ್ರಾಣಿಗಳ ಪಳಗಿಸುವಿಕೆ ಮೂರು ಹಳೆಯ ನಾಗರಿಕತೆಗಳಿಗೆ ಸಂಬಂಧಿಸಿದೆ ಎಂದು ತಿಳಿಯುತ್ತದೆ. ಅವನ್ನು ಈಶಾನ್ಯ ಆಫ್ರಿಕಾದ ನೈಲ್ ನಾಗರಿಕತೆ, ಪಶ್ಚಿಮ ಏಷ್ಯಾದ 'ಟೈಗ್ರಿಸ್ ಯುಫ್ರಾಟೆಸ್' ನಾಗರಿಕತೆ (Tigris Euphrates) ಭಾರತ ಉಪಖಂಡದ ಸಿಂಧು (Indus) ನಾಗರಿಕತೆಗಳು ಎಂದು ಹೇಳಬಹುದು. ಮತ್ತೊಂದು ಆಧಾರದ (Evidence) ಪ್ರಕಾರ ಆಗ್ನೇಯ ಏಶಿಯಾದಲ್ಲಿ ಪಳಗಿಸುವಿಕೆ ಪ್ರಾರಂಭಿಕ ಹಂತ ದಲ್ಲಿಯೇ ಜಾರಿಯಲ್ಲಿತ್ತು ಎಂದು ತಿಳಿದುಬರುತ್ತದೆ. ಈ ಸ್ಥಳಗಳಲ್ಲಿ ಪಳಗಿಸಿದ ಜನ ಸಮುದಾಯಗಳು ಪ್ರಾಣಿಗಳನ್ನು ಇತಿಹಾಸದ ಪೂರ್ವಕಾಲದಲ್ಲಿ ಕುರಿ-ಮೇಕೆ ಮತ್ತು ಇತರ ಪ್ರಾಣಿಗಳ ಜೊತೆ ಪ್ರಪಂಚದ ಹಲವಾರು ಭಾಗಗಳಿಗೆ ವಲಸೆ ಹೋದವು. ಜಾನುವಾರುಗಳು ಅಥವಾ ಕುರಿ-ಮೇಕೆಗಳು ಅಲೆದಾಡಿದ ದಾರಿಗಳು ಈ ಎಲ್ಲಾ ವಲಸೆಗಳಿಗೆ ವಲಸೆ ಮಾರ್ಗ ಗಳಾಗಿ ಬಳಸಿಕೊಂಡಿರುವುದು ಬಹುಮಟ್ಟಿಗೆ ಕಂಡುಬರುತ್ತದೆ. ಇದು ಕುರಿ-ಮೇಕೆಗಳನ್ನು ಪಳಗಿಸಿದ ಕಾಲ ಮತ್ತು ವಲಸೆಗಳು ಬೆಳೆದಿರುವ ದೂರವನ್ನು ಹೇಳುತ್ತದೆ.

ಪಶ್ಚಿಮ ಏಷ್ಯಾದ ಮೂಲ ಸ್ಥಳದಿಂದ ಕುರಿ-ಮೇಕೆಗಳು ಕ್ರಿ.ಪೂ. ೨೦೦೦ ವರ್ಷಗಳಿಗಿಂತ ಪೂರ್ವದಲ್ಲಿ ಎರಡು ಪ್ರಮುಖ ಮಾರ್ಗಗಳ ಮೂಲಕ ಜಗತ್ತಿನೆಲ್ಲೆಡೆ ಚದುರಿದವು.

೧. ಪರ್ಶಿಯಾ ಮತ್ತು ಅಫಘಾನಿಸ್ತಾನದಿಂದ ಮಂಗೋಲಿಯಾ ಮತ್ತು ಉತ್ತರ ಚೈನಗಳಿಗೆ ತುರ್ಕಿಸ್ಥಾನದ ಮಾರ್ಗ ಹಿಡಿದು ರೇಷ್ಮೆ ರಸ್ತೆ (Silk Road) ಮೂಲಕ ವಲಸೆ ಹೋಗಲಾಯಿತು.

೨. ಇಂಡೋ-ಆರ್ಯನ್ ಜನರ ಸಮುದಾಯಗಳು ಭಾರತದ ಉಪಖಂಡಕ್ಕೆ ಖೈಬರ್ ಪಾಸ್ (Kyber-Pass) ಮಾರ್ಗ ಹಿಡಿದು ವಲಸೆ ಹೋದವು.

ಈ ಪ್ರಕಾರವಾಗಿ ಅಲೆಮಾರಿ ಪಶುಪಾಲಕರು ತಮ್ಮ ಪಳಗಿಸಿದ ಕುರಿ-ಮೇಕೆಗಳೊಂದಿಗೆ ಪಶ್ಚಿಮ ಏಷ್ಯಾ ಮತ್ತು ಮಧ್ಯ ಏಷ್ಯಾದಿಂದ ಮಂಗೋಲಿಯಾ, ಚೈನಾ ಮತ್ತು ಭಾರತ ದೇಶಗಳಿಗೆ ಮೇಲಿನ ಎರಡು ಮಾರ್ಗಗಳ ಮೂಲಕ ವಲಸೆ ಹೋಗಿರಬಹುದು ಎಂದು ಹೇಳಲಾಗಿದೆ.

ಭೌಗೋಳಿಕತೆ : ಕರ್ನಾಟಕ ೧,೯೧,೭೯೧ ಚ.ಕಿ.ಮೀ.ಗಳು ಭೂ ವಿಸ್ತಾರ್ಣವನ್ನು ಹೊಂದಿದ್ದು ಅದರಲ್ಲಿ ೩೬,೯೯೧ ಚ.ಕಿ.ಮೀ. ಅರಣ್ಯ ಪ್ರದೇಶವಿದೆ. ೨೦೦೧ರ ಜನಗಣತಿಯ ಪ್ರಕಾರ ರಾಜ್ಯದ ಜನಸಂಖ್ಯೆಯು ೫.೨೭ ಕೋಟಿಗಳಿದ್ದು ಶೇ. ೬೬ ರಷ್ಟು ಗ್ರಾಮೀಣ ಮತ್ತು ಶೇ. ೩೪ ರಷ್ಟು ನಗರವಾಸಿಗಳನ್ನು ಹೊಂದಿದೆ. ಪ್ರತಿ ಚ.ಕಿ.ಮೀಟರ್‌ಗೆ ೨೭೫ ಜನಸಾಂದ್ರತೆ ಪ್ರಮಾಣವನ್ನು ಹೊಂದಿದೆ.

ಕರ್ನಾಟಕದ ಪ್ರಮುಖ ಜಿಲ್ಲೆಗಳಲ್ಲಿ ಬಳ್ಳಾರಿ ಜಿಲ್ಲೆ ಒಂದು. ರಾಜ್ಯದ ನಕ್ಷೆಯ ಪ್ರಕಾರ ಈ ಜಿಲ್ಲೆಯು ಪೂರ್ವ ಭಾಗದ ಮಧ್ಯದಲ್ಲಿ ದಕ್ಷಿಣೋತ್ತರವಾಗಿ ಹಬ್ಬಿದೆ. ಜಿಲ್ಲೆಯ ಪಶ್ಚಿಮಕ್ಕೆ ಹಾವೇರಿ, ಉತ್ತರಕ್ಕೆ ರಾಯಚೂರು, ದಕ್ಷಿಣಕ್ಕೆ ಚಿತ್ರದುರ್ಗ, ಪೂರ್ವಕ್ಕೆ ಆಂಧ್ರಪ್ರದೇಶವಿದೆ. ಪೂರ್ವ- ಪಶ್ಚಿಮ ಭಾಗವು ೧೬೧.೮ ಕಿ.ಮೀ. ಉದ್ದ. ಉತ್ತರ-ದಕ್ಷಿಣ ೮೫.೭೮ ಕಿ.ಮೀ. ಅಗಲವಾಗಿದೆ. ಪೂರ್ವ ರೇಖಾಂಶ ೭೫°-೪೫° ಮತ್ತು ಉತ್ತರ ರೇಖಾಂಶ ೧೪°-೩೦° ನಡುವೆ ಇದೆ (ಕರ್ನಾಟಕ ಗೆಜಿಟಿಯರ್). ಜಿಲ್ಲೆಯ ಒಟ್ಟು ವಿಸ್ತೀರ್ಣ ೮೪೫೦ ಚ.ಕಿ.ಮೀ. ೨೦೦೧ರ ಜನಗಣತಿಯ ಪ್ರಕಾರ ಒಟ್ಟು ಜನಸಂಖ್ಯೆ ೨೦.೨೭ ಲಕ್ಷಗಳು ಅದರಲ್ಲಿ ೧೦.೩೦ ಲಕ್ಷ ಪುರುಷರು ಹಾಗೂ ೯.೯೭ ಲಕ್ಷ ಮಹಿಳೆಯರಿದ್ದಾರೆ. ಲಿಂಗಾನುಪಾತ ೯೬೯. ಸಾಕ್ಷರತೆ ಪ್ರಮಾಣ ಶೇ. ೫೭.೪ ರಷ್ಟು ಜನಸಾಂದ್ರತೆ ೨೪೦ ಇರುವುದು ತಿಳಿದುಬಂದಿದೆ.

ಈ ಜಿಲ್ಲೆಗೆ ತುಂಗಭದ್ರ ನದಿ ವರವಾಗಿ ಪರಿಣಮಿಸಿದೆ. ಹಗರಿ ಅಥವಾ ವೇದಾವತಿ ನದಿ ಮತ್ತು ಚಿಕ್ಕಹಗರಿಗಳು ತುಂಗಭದ್ರ ನದಿಯ ಉಪನದಿಗಳಾಗಿವೆ. ಪಶ್ಚಿಮ ಮತ್ತು ಉತ್ತರ ದಂಡೆಗೆ ಗಡಿರೇಖೆಯಾಗಿ ಈ ನದಿಯು ಹರಿಯುತ್ತದೆ. ಇದು ಹರಪನಹಳ್ಳಿ (ದಾವಣಗೇರಿ ಜಿಲ್ಲೆ) ಕಡಲ ಗ್ರಾಮದಿಂದ ಪ್ರವೇಶಿಸಿ, ಹರಪನಳ್ಳಿ, ಹಡಗಲಿ, ಹೊಸಪೇಟೆ ಮತ್ತು ಸಿರುಗುಪ್ಪ ತಾಲೂಕುಗಳ ಉತ್ತರದ ಎಲ್ಲೆಯಾಗಿ ೩.೨೨ ಕಿ.ಮೀ. ದೂರ ಹರಿಯುತ್ತದೆ. ಮಲ್ಲಾಪುರ ಎಂಬ ಊರಲ್ಲಿ ತುಂಗಭದ್ರ ಅಣೆಕಟ್ಟು ನಿರ್ಮಿತವಾಗಿದೆ. ಹಗರಿ ಹೊಳೆಯು ತುಂಗಭದ್ರ ನದಿಯ ಉಪನದಿಯಾಗಿದೆ. ಚಿಕ್ಕಮಗಳೂರು ಜಿಲ್ಲೆ ಮುಳ್ಳಯ್ಯನ ಗಿರಿಯಲ್ಲಿ ಹುಟ್ಟಿ ನಂತರ ಚಿತ್ರದುರ್ಗ ಜಿಲ್ಲೆ ಮತ್ತು ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ, ಕೂಡ್ಲಿಗಿ, ಹಡಗಲಿ, ತಾಲೂಕುಗಳಲ್ಲಿ ಹರಿದು ತುಂಗಭದ್ರ ನದಿಯನ್ನು ಕೂಡುತ್ತದೆ. ಚಿನ್ನ ಹಗರಿಯು ಕೂಡ್ಲಿಗಿ ತಾಲೂಕಿನಿಂದ ಹರಿದು ಹಗರಿ ಸೇರುತ್ತದೆ. ಇದಲ್ಲದೆ ಸಣ್ಣಪುಟ್ಟ ತೊರೆಗಳಿಂದ ನೀರಾವರಿಗೆ ತುಂಬಾ ಉಪಯುಕ್ತವಾಗಿದೆ. ಇಲ್ಲಿರುವ ತೊರೆಗಳಲ್ಲಿ ಹಗ್ಗನೂರು ತಂಬ್ರಹಳ್ಳಿ ಹೊಳೆ, ಹಂಪಸಾಗರ ಹೊಳೆ, ಚಿಲ್ಲಹುಣಿಸೆ ಹೊಳೆ, ಗೌರಿಪುರ ಹೊಳೆ, ನಾರಿಹಳ್ಳಗಳಿವೆ. ಇದರೊಂದಿಗೆ ೨೨ ದೊಡ್ಡ ಕೆರೆಗಳು, ೧೭೦ ಸಣ್ಣ ಕೆರೆಗಳು ಈ ಜಿಲ್ಲೆಯಲ್ಲಿವೆ.

ಪ್ರಸ್ತುತ ಜಿಲ್ಲೆಯಲ್ಲಿ ಉಷ್ಣತೆ ಅಧಿಕವಾಗಿದೆ. ಸೊಂಡೂರು ತಾಲೂಕಿನ ಅರಣ್ಯ ಪ್ರದೇಶಗಳನ್ನು ಬಿಟ್ಟರೆ ಉಳಿದಂತೆ ಹೆಚ್ಚು ಮಳೆ ಬೀಳುವ ಸಂಭವ ಕಡಿಮೆ. ಏಕೆಂದರೆ

ಇಲ್ಲಿ ಮರಗಿಡಗಳು ತುಂಬಾ ವಿರಳವಾಗಿವೆ. ಈ ಜಿಲ್ಲೆಯಲ್ಲಿರುವ ಅರಣ್ಯ ಪ್ರದೇಶವು ೧೬೧೮.೭೫ ಕಿ.ಮೀ.ಗಳು. ಇಲ್ಲಿರುವ ಕುರುಚಲು ಕಾಡಿನಲ್ಲಿ ಎಲೆ ಉದುರುವ ಮರಗಳು ಕಾಣುತ್ತವೆ. ಜಿಲ್ಲೆಯಲ್ಲಿ ವಾರ್ಷಿಕ ಸರಾಸರಿ ಮಳೆ ೫೧೮ ಮಿ.ಮೀ. ಆಗುತ್ತದೆ. ಕಳೆದ ೩೭ ವರ್ಷಗಳಿಂದಲೂ ಮಳೆ ಪ್ರಮಾಣವು ೪೦೦ ಮಿ.ಮೀ.ಗಳಿಂದ ೭೦೦ ಮಿ.ಮೀ.ಗಳಷ್ಟು ಆಗಿದೆ. ಆಗಾಗ ಬಂಗಾಳ ಕೊಲ್ಲಿಯಿಂದ ಬೀಸುವ ಚಂಡಮಾರುತದ ಪರಿಣಾಮದಿಂದ ಅದರಲ್ಲೂ ಅಕ್ಟೋಬರ್ ನವ್ಹೆಂಬರ್ ತಿಂಗಳಲ್ಲಿ ಅತಿಹೆಚ್ಚು ಬಿರುಸಾದ ಮಳೆಗಾಳಿ ಆಗುತ್ತದೆ.

ಬಳ್ಳಾರಿ ಜಿಲ್ಲೆಯು ಪ್ರಮುಖವಾಗಿ ವ್ಯವಸಾಯಕ್ಕೆ ಪ್ರಧಾನವಾಗಿದ್ದರೂ ಕಬ್ಬಿಣ ಮತ್ತು ಮ್ಯಾಂಗನೀಸ್ ಖನಿಜಗಳಿಂದ ಹಾಗೂ ಕೈಗಾರಿಕೆ ಬೆಳೆವಣಿಗೆಯಿಂದ ಹೆಸರುವಾಸಿಯಾಗಿದೆ. ಜಿಲ್ಲೆಯಲ್ಲಿ ಲೋಹ ಮತ್ತು ಲೋಹೇತರ ಖನಿಜಗಳು ಲಭ್ಯವಿದೆ. "ಇತ್ತೀಚೆಗೆ ನಡೆಸಿದ ಅಧ್ಯಯನಗಳ ಪ್ರಕಾರ ಜಿಲ್ಲೆಯ ಕಬ್ಬಿಣದ ಅದಿರಿನ ನಿಕ್ಷೇಪ ಪ್ರಮಾಣ ೧೮.೮೧ ದಶಲಕ್ಷ ಟನ್‌ಗಳೆಂದು ಅಂದಾಜಿಸಲಾಗಿದೆ. ೧೯೭೬ ರಿಂದ ೧೯೯೧ರವರೆಗಿನ ಅವಧಿಯಲ್ಲಿ ವಾರ್ಷಿಕ ಕಬ್ಬಿಣ ಅದಿರಿನ ಉತ್ಪತ್ತಿ ಸರಾಸರಿ ೨.೭೫ ರಿಂದ ೪.೫ ದಶಲಕ್ಷ ಟನ್ ಮತ್ತು ಮ್ಯಾಂಗನೀಸ್ ಖನಿಜ ೧೩ ರಿಂದ ೫೦ ಲಕ್ಷಟನ್ ಎಂದು ತಿಳಿದು ಬರುತ್ತದೆ" (ಶೇಷಾದ್ರಿ:೧೯೯೮:೧). ಇಲ್ಲಿಯ ಉತ್ಪಾದನೆಯಾದ ಕಬ್ಬಿಣ ಅದಿರು ಪ್ರಮಾಣದಲ್ಲಿ ಅರ್ಧಕ್ಕಿಂತ ಹೆಚ್ಚು ಭಾಗವು ವಿದೇಶಗಳಿಗೆ ರಫ್ತಾಗುತ್ತದೆ.

ಜಿಲ್ಲೆಯು ಕಪ್ಪು, ಕೆಂಪು, ಜೇಡು, ಕಲ್ಲುಮಿಶ್ರಿತ ಮಣ್ಣಿನಿಂದ ಕೂಡಿದೆ. ಇಲ್ಲಿ ನೀರಾವರಿ ಭೂಮಿಗಿಂತ ಮಳೆಯಾಧಾರಿತ ಭೂಮಿ ಹೆಚ್ಚಿನ ಸಂಖ್ಯೆಯಲ್ಲಿದೆ. ಮುಂಗಾರುನಲ್ಲಿ ಜೋಳ ಮತ್ತು ಭತ್ತ ಪ್ರಧಾನ ಬೆಳೆಗಳಾಗಿವೆ. ಜಿಲ್ಲೆಯಲ್ಲಿ ಭತ್ತ, ಜೋಳ, ನವಣೆ, ಸಜ್ಜೆ, ಹತ್ತಿ, ಶೇಂಗಾ, ಕಬ್ಬು, ಈರುಳ್ಳಿ, ತೊಗರಿ, ಹಲಸಂದಿ, ಉದ್ದು ಬೆಳೆಗಳನ್ನು ಬೆಳೆಯಲಾಗುತ್ತದೆ.

**ವಾಯುಗುಣ :** ಕರ್ನಾಟಕ ಉಷ್ಣವಲಯದಲ್ಲಿರುವ ರಾಜ್ಯ. ಸಾಮಾನ್ಯವಾಗಿ ಉಷ್ಣ ವಾಯುಗುಣವಿದೆ. ಮಾನ್ಸೂನ್ ಗಾಳಿಗಳು, ಭೂಮಿಯ ಮೇಲ್ಮೈ ಲಕ್ಷಣ, ಸಮುದ್ರದ ಸಾಮಿಪ್ಯ, ಸಮುದ್ರ ಮಟ್ಟದಿಂದ ಎತ್ತರ ಮುಂತಾದ ಅಂಶಗಳ ಪರಿಣಾಮವಾಗಿ ವಾಯು ಗುಣವು ಸ್ಥಳದಿಂದ ಸ್ಥಳಕ್ಕೆ, ಕಾಲದಿಂದ ಕಾಲಕ್ಕೆ ಭಿನ್ನವಾಗಿರುತ್ತದೆ. "ಕುರಿ ಸಂಗೋಪನೆ ಮತ್ತು ಅಲೆಮಾರಿ ಕುರುಬರ ಬದುಕು ವಾಯುಗುಣವನ್ನೇ ಅವಲಂಬಿಸಿದೆ. ಆ ಪ್ರದೇಶಗಳಲ್ಲಿ ಬೀಳುವ ಮಳೆ, ಬಿಸಿಲು, ಚಳಿ, ಗಾಳಿಗಳಿಂದ ಕುರಿ ಸಂಗೋಪನೆ ನಿರ್ಧಾರವಾಗುತ್ತದೆ. ಹೆಚ್ಚು ಮಳೆ ಬೀಳುವ ಹಾಗೂ ಶೀತ ವಾಯುಗುಣ ಹೊಂದಿರುವ ಅರಣ್ಯ ಪ್ರದೇಶ ಕುರಿ ಸಂಗೋಪನೆಗೆ ಯೋಗ್ಯವಲ್ಲ. ಒಣ ವಾತಾವರಣವಿರುವ ಹಾಗೂ ೫೪೫ ರಿಂದ ೭೦೦ ಮಿಲಿ ಮೀಟರ್ ಮಳೆ ಬೀಳುವ ಭೂ ಭಾಗಗಳು ಕುರಿ ಸಂಗೋಪನೆಗೆ ತುಂಬಾ ಉತ್ತಮವಾದದು" (ಎಂ.ಜಿ. ಗೋವಿಂದಯ್ಯ;ಜಗನ್ನಾಥ್:೨೦೦೫:೧). ಇದನ್ನು ಅರಿತಿರುವ ಅಲೆಮಾರಿ ಕುರುಬರು ವಾಯುಗುಣಕ್ಕೆ ಹೊಂದಿಕೊಂಡಂತೆ ಅಲೆದಾಡುತ್ತಾರೆ. ಕಡಿಮೆ ಮಳೆ

ಬೀಳುವ ಹಾಗೂ ಒಣ ವಾತಾವರಣವಿರುವ ಭೂಪ್ರದೇಶಗಳಲ್ಲಿ ಅಲೆದಾಡಿ ಕುರಿ ಸಂಗೋಪನೆ ಮಾಡುತ್ತಾರೆ.

ಕರ್ನಾಟಕ ರಾಜ್ಯದ ಜಿಲ್ಲಾವಾರು ವಾಯುಗುಣ ಮತ್ತು ಮಳೆಯ ಪ್ರಮಾಣ ಅರಿಯುವ ಮೂಲಕ ಯಾವ ಜಿಲ್ಲೆಗಳು ಕುರಿ ಸಂಗೋಪನೆಗೆ ಯೋಗ್ಯ ಮತ್ತು ಯೋಗ್ಯವಲ್ಲವೆಂಬುದನ್ನು ತಿಳಿದುಕೊಳ್ಳಬಹುದು.

**ಕೋಷ್ಟಕ ೯.೧ ಕರ್ನಾಟಕ ರಾಜ್ಯದ ಜಿಲ್ಲಾವಾರು ವಾಯುಗುಣ ಮತ್ತು ಮಳೆಯ ಪ್ರಮಾಣ**

| ಜಿಲ್ಲೆಗಳು | ವಾಯುಗುಣ | ವಾರ್ಷಿಕ ಮಳೆ |
|---|---|---|
| ಉಡುಪಿ | ಶುಷ್ಕ ಮತ್ತು ಅರ್ಧಹವೆ | ೪,೧೧೯ ಮೀ.ಮಿ. |
| ದಕ್ಷಿಣ ಕನ್ನಡ | ಶುಷ್ಕ ಮತ್ತು ಅರ್ಧಹವೆ | ೩೯೭೪ ಮೀ.ಮಿ. |
| ಕೊಡಗು | ಹೆಚ್ಚಾಗಿ ಶುಷ್ಕ ಮತ್ತು ಅರ್ಧಹವೆ | ೨೭೧೮ ಮೀ.ಮಿ. |
| ಉತ್ತರ ಕನ್ನಡ | ಶುಷ್ಕ ಮತ್ತು ಅರ್ಧಹವೆ | ೨೮೪೦ ಮೀ.ಮಿ. |
| ಚಿಕ್ಕಮಗಳೂರು | ಶುಷ್ಕಹವೆ | ೧೯೨೮ ಮೀ.ಮಿ. |
| ಶಿವಮೊಗ್ಗ | ಶುಷ್ಕಹವೆ | ೧೮೩೨ ಮೀ.ಮಿ. |
| ಹಾಸನ | ಹಿತಕರ | ೧೦೩೯ ಮೀ.ಮಿ. |
| ಬೆಂಗಳೂರು (ನಗರ) | ಹಿತಕರ | ೮೬೬ ಮೀ.ಮಿ. |
| ಬೀದರ | ಹಿತಕರ | ೮೪೮ ಮೀ.ಮಿ. |
| ಬೆಂಗಳೂರು (ಗ್ರಾಮಾಂತರ) | ಹಿತಕರ | ೮೧೬ ಮೀ.ಮಿ. |
| ಬೆಳಗಾವಿ | ತಂಪಾದ ಹವೆ | ೮೦೯ ಮೀ.ಮಿ. |
| ಮೈಸೂರು | ಹೆಚ್ಚಾಗಿ ಶುಷ್ಕಹವೆ | ೭೮೨ ಮೀ.ಮಿ. |
| ಗುಲಬರ್ಗಾ | ಒಣಹವೆ | ೭೭೬ ಮೀ.ಮಿ. |
| ಚಾಮರಾಜನಗರ | ಹೆಚ್ಚಾಗಿ ಶುಷ್ಕಹವೆ | ೭೫೧ ಮೀ.ಮಿ. |
| ಹಾವೇರಿ | ಹಿತಕರ ಹವೆ | ೭೫೩ ಮೀ.ಮಿ. |
| ಕೋಲಾರ | ಶುಷ್ಕಹವೆ | ೭೪೩ ಮೀ.ಮಿ. |
| ಧಾರವಾಡ | ಶುಷ್ಕಹವೆ | ೭೧೭ ಮೀ.ಮಿ. |
| ಮಂಡ್ಯ | ಶುಷ್ಕಹವೆ | ೭೧೦ ಮೀ.ಮಿ. |
| ತುಮಕೂರು | ಒಣ ಹಾಗೂ ಹಿತಕರ | ೬೭೪ ಮೀ.ಮಿ. |
| ಬಳ್ಳಾರಿ | ಒಣಹವೆ | ೬೩೪ ಮೀ.ಮಿ. |
| ದಾವಣಗೆರೆ | ಒಣ ಹಾಗು ಹಿತಕರ | ೬೨೯ ಮೀ.ಮಿ. |
| ರಾಯಚೂರು | ಒಣ ಹಾಗು ಹಿತಕರ | ೬೨೧ ಮೀ.ಮಿ. |
| ಗದಗ | ಹಿತಕರ ಹವೆ | ೬೧೨ ಮೀ.ಮಿ. |

| | | |
|---|---|---|
| ವಿಜಾಪುರ | ಉಷ್ಣಹವೆ | ೫೮೯ ಮೀ.ಮಿ. |
| ಬಾಗಲಕೋಟೆ | ಉಷ್ಣಹವೆ | ೫೬೧ ಮೀ.ಮಿ. |
| ಕೊಪ್ಪಳ | ಒಣಹವೆ | ೫೬೯ ಮೀ.ಮಿ. |
| ಚಿತ್ರದುರ್ಗ | ಒಣ ಹಾಗು ಹಿತಕರ | ೫೫೬ ಮೀ.ಮಿ. |

*ಆಧಾರ: ದಿಕ್ಸೂಚಿ ಪ್ರಕಾಶನ, ೨೦೦೬, ಸುವರ್ಣ ಕರ್ನಾಟಕ ದರ್ಶನ*

ಕರ್ನಾಟಕದ ಉಡುಪಿ, ದಕ್ಷಿಣ ಕನ್ನಡ, ಕೊಡಗು, ಉತ್ತರ ಕನ್ನಡ, ಚಿಕ್ಕಮಗಳೂರು ಹಾಗೂ ಶಿವಮೊಗ್ಗ ಜಿಲ್ಲೆಗಳು ಕುರಿ ಸಾಕಣಿಕೆಗೆ ಅಷ್ಟೊಂದು ಯೋಗ್ಯವಲ್ಲ. ಕಾರಣ ಈ ಪ್ರದೇಶಗಳಲ್ಲಿ ಅತಿಹೆಚ್ಚು ಮಳೆ ಬೀಳುವುದರ ಜೊತೆಗೆ ಶುಷ್ಕ ಅಥವಾ ತಂಪಾದ ವಾತಾವರಣ ಇರುವುದು. ತುಮಕೂರು, ಬಳ್ಳಾರಿ, ದಾವಣಗೆರೆ, ರಾಯಚೂರು, ಗದಗ, ಬಿಜಾಪುರ, ಬಾಗಲಕೋಟೆ, ಕೊಪ್ಪಳ, ಚಿತ್ರದುರ್ಗ ಜಿಲ್ಲೆಗಳು ಕುರಿ ಸಾಕಣಿಕೆಗೆ ಯೋಗ್ಯವೆನಿಸಿವೆ. ಕಾರಣ ಮಳೆಯ ಪ್ರಮಾಣ ಕಡಿಮೆ ಇರುವುದರ ಜೊತೆಗೆ ಒಣ ವಾತಾವರಣವಿದೆ. ಇನ್ನು ಇತರೆ ಜಿಲ್ಲೆಗಳಲ್ಲಿ ಕುರಿ ಸಾಕಣಿಕೆಗೆ ಅನುಕೂಲವೆನ್ನುವುದಕ್ಕಿಂತ ಹೆಚ್ಚು ಸರಾಸರಿ ಮಳೆ ಇರುವುದು ಮೇಲಿನ ಪಟ್ಟಿಯಿಂದ ಗಮನಿಸಬಹುದು. ಇಂತಹ ಜಿಲ್ಲೆಗಳಲ್ಲಿ ಕುರಿ ಸಾಕಣೆ ಮಾಡುವವರು ಮಳೆಗಾಲದ ಅವಧಿಯಲ್ಲಿ ಗಟ್ಟಿ ಅಥವಾ ಗುಡ್ಡಗಾಡು ಪ್ರದೇಶಗಳಲ್ಲಿ ಅಲೆದಾಡಿ ಕುರಿ ಸಾಕಣಿಕೆ ಮಾಡುತ್ತಾರೆ. ಇಲ್ಲವಾದರೆ ಮಳೆ ಕಡಿಮೆ ಯಾಗುವ ಹಾಗೂ ಒಣ ವಾತಾವರಣ ವಿರುವ ಜಿಲ್ಲೆಗಳಿಗೆ ವಲಸೆ ಹೋಗಿ ಕುರಿಸಂಗೋಪನೆ ಮಾಡುವುದನ್ನು ಕಾಣುತ್ತೇವೆ. ಒಟ್ಟಾರೆಯಾಗಿ ಕುರಿ ಸಂಗೋಪನೆಯು ಮಳೆ ಮತ್ತು ವಾತಾವರಣವನ್ನು ಅವಲಂಬಿಸಿರುತ್ತದೆ.

### ಕುರಿ ತಳಿಗಳು

#### ಡೆಕ್ಕನಿ ತಳಿ (Deccani)

**ಮೂಲ ಮತ್ತು ಹಂಚಿಕೆ :** "ಈ ತಳಿಯನ್ನು ಹೆಚ್ಚಾಗಿ ದಕ್ಷಿಣ ಪ್ರಸ್ಥಭೂಮಿಯಲ್ಲಿ ಸಾಕಲ್ಪಡುವುದರಿಂದ 'ಡೆಕ್ಕನಿ' ಎಂದು ಹೆಸರಿಡಲಾಗಿದೆ" (ಪ್ರೊಫೈಲ್ 'ರೈತರ ಭಾಗ್ಯಕ್ಕೆ': ಕುರಿ-ಮೇಕೆ ಸಂಗೋಪನೆ:೨). ಈ ತಳಿಯನ್ನು ಬೆಳಗಾವಿ, ಬಿಜಾಪುರ, ಬಾಗಲಕೋಟೆ, ಧಾರವಾಡ, ಹಾವೇರಿ, ಗದಗ, ರಾಯಚೂರು, ಗುಲಬರ್ಗಾ ಮತ್ತು ಬೀದರ ಜಿಲ್ಲೆಯ ಕೆಲವು ಭಾಗಗಳಲ್ಲಿ ಹೆಚ್ಚಾಗಿ ಸಾಕಣೆ ಮಾಡಲಾಗುತ್ತದೆ.

**ಲಕ್ಷಣಗಳು :** ಈ ತಳಿಯು ಮಧ್ಯಮ ಗಾತ್ರದ ಕುರಿಯಾಗಿದ್ದು ಮೈಬಣ್ಣದಲ್ಲಿ ಬಹಳ ವೈವಿಧ್ಯತೆ ಕಂಡು ಬರುತ್ತದೆ. ಮೈಬಣ್ಣ ಕಪ್ಪು ಬಣ್ಣದ್ದು, ಅಲ್ಲಲ್ಲಿ ಬಿಳಿ ಮಚ್ಚೆಗಳಿಂದ ಮತ್ತು ಕಂದು ಬಣ್ಣಗಳಿಂದ ಕೂಡಿರುತ್ತದೆ. ತಲೆ, ಎದೆ, ಹೊಟ್ಟೆಯ ಮೇಲೆ ಮತ್ತು ಕಾಲುಗಳ ಮೇಲೆ ಉಣ್ಣೆ ಬೆಳೆದಿರುವುದಿಲ್ಲ. ಇವುಗಳ ಮೂಗು ನೀಟಾಗಿ ಮೇಲಕ್ಕೆ ಎದ್ದು ನಿಂತು, ತುದಿಯಲ್ಲಿ ಸ್ವಲ್ಪ ಬಾಗಿರುತ್ತದೆ. ಇದಕ್ಕೆ ರೋಮನ್ ಮೂಗು ಎಂದು ಕರೆಯುತ್ತಾರೆ. ಮುಖದ ಮೇಲೆ ಹೊಳಪಿನಿಂದ ಕೂಡಿದ ಕಪ್ಪು ಬಣ್ಣದ ಸಣ್ಣ ಸಣ್ಣ ಕೂದಲುಗಳು ಬೆಳೆದಿರುತ್ತವೆ. ಕಣ್ಣುಗಳು ಕಾಂತಿಯುಕ್ತವಾಗಿರುತ್ತವೆ. ಕಿವಿಗಳು ಸ್ವಲ್ಪ ಉದ್ದವಾಗಿದ್ದು

ನೇತಾಡುತ್ತವೆ. ಟಗರುಗಳಿಗೆ ಕೊಂಬುಗಳಿದ್ದು, ಸುರುಳಿ-ಸುರುಳಿಯಾಗಿ ತಿರುಗಿಕೊಂಡು, ಹೊರಭಾಗಕ್ಕೆ ಸ್ವಲ್ಪ ಬಾಗಿಕೊಂಡಿರುತ್ತವೆ. ಕುರಿಗಳಿಗೆ ಕೊಂಬುಗಳಿರುವುದಿಲ್ಲ. ಕಾಲಿನ ಗೊರಟು ಕಪ್ಪಾಗಿರುತ್ತದೆ. ಕುತ್ತಿಗೆ ಗಿಡ್ಡಾಗಿದ್ದು ತಲೆಯು ಸ್ವಲ್ಪ ಮೇಲಕ್ಕೆ ಎದ್ದಿರುತ್ತದೆ.

ಉತ್ಪಾದನೆ : ಇದು ಉಣ್ಣೆ ಮತ್ತು ಮಾಂಸ ನೀಡುವ ದ್ವಿ-ಉಪಯೋಗಿ ತಳಿಯಾಗಿದ್ದು ಇದರ ಉಣ್ಣೆಯನ್ನು ವರ್ಷದಲ್ಲಿ ಎರಡು ಬಾರಿ ಅಂದರೆ ಮೇ ಮತ್ತು ನವ್ಹಂಬರ್ ತಿಂಗಳಲ್ಲಿ ಕತ್ತರಿಸ ಲಾಗುತ್ತದೆ. ವಾರ್ಷಿಕವಾಗಿ ೦.೫ ಕೆ.ಜಿ.ಯಿಂದ ೦.೭ ಕೆ.ಜಿ.ಯವರೆಗೆ ಉಣ್ಣೆಯನ್ನು ಪಡೆಯಲಾಗುತ್ತದೆ. ದಕ್ಷಿಣ ಭಾರತದ ಇತರೆ ಕುರಿಗಳಿಗೆ ಹೋಲಿಕೆ ಮಾಡಿದಾಗ ಈ ಕುರಿಗಳಿಂದಲೇ ಉತ್ತಮ ಉಣ್ಣೆ ದೊರೆಯುವುದು ತಿಳಿದು ಬರುತ್ತದೆ. ಇವುಗಳ ಉಣ್ಣೆಯಿಂದ ಗ್ರಾಮಾಂತರ ಪ್ರದೇಶಗಳಲ್ಲಿ ಉತ್ತಮ ಮಟ್ಟದ ಹಾಸುಗಂಬಳಿ, ಮಫ್ಲರ್ ಹಾಗೂ ಟೋಪಿ ಮತ್ತು ಇತರೆ ಉಣ್ಣೆ ಉತ್ಪನ್ನಗಳನ್ನು ತಯಾರು ಮಾಡಲಾಗುತ್ತದೆ. ಇವು ತೂಕದಲ್ಲಿ ಕಡಿಮೆ ಇರುವುದರಿಂದ ಒಂದು ಕುರಿಯ ಮಾಂಸವು ೧೦ ರಿಂದ ೧೪ ಕೆ.ಜಿ. ಮಾತ್ರ ಇರುತ್ತದೆ. ಡ್ರೆಸ್ಡ್‌ಕ್ಯಾರಕಸ್ (ಚರ್ಮ ಸುಲಿದು ಉಳಿದ ಮಾಂಸ) ಶೇ. ೪೫ ರಷ್ಟು ಮಾಂಸವಿರುತ್ತದೆ. ವಯಸ್ಕ ಟಗರು ೩೦ ಕೆ.ಜಿ.ಯಿಂದ ೪೦ ಕೆ.ಜಿ.ಯವರೆಗೆ ತೂಕವಿದ್ದರೆ, ಹೆಣ್ಣು ಕುರಿಯು ಸುಮಾರು ೩೦ ಕೆ.ಜಿ. ತೂಗುತ್ತದೆ.

ಅಲೆಮಾರಿ ಕುರುಬರು 'ಡೆಕ್ಕನಿ' ತಳಿಯ ಕುರಿಗಳನ್ನು ಸಾಕುತ್ತಾರೆ. ಇವು ಒರಟಾಗಿರುವುದರ ಜೊತೆಗೆ ಶಾರೀರಕವಾಗಿ ಗಟ್ಟಿಯಾಗಿವೆ. ಎತ್ತರಪ್ರದೇಶ (ಬೆಟ್ಟ-ಗುಡ್ಡ) ಏರಿ ಮೇಯಲು ಅಥವಾ ಬಹಳ ದೂರ ಸಾಗಿ ಹುಲ್ಲುಗಾವಲು ಅಥವಾ ಅಡವಿಯಲ್ಲಿ ಮೇಯಲು ಆಯಾಸ ಪಡುವುದಿಲ್ಲ. ಬಿಸಿಲಿನ ತಾಪ ಹಾಗೂ ಚಳಿಯನ್ನು ಸಹಿಸಿಕೊಳ್ಳುವ ಸಾಮಾರ್ಥ್ಯವನ್ನು ಹೊಂದಿವೆ. ಇವು ಅವರ ಬದುಕಿಗೂ ವಾತಾವರಣಕ್ಕೂ ಹೊಂದಿಕೊಳ್ಳುವ ಕುರಿಗಳಾಗಿವೆ. ಧಾರವಾಡ, ಹಾವೇರಿ, ದಾವಣಗೆರೆ, ಶಿವಮೊಗ್ಗ, ಚಿಕ್ಕಮಗಳೂರು ಜಿಲ್ಲೆ ಗಳಲ್ಲಿ ಅಲೆದಾಡುವ ಅಲೆಮಾರಿ ಕುರುಬರು ಈ ತಳಿಯ ಕುರಿಗಳನ್ನು ಸಾಕುತ್ತಾರೆ.

ಬಳ್ಳಾರಿ ತಳಿ (Bellary)

ಮೂಲ ಮತ್ತು ಹಂಚಿಕೆ : ಈ ತಳಿಯ ಕುರಿಗಳು ಬಳ್ಳಾರಿ, ರಾಯಚೂರು, ಧಾರವಾಡ, ಕೊಪ್ಪಳ ಮತ್ತು ಚಿತ್ರದುರ್ಗ ಹಾಗೂ ಕರ್ನಾಟಕ ಗಡಿ ಭಾಗವಾದ ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯ ಕೆಲವು ಭಾಗಗಳಲ್ಲಿ ಯಥೇಚ್ಛವಾಗಿ ಕಂಡುಬರುತ್ತದೆ. ವಿಶೇಷವಾಗಿ ಈ ತಳಿಯನ್ನು ಬಳ್ಳಾರಿ ಜಿಲ್ಲೆಯಲ್ಲಿ ಹೆಚ್ಚಾಗಿ ಸಾಕುವುದರಿಂದ ಇದನ್ನು ಬಳ್ಳಾರಿ ತಳಿ ಎಂದು ಕರೆಯಲಾಗಿದೆ.

ಲಕ್ಷಣಗಳು : "ಈ ತಳಿಯು ಅನುವಂಶೀಯ ಗುಣ ವಿಶೇಷತೆಯಲ್ಲಿ ಹೆಚ್ಚಾಗಿ ಡೆಕ್ಕನಿ ತಳಿಯನ್ನು ಹೋಲುತ್ತದೆ. ಇದು ಡೆಕ್ಕನಿ ತಳಿಯ ಮತ್ತೊಂದು ಪ್ರಭೇದವೆಂದು ತಿಳಿಯಬಹುದು. ಬಹುತೇಕ ಕುರಿಗಳು ಕಪ್ಪು ಬಣ್ಣದ್ದಾಗಿದ್ದು ಮುಖ ಮತ್ತು ದೇಹ ಕಪ್ಪು ಬಣ್ಣದಿಂದ ಕೂಡಿರುತ್ತವೆ" (ಎಂ.ಜಿ. ಗೋವಿಂದಯ್ಯ;ಜಗನ್ನಾಥ್:೨೦೦೫:೧). ಕಾಲುಗಳು

ಡೆಕ್ಕನಿ ಕುರಿಗಳಿಗಿಂತ ಉದ್ದವಾಗಿ ಎತ್ತರ ವಾಗಿರುತ್ತವೆ. ಕಣ್ಣುಗುಡ್ಡೆ ಉಬ್ಬಿಕೊಂಡು ಮುಂದಕ್ಕೆ ಚಾಚಿಕೊಂಡಿರುತ್ತದೆ. ಕಿವಿಗಳು ಉದ್ದವಾಗಿದ್ದು ಜೋಲು ಬಿದ್ದಿರುತ್ತವೆ. ಮುಖ ಮತ್ತು ಕಿವಿಗಳ ಮೇಲೆ ಸಣ್ಣದಾದ ಮಿಂಚಿನಿಂದ ಕೂಡಿದ ಕೂದಲುಗಳು ಬೆಳೆ ದಿರುತ್ತವೆ. "ಬಹಳಷ್ಟು ಟಗರುಗಳಿಗೆ ಕೊಂಬುಗಳಿದ್ದು ಸುರುಳಿಯಾಗಿ ಸುತ್ತಿಕೊಂಡಿದ್ದರೆ ಕೆಲವಕ್ಕೆ ಕೊಂಬುಗಳು ಇರುವುದಿಲ್ಲ" (ರಾಮರಾವ್ ಜ್ಯೋತಿ: ೧೯೯೩:೪೪). ದೇಹವು ಸಾಧರಣವಾಗಿ ಉದ್ದವಾಗಿದ್ದು ಬಾಲ ಗಿಡ್ಡದಾಗಿರುತ್ತದೆ. ಇವು ೧ ರಿಂದ ೧½ ವರ್ಷ ವಯಸ್ಸಿನ ಅವಧಿಯೊಳಗೆ ಮರಿ ಹಾಕುತ್ತವೆ. ಎರಡು ವರ್ಷಕ್ಕೆ ದೇಹದ ಬೆಳವಣಿಗೆ ಸಂಪೂರ್ಣ ವಾಗುತ್ತದೆ. ಇವು ತಮ್ಮ ಮೂಲ (ಸ್ವಂತ) ಸ್ಥಳಗಳಲ್ಲಿ ಮಾತ್ರ ಚೆನ್ನಾಗಿ ಬೆಳೆವಣಿಗೆ ಯಾಗುತ್ತವೆ. ಒಂದು ವೇಳೆ ಬಳ್ಳಾರಿ ಸುತ್ತಮುತ್ತಲಿನ ಜಿಲ್ಲೆಗಳನ್ನು ಬಿಟ್ಟು ಬೇರೆ ಸ್ಥಳಗಳಲ್ಲಿ ಸಂಗೋಪನೆ ಮಾಡಿದರೆ ಇವುಗಳ ಬೆಳವಣಿಗೆ ಅಷ್ಟು ಸಮಂಜಸವಾಗಿ ನಡೆದಿರುವುದು ಕಂಡುಬಂದಿಲ್ಲ.

ಉತ್ಪಾದನೆ : ಇದು ಕೂಡ ಉಣ್ಣೆ ಮತ್ತು ಮಾಂಸ ನೀಡುವ ದ್ವಿ-ಉಪಯೋಗಿ ತಳಿಯಾಗಿದೆ. "ಸಾಮಾನ್ಯವಾಗಿ ವರ್ಷಕ್ಕೆ ಎರಡು ಸಲದಂತೆ ಜೂನ್ ಮತ್ತು ಡಿಸೆಂಬರ್ ತಿಂಗಳುಗಳಲ್ಲಿ ಉಣ್ಣೆ ದೊರಕುತ್ತದೆ. ಜೂನ್ ತಿಂಗಳಲ್ಲಿ ಕತ್ತರಿಸುವ ಉಣ್ಣೆಯ ಪ್ರಮಾಣ ಹೆಚ್ಚು ಉದ್ದವಾಗಿರುತ್ತದೆ. ಈ ಅವಧಿಯಲ್ಲಿ ಕುರಿಗಳಿಗೆ ರೋಗ-ರುಜಿನಗಳು ಕಡಿಮೆ ಇರುವುದರ ಜೊತೆಗೆ ಮೇವು ಹೆಚ್ಚು ದೊರೆಯುವುದರಿಂದ ಉಣ್ಣೆ ಹುಲುಸಾಗಿ ಬೆಳೆಯುತ್ತದೆ" (ಮಾಹಿತಿದಾರ: ಲಿಂಗಪ್ಪ ಸಾವಿರಕುರಿ). ಇವು ವಾರ್ಷಿಕವಾಗಿ ೦.೬ ಕೆ.ಜಿ.ಯಿಂದ ೦.೭ ಕೆ.ಜಿ.ಯವರೆಗೆ ಉಣ್ಣೆ ನೀಡುತ್ತವೆ. ಈ ತಳಿಯಿಂದ ಬರುವ ಉಣ್ಣೆಯು ಒರಟಾಗಿದ್ದು ಕಡಿಮೆ ದರ್ಜೆಯದಾಗಿದೆ. ಇಂತಹ ಉಣ್ಣೆಯಿಂದ ಒರಟು ಕಂಬಳಿಗಳನ್ನು ಮಾತ್ರ ಮಾಡಲು ಉಪಯೋಗಿಸಲಾಗುತ್ತದೆ. ವಯಸ್ಕ ಟಗರಿನ ತೂಕ ೩೫ ಕೆ.ಜಿ.ಯಿಂದ ೪೦ ಕೆ.ಜಿಯಷ್ಟಿದ್ದರೆ, ಕುರಿಯ ತೂಕ ೨೮ ರಿಂದ ೩೫ ಕೆ.ಜಿ.ಯವರೆಗೆ ಇರುತ್ತದೆ. ಚರ್ಮ ಸುಲಿದ ಮಾಂಸದ ತೂಕ (ಡ್ರೆಸ್ಡ್ ಕ್ಯಾರಕಸ್) ಶೇ. ೪೦ ರಿಂದ ೪೫ ರಷ್ಟು ಇರುತ್ತದೆ. ಮಾಂಸವು ಮಧ್ಯಮ ದರ್ಜೆಯದಾಗಿದ್ದು ತಿನ್ನಲು ಅಷ್ಟೇನು ರುಚಿಯಾಗಿರುವುದಿಲ್ಲ.

ತುಂಗಭದ್ರ ಅಣೆಕಟ್ಟೆಯ ನೀರಾವರಿ ಸೌಲಭ್ಯ ಪಡೆದ ಭೂಪ್ರದೇಶದಲ್ಲಿ ಅಲೆದಾಡುವ ಅಲೆಮಾರಿ ಕುರುಬರು ಈ ತಳಿಯನ್ನು ಸಾಕುತ್ತಾರೆ. ಕಾರಣ ಈ ತಳಿ ಬಳ್ಳಾರಿ ವಾತಾವರಣಕ್ಕೆ ಹೊಂದಿಕೊಂಡಿದೆ. ಇದರ ಕಾಲುಗಳು ಉದ್ದವಾಗಿದ್ದು ಮೈಲುಗಟ್ಟಲೆ ಆಯಾಸವಾಗದಂತೆ ಆಹಾರ ಕ್ಕೋಸ್ಕರ ಅಲೆದಾಡುತ್ತವೆ. ಹಾಗೆಯೇ ಸ್ವಲ್ಪ ಒರಟು ಸ್ವಭಾವದವಾಗಿರುವುದರಿಂದ ಬೆಟ್ಟಗುಡ್ಡ ಏರಿ ಆಹಾರ ಹುಡುಕಲು ಕಷ್ಟ ಪಡಲಾರವು. ಆದ್ದರಿಂದ ಈ ತಳಿಯನ್ನು ಸಾಕುತ್ತಾರೆ.

**ಹಾಸನ ತಳಿ (Hasan)**

**ಮೂಲಸ್ಥಳ ಮತ್ತು ಹಂಚಿಕೆ :** ಈ ತಳಿಯ ಮೂಲಸ್ಥಳ ಹಾಸನ ಜಿಲ್ಲೆಯಾದ್ದರಿಂದ

ಸದರಿ ಜಿಲ್ಲೆಯ ಹೆಸರಿನಿಂದ ಕರೆಯುಲಾಗುತ್ತದೆ. ಇವು ಹಾಸನ ಜಿಲ್ಲೆಯಾದ್ಯಂತ, ಚಿಕ್ಕಮಗಳೂರು ಜಿಲ್ಲೆಯ ಕಡೂರು ತಾಲೂಕು, ಮಂಡ್ಯ ಹಾಗೂ ತುಮಕೂರು ಜಿಲ್ಲೆಯ ಗಡಿ ಪ್ರದೇಶಗಳಲ್ಲಿ ಕಂಡುಬರುತ್ತವೆ.

**ಲಕ್ಷಣಗಳು :** ಈ ತಳಿಯು ಮೈಕಟ್ಟು ಮತ್ತು ಆಕಾರದಲ್ಲಿ ಬಹುಮಟ್ಟಿಗೆ ಡೆಕ್ಕನಿ ಮತ್ತು ಬಳ್ಳಾರಿ ತಳಿಗಳನ್ನು ಹೊಲುತ್ತದೆ. ಆದರೆ ಮೈ-ಬಣ್ಣ ಮಾತ್ರ ಬನ್ನೂರು ತಳಿಯನ್ನು ಹೋಲುತ್ತದೆ. ಸಾಮಾನ್ಯವಾಗಿ ಈ ಕುರಿಗಳು ಬಿಳಿ ಮತ್ತು ಕಂದು ಮಿಶ್ರಿತ ಬಣ್ಣದ್ದಾಗಿವೆ. ಕೆಲವು ಕಪ್ಪು ಮಿಶ್ರಿತ ಬಿಳಿ ಕುರಿಗಳು ಸಹ ವಿರಳವಾಗಿ ಕಂಡುಬರುತ್ತವೆ. ಈ ತಳಿಗೆ ಜೋಲು ಕಿವಿ ಹಾಗೂ ರೋಮನ್ ಮೂಗಿದೆ. ಇದನ್ನು ಡೆಕ್ಕನಿ ಮತ್ತು ಬನ್ನೂರು ತಳಿಗಳಿಗೆ ಹೋಲಿಸಿದರೆ ಮಧ್ಯಮ ಗಾತ್ರದಾಗಿರುವುದು.

**ಉತ್ಪಾದನೆ :** ಇದು ಮಾಂಸದ ತಳಿಯಾಗಿದೆ. ವರ್ಷದಲ್ಲಿ ಎರಡು ಸಲ ಉಣ್ಣೆಯನ್ನು ಕತ್ತರಿಸಲಾಗುತ್ತದೆ. ವಾರ್ಷಿಕ ಸರಾಸರಿಯಾಗಿ ೦.೬ ಕೆ.ಜಿ.ಯಿಂದ ೦.೭ ಕೆ.ಜಿ.ಯವರೆಗೆ ಉಣ್ಣೆ ದೊರೆಯುತ್ತದೆ. ಈ ತಳಿಯ ಉಣ್ಣೆಯು ತುಂಬಾ ಒರಟಾಗಿದ್ದು ಒರಟು ಕಂಬಳಿ ಮತ್ತು ಒರಟು ಉಣ್ಣೆ ಬಟ್ಟೆಗಳನ್ನು ತಯಾರಿಸಲು ಮಾತ್ರ ಉಪಯೋಗಿಸಲು ಸಾಧ್ಯ. ವಯಸ್ಕ ಟಗರು ೨೫-೩೫ ಕೆ.ಜಿ. ಮತ್ತು ಕುರಿ ೨೦-೨೬ ಕೆ.ಜಿ. ತೂಕವಿರುತ್ತದೆ. ಚರ್ಮ ಸುಲಿದು ಹೊಲಸು ತೆಗೆದ ಮೇಲೆ ಮಾಂಸದ ತೂಕ ಶೇ. ೪೦ರಷ್ಟು ಬರುತ್ತದೆ. ಈ ತಳಿಯ ಮರಿಗಳು ಶೀಘ್ರವಾಗಿ ಬೆಳೆಯುವುದರಿಂದ ಮರಿಗಳನ್ನು ಸಾಕಿ ಮಾಂಸಕ್ಕೆ ಮಾರಾಟ ಮಾಡುವುದು ಕೆಲವರಿಗೆ ಪ್ರಮುಖ ಉದ್ಯೋಗವಾಗಿದೆ. ಈ ತರಹದ ತಳಿಗಳನ್ನು ಸಾಕಲು ಅಲೆಮಾರಿ ಕುರುಬರು ಪ್ರಯತ್ನಿಸಿದ್ದಾರೆ. ಆದರೆ ಅವುಗಳ ದೈಹಿಕ ಅಭಿವೃದ್ಧಿ ಕುಂಠಿತವಾಗುವುದರ ಜೊತೆಗೆ ತಮ್ಮ ಕುರಿಗಳೊಂದಿಗೆ ಕೂಡಿಕೊಂಡು ಮೇಯದೆ ದೂರ ಉಳಿಯುವುದರಿಂದ ಇದರ ಸಾಕಣೆ ಮಾಡುವುದನ್ನು ಕೈ ಬಿಟ್ಟಿದ್ದಾರೆ.

**ಬನ್ನೂರು ತಳಿ (Bannuru)**

**ಮೂಲಸ್ಥಳ ಮತ್ತು ಹಂಚಿಕೆ :** ಈ ತಳಿಯ ಮೂಲಸ್ಥಳ ಮಂಡ್ಯ ಜಿಲ್ಲೆಯ ಮಳವಳ್ಳಿ ತಾಲೂಕಿನ ಬನ್ನೂರು ಎಂಬ ಗ್ರಾಮ. ಈ ತಳಿಯನ್ನು 'ಬನ್ನೂರು' ಅಥವಾ 'ಬಂಡೂರು' ಕುರಿ ಎಂದು ಸಹ ಕರೆಯುಲಾಗುತ್ತದೆ. ಇವು ಮಂಡ್ಯ, ಮೈಸೂರು, ಚಾಮರಾಜನಗರ, ಕೋಲಾರ, ತುಮಕೂರು, ಬೆಂಗಳೂರು ಗ್ರಾಮಾಂತರ ಮತ್ತು ಬೆಂಗಳೂರು ನಗರ ಜಿಲ್ಲೆಯ ಕೆಲವು ಭಾಗಗಳಲ್ಲಿ ಹೆಚ್ಚಾಗಿ ಕಂಡುಬರುತ್ತವೆ.

**ಲಕ್ಷಣಗಳು :** ಈ ತಳಿಯ ಕುರಿಗಳು ಮಾಸಲು ಬಿಳಿ ಬಣ್ಣದವು. ಆದರೆ ಮೈಬಣ್ಣ, ತಲೆ ಹಾಗೂ ಕತ್ತಿನ ಭಾಗ ಕಂದು ಬಣ್ಣವನ್ನು ಹೊಂದಿರುತ್ತದೆ. ವಿಶಾಲವಾದ ಎದೆಯಿಂದ ಕೂಡಿದ್ದು ಗಡುವಾದ ಕತ್ತನ್ನು ಹೊಂದಿರುತ್ತದೆ. ಕತ್ತಿನ ಕೆಳಗೆ ಕೊರಳಲ್ಲಿ ಕೂದಲಿನಿಂದ ಕೂಡಿದ ಮೊಲೆಗಳ ಆಕಾರದಲ್ಲಿ ಎರಡು ತುಂಡುಗಳು ನೇತಾಡುತ್ತಿರುತ್ತವೆ. ಇವಕ್ಕೆ ಟಸಲ್ಸ್ ಎಂದು ಕರೆಯುತ್ತಾರೆ. ಮೂಗು ಉಬ್ಬಿಕೊಂಡು ಎದ್ದು ಕಾಣು ತ್ತಿದ್ದರೆ, ಕಿವಿಗಳು ಎಲೆಯಾ

ಕಾರದಲ್ಲಿ ಚೋತಾಡುತ್ತಿರುತ್ತವೆ. ಬಾಲವು ತೆಳ್ಳಗೆ ಬಹಳ ಸಣ್ಣದಾಗಿರುತ್ತದೆ. ಇದು ಬಳ್ಳಾರಿ ಕುರಿಗಳಂತೆ ಎತ್ತರವಾಗಿ ಬೆಳೆಯುವುದಿಲ್ಲ. ಕಾಲುಗಳು ಗಿಡ್ಡಗೆ ಗಡುತರವಾಗಿರುತ್ತವೆ. ಹಾಗಾಗಿ ಇವು ಎತ್ತರಕ್ಕಿಂತಲೂ ಉದ್ದವಾಗಿ ಬೀಸಾಗಿರುತ್ತವೆ. ಇಂತಹ ಉತ್ತಮ ಆಕಾರದ ಕುರಿಗಳನ್ನು ಆರಿಸಿ ಕುರಿ ಹಿಂಡನ್ನು ಬೆಳೆಸುವುದು ಈ ಪ್ರದೇಶದ ಕುರುಬರ ವೈಶಿಷ್ಟ್ಯವಾಗಿದೆ. ಬನ್ನೂರು ಜಾತಿಯ ಕುರಿಗಳು ಇಂದಿಗೂ ತಮ್ಮದೇ ಆದ ವಿಶಿಷ್ಟ ಗುಣಗಳನ್ನು ಉಳಿಸಿ ಕೊಂಡು ಕಾಪಾಡಿಕೊಂಡು ಬಂದಿವೆ. ಈ ತಳಿಯ ಟಗರುಗಳಿಗೆ ಕೊಂಬಿರುವುದಿಲ್ಲ. ಒಂದು ವೇಳೆ ಟಗರಿಗೆ ಕೊಂಬಿದ್ದು ಸಣ್ಣ ಕಿವಿಗಳಿದ್ದಲ್ಲಿ ಆ ಟಗರು ಶುದ್ಧ ಬನ್ನೂರು ತಳಿಯ ಟಗರಲ್ಲವೆಂದು ಹೇಳಲಾಗುತ್ತದೆ.

**ಉತ್ಪಾದನೆ :** ಈ ತಳಿಯ ಕುರಿಗಳಿಂದ ಉತ್ತಮ ಮಟ್ಟದ ಉಣ್ಣೆ ದೊರೆಯುವುದಿಲ್ಲ. ಇವುಗಳ ಶರೀರದ ಮೇಲೆ ಆಡಿನ ಮೈಮೇಲೆ ಬೆಳೆಯುವಂತೆ ಕೂದಲು ಬೆಳೆಯುತ್ತವೆ. ಉಣ್ಣೆ ಕೆಳಮಟ್ಟದ್ದಾಗಿದ್ದು ಕಂಬಳಿ ತಯಾರಿಸಲು ಯೋಗ್ಯವಾಗಿರುವುದಿಲ್ಲ. ಆದರೂ ಸ್ಥಳೀಯವಾಗಿ ಕಂಬಳಿ ತಯಾರಿಸಲಾಗುತ್ತದೆ. ವಯಸ್ಕ ಹೆಣ್ಣು ಕುರಿ ೩೦-೩೫ ಕೆ.ಜಿ. ತೂಕವಿದ್ದರೆ, ಟಗರು ೪೫ ಕೆ.ಜಿ. ತೂಗುವುದುಂಟು. ಕೆಲವು ಟಗರುಗಳು ೬೦ ಕೆ.ಜಿ.ಯವರೆಗೆ ತೂಗಿದ ಉದಾಹರಣೆಗಳಿವೆ.

"ಬನ್ನೂರು ಜಾತಿಯ ಕುರಿಗಳು ಮಾಂಸಕ್ಕಾಗಿ ಪ್ರಸಿದ್ಧವಾದ ಕುರಿಗಳು. ಇಂಗ್ಲೆಂಡಿನಲ್ಲಿ "ಬ್ರಿಟೀಷ್ ಸೌತ್ ಡಾನ್" ಕುರಿಗಳು ಮಾಂಸಕ್ಕೆ ಪ್ರಸಿದ್ಧವಾಗಿರುವ ಹಾಗೆ ಬಂಡೂರು ತಳಿ ಕುರಿಗಳು ದಕ್ಷಿಣ ಭಾರತದಲ್ಲಿ ಮಾಂಸಕ್ಕಾಗಿ ಹೆಸರಾಗಿವೆ. ಇವನ್ನು "ಇಂಡಿಯಾನ್ ಸೌತ್ ಡಾನ್" ಕುರಿಗಳೆಂದು ಕರೆಯುವುದು ವಾಡಿಕೆಯಾಗಿದೆ" (ರಾಮರಾವ್ ಜ್ಯೋತಿ: ೧೯೫೩: ೪೭). ಈ ತಳಿಯ ಮಾಂಸವು ಎಳೆಗಳ ಮಧ್ಯೆ ಕೊಬ್ಬು ತುಂಬಿಕೊಂಡಿರುವುದರಿಂದ ಮಾಂಸವು ಮೃದುವಾಗಿದ್ದು ಹುಲುಸಾಗಿರುತ್ತದೆ. ಇದನ್ನು ಬೇಯಿಸಿದಾಗ ಒಂದು ರೀತಿಯ ಸುವಾಸನೆ ಮತ್ತು ರಸಭರಿತ ಉಂಟಾಗಿ ತಿನ್ನಲು ತುಂಬಾ ರುಚಿಯಾಗಿರುತ್ತದೆ. ಈ ವಿಷಯದಲ್ಲಿ ಈ ಕುರಿಯನ್ನು ಇತರ ತಳಿಯ ಕುರಿಗಳು ಸರಿಗಟ್ಟಲಾರವು. ಆಕಾರದಲ್ಲಿ ಇವು ಮೈ ತುಂಬಿ ಕೊಂಡಿದ್ದು ಕೊಬ್ಬು ಬೆಳೆದಿರುತ್ತದೆ. ಸಂತೆಯಲ್ಲಿ ಕೊಳ್ಳುವವರು ಸಾಮಾನ್ಯವಾಗಿ ಕುರಿಗಳ ಸೊಂಟದ ಭಾಗವನ್ನು, ತೊಡೆಗಳ ಹಾಗೂ ತೋಳುಗಳ ಭಾಗವನ್ನು ಒತ್ತಿನೋಡಿ ಇದರ ಮಾಂಸದ ಪ್ರಮಾಣವನ್ನು ತಿಳಿಯುತ್ತಾರೆ.

ಈ ತಳಿಯ ಕುರಿಗಳನ್ನು ಹಿಂಡು ಕಟ್ಟಿಕೊಂಡು ಮೇವು, ನೀರು ಹುಡುಕುತ್ತ ಮತ್ತು ಮೇಯಿಸುತ್ತ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಅಲೆದಾಡುತ್ತ ಹೋಗುವುದಿಲ್ಲ. ಇದ್ದ ಊರಿನಲ್ಲಿಯೇ, ತಮ್ಮ ಮನೆಗಳಲ್ಲಿ ಸಾಕಿ ಬೆಳೆಸುತ್ತಾರೆ. ಮೇವಿನ ಜೊತೆಗೆ ಕೈ ತಿಂಡಿಗಳಾದ ಕಾಳಿನ ಮಿಶ್ರಣ ಅಂದರೆ ಹುರುಳಿಯ ನುಚ್ಚು, ಜೋಳ, ಸಜ್ಜೆ, ರಾಗಿಯ ಒಡಕು, ಹಿಂಡಿ ಮತ್ತು ತೌಡು ಇತ್ಯಾದಿಗಳನ್ನು ಸೇರಿಸಿ ತಿನ್ನಿಸಲಾಗುತ್ತದೆ. ಗಂಡು ಮರಿಗಳಿಗೆ ಎಂಟು ವಾರದೊಳಗೆ ಕಸಿ ಮಾಡಲಾಗುತ್ತದೆ. ದೊಡ್ಡದಾಗುವವರೆಗೆ ೪ ರಿಂದ

೬ ತಿಂಗಳು ಕಾಲ ಕೈ ತಿಂಡಿಯನ್ನು ಕೊಟ್ಟು ಅವುಗಳಿಗೆ ಬೆಳೆಸುತ್ತಾರೆ. ಈ ಅವಧಿ ೧೪-೧೬ ಕೆ.ಜಿ. ತೂಕ ಪಡೆಯುತ್ತವೆ. ಹೆಣ್ಣು ಕುರಿಗಳು ಮೂರು ಮರಿಗಳನ್ನು (ಮೂರು ಸೂಲು ಈಯ್ದು) ಹಾಕಿದ ನಂತರ ಮಾಂಸಕ್ಕಾಗಿ ಮಾರಿ ಬಿಡುತ್ತಾರೆ. ಇತ್ತೀಚಿನ ದಿನಗಳಲ್ಲಿ ಈ ತಳಿಯ ಕುರಿಗಳನ್ನು ಭಾರತದ ಇತರ ಪ್ರಾಂತ್ಯಗಳಿಗೆ ಕೊಂಡೊಯ್ದು ಅಲ್ಲಿಯ ಸ್ಥಳೀಯ ಕುರಿಗಳೊಂದಿಗೆ ಸಂಕರಣಗೊಳಿಸಿ ಮಿಶ್ರತಳಿಯನ್ನು ಅಭಿವೃದ್ಧಿಪಡಿಸಲಾಗಿದೆ. ಅವುಗಳಲ್ಲಿ ಬನ್ನೂರು ತಳಿಯ ಮಾಂಸದ ಗುಣವನ್ನು ಸೇರಿಸಲು ಪ್ರಯತ್ನಿಸಲಾಗಿದೆ.

**ಕೆಂಗುರಿ ತಳಿ (Kenguri)**

**ಮೂಲಸ್ಥಳ ಮತ್ತು ವಿಂಗಡಣೆ :** ಈ ತಳಿಯ ಬಣ್ಣ ಕೆಂಪು ಅಥವಾ ಮಾಸಲು ಕೆಂಪು. ಇದು ಹೊಂದಿರುವ ಬಣ್ಣದ ಆಧಾರದ ಮೇಲೆ 'ಕೆಂಗುರಿ' ಎಂದು ಕರೆಯಲಾಗುತ್ತದೆ. ಈ ತಳಿಯನ್ನು ಬಿಜಾಪುರ, ಗುಲಬರ್ಗಾ ಹಾಗೂ ರಾಯಚೂರು ಜಿಲ್ಲೆಗಳಲ್ಲಿ ಹೆಚ್ಚಾಗಿ ಸಾಕಣೆ ಮಾಡಲಾಗುತ್ತದೆ. ಇತ್ತೀಚಿನ ದಿನಗಳಲ್ಲಿ ಬಳ್ಳಾರಿ ಮತ್ತು ಕೊಪ್ಪಳ ಜಿಲ್ಲೆಗಳಲ್ಲಿ ಕೂಡ ಸಾಕುತ್ತಿರುವುದು ಕಂಡುಬರುತ್ತಿದೆ.

**ಲಕ್ಷಣಗಳು :** ಈ ಕುರಿಯ ಡೆಕ್ಕನಿ ಕುರಿಗಿಂತ ದೊಡ್ಡದಾಗಿರುತ್ತದೆ. ಬಾಲ ಚಿಕ್ಕದಾಗಿದ್ದು ಕುರಿ ತಳ್ಳಗೆ ಉದ್ದವಾಗಿರುತ್ತದೆ.

**ಉತ್ಪಾದನೆ :** ಈ ಕುರಿಯು ಉಣ್ಣೆಯನ್ನು ವರ್ಷಕ್ಕೆ ಎರಡು ಬಾರಿ ಕತ್ತರಿಸಲಾಗುತ್ತದೆ. ವಾರ್ಷಿಕ ಸರಾಸರಿಯೂ ೦.೬ ಕೆ.ಜಿ ಯಿಂದ ೦.೮ ಕೆ.ಜಿಯವರೆಗೆ ಉಣ್ಣೆಯನ್ನು ಪಡೆಯಲಾಗುತ್ತದೆ. ವಯಸ್ಕ ಟಗರು ೩೫-೪೫ ಕೆ.ಜಿ ತೂಗಿದರೆ ಕುರಿಯು ೩೦-೩೫ ಕೆ.ಜಿ ತೂಗುತ್ತದೆ. ಇತ್ತೀಚಿನ ದಿನಗಳಲ್ಲಿ ಈ ತಳಿಯು ಮಾಂಸಕ್ಕೆ ಹೆಸರು ಪಡೆದಿದೆ. ಈ ಕುರಿಗಳು 'ಡೆಕ್ಕನಿ' ಮತ್ತು ಬಳ್ಳಾರಿ ತಳಿಗಳಿಗಿಂತ ಹೆಚ್ಚಿನ ಬೆಲೆಗೆ ಮಾರಾಟವಾಗುತ್ತವೆ.

**ಯು.ಎ.ಎಸ್. ತಳಿ**

**ಮೂಲಸ್ಥಳ ಮತ್ತು ಹಂಚಿಕೆ :** ೧೯೮೩ರಲ್ಲಿ ಬೆಂಗಳೂರು ಕೃಷಿ ವಿಶ್ವವಿದ್ಯಾಲಯ ಈ ತಳಿಯನ್ನು ತ್ರಿಜಾತಿ ಸಕರಣದಿಂದ ಅಭಿವೃದ್ಧಿಪಡಿಸಿದೆ. ಈ ತಳಿಯಲ್ಲಿ ಬನ್ನೂರು (ಶೇ. ೨೫) ಸೌತ್‌ಡಾನ್ ವಿದೇಶಿ ಕುರಿ ತಳಿ (ಶೇ. ೨೫) ಮತ್ತು ಡೆಕ್ಕನಿ (ಶೇ. ೫೦) ಅನುವಂಶಿಯ ಗುಣಗಳು ಅಡಕವಾಗಿವೆ. ಈ ತಳಿಯನ್ನು ಬೆಂಗಳೂರು ಸುತ್ತಮುತ್ತಲಿನ ಭಾಗದಲ್ಲಿ ಸಾಕಲಾಗುತ್ತದೆ.

**ಲಕ್ಷಣಗಳು :** ಇವು ಮಧ್ಯಮ ದೇಹಗಾತ್ರ ಮತ್ತು ಗಿಡ್ಡಕಾಲು ಹೊಂದಿವೆ. ಎದೆಯು ಉಬ್ಬಿಕೊಂಡು ಅಗಲವಾಗಿರುತ್ತದೆ. ಮೈಬಣ್ಣ ಮಾಸಲು ಬಿಳಿಬಣ್ಣದ್ದಾಗಿದೆ. ಈ ಕುರಿಗಳು ಶೀಘ್ರವಾಗಿ ಬೆಳೆಯುತ್ತವೆ. ಹುಲ್ಲುಗಾವಲುಗಳಲ್ಲಿ ಮೇಯ್ದರೆ ಆರು ತಿಂಗಳ ಅವಧಿಯಲ್ಲಿ ೧೬ ರಿಂದ ೨೦ ಕೆ.ಜಿ. ತೂಗುತ್ತವೆ.

**ಉತ್ಪಾದನೆ :** ವರ್ಷದಲ್ಲಿ ಎರಡು ಸಲ ಉಣ್ಣೆಯನ್ನು ಕತ್ತರಿಸಲಾಗುತ್ತದೆ. ವಾರ್ಷಿಕ ಸರಾಸರಿ ೦.೭ ರಿಂದ ೧.೦೦ ಕೆ.ಜಿ.ಯವರೆಗೆ ಉಣ್ಣೆ ದೊರಕುತ್ತದೆ. ಉಣ್ಣೆಯ ಎಳೆ ಹೆಚ್ಚು

ಉದ್ದವಾಗಿದ್ದು ಉಬ್ಬು-ತಗ್ಗುಗಳಿಂದ ಕೂಡಿರುತ್ತದೆ. ಈ ಉಣ್ಣೆಯು ಡೆಕ್ಕನಿ ತಳಿ ಉಣ್ಣೆಗಿಂತ ಉತ್ತಮವಾಗಿದ್ದು ಒಳ್ಳೆಯ ಗುಣಮಟ್ಟದ ಉಡುಪು ತಯಾರಿಸಲು ಅನುಕೂಲವಾಗಿದೆ. ಪ್ರೌಢಾವಸ್ಥೆಯ ಟಗರು ೪೫ ರಿಂದ ೫೦ ಕೆ.ಜಿ. ತೂಕವಿದ್ದರೆ, ಕುರಿಯು ೪೦-೪೫ ಕೆ.ಜಿ. ತೂಗುತ್ತದೆ. ಇದರಿಂದ ಉತ್ತಮ ಮಟ್ಟದ ರುಚಿಯಾದ ಮಾಂಸ ಸಿಗುತ್ತದೆ. ಮಾಂಸದ ಇಳುವರಿ ಶೇ. ೪೫ ರಿಂದ ೪೮ ರಷ್ಟು ಬರುತ್ತದೆ. ೧೦-೧೫ ತಿಂಗಳ ಅವಧಿಯಲ್ಲಿ ಪ್ರಾಯಕ್ಕೆ ಬಂದು ೧೫ ರಿಂದ ೨೦ ತಿಂಗಳಲ್ಲಿ ಮೊದಲ ಬಾರಿ ಮರಿ ಹಾಕುತ್ತದೆ. ಎರಡು ವರ್ಷಗಳಲ್ಲಿ ಮೂರು ಬಾರಿ ಮರಿ ಪಡೆಯಬಹುದಾಗಿದೆ.

## ಗುಡಾರ ಬದಲಾಯಿಸುವ ವಿಧಾನ

ಇವರು ಯಾವುದೇ ಒಂದು ನಿರ್ದಿಷ್ಟ ಭೂ ಪ್ರದೇಶದಲ್ಲಿ ಗುಡಾರ ಹೂಡಿ ಜೀವನ ಸಾಗಿಸುವುದಿಲ್ಲ. ತಮ್ಮ ಬದುಕು(ಕುರಿ)ಗಳಿಗೆ ಮೇವು-ನೀರು ಹುಡುಕಿಕೊಂಡು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗುತ್ತ ತಾತ್ಕಾಲಿಕವಾಗಿ ಹೂಡಿದ ಗುಡಾರಗಳನ್ನು ಬದಲಾಯಿ ಸುವುದು ಕಾಣಬಹುದು. ತಮ್ಮ ಬದುಕು(ಕುರಿ)ಗಳಿಗೆ ಮೇವು-ನೀರು ದೊರೆಯುವವರೆಗೆ ಅಲ್ಲಿದ್ದು, ಮೇವು-ನೀರು ಖಾಲಿಯಾಗುತ್ತಿದ್ದಂತೆ ಮುಂದೆ ಯಾವ ಪ್ರದೇಶದಲ್ಲಿ ಮೇವು-ನೀರು ದೊರೆಯುತ್ತದೆಯೋ ಆ ಪ್ರದೇಶಕ್ಕೆ ಗುಡಾರವನ್ನು ವರ್ಗಾಯಿಸುವುದು ಸಾಮಾನ್ಯವಾಗಿದೆ. ಮಳೆಗಾಲದ ಅವಧಿಯಲ್ಲಿ ಗುಡ್ಡಗಾಡು ಪ್ರದೇಶದಲ್ಲಿ ಗುಡಾರ ಹೂಡಿ ಕುರಿ ಸಂಗೋಪನೆ ಮಾಡಿದರೆ, ಮಳೆಗಾಲದ ನಂತರ ಮತ್ತೆ ಹೊಲ-ಗದ್ದೆಗಳ ಕಡೆ ವಲಸೆ ಬಂದು ಮೇವು-ನೀರು ಸಿಗುವ ಹೊಲ-ಗದ್ದೆಗಳಲ್ಲಿ ಅಲೆದಾಡುತ್ತಾ ಕುರಿ ಸಂಗೋಪನೆ ಮಾಡಲಾಗುತ್ತದೆ.

ಗುಡಾರ ಬದಲಾಯಿಸುವಿಕೆಯು ಋತುಮಾನದಿಂದ ಋತುಮಾನಕ್ಕೆ ಭಿನ್ನವಾಗಿರುತ್ತದೆ. ಒಂದು ಋತುಮಾನದಿಂದ ಮತ್ತೊಂದು ಋತುಮಾನಕ್ಕೆ (ಬೇಸಿಗೆಯ ಕಾಲದಿಂದ ಮಳೆಗಾಲಕ್ಕೆ) ಬದಲಾಯಿಸುವಾಗ ಗುಡಾರ ಬದಲಾಯಿಸುವ ಭೂ-ಪ್ರದೇಶದ ಅಂತರ ದೂರವಾಗಿರುತ್ತದೆ. ಒಂದೇ ಋತುಮಾನ ದಲ್ಲಿ ಗುಡಾರ ಬದಲಾಯಿಸುವಾಗ, ಬದಲಾಯಿಸುವ ಗುಡಾರದ ಅಂತರ ಕಡಿಮೆ ಇರುತ್ತದೆ. ಋತುಮಾನದಿಂದ ಋತುಮಾನಕ್ಕೆ ಬದಲಾಯಿಸುವಾಗ ಒಂದು ತಾಲೂಕಿನ ಭೂಪ್ರದೇಶದಿಂದ ಪಕ್ಕದ ತಾಲೂಕಿನ ಅಥವಾ ಬೇರೊಂದು ಜಿಲ್ಲೆಯ ಅಥವಾ ಪಕ್ಕದ ರಾಜ್ಯದ ವ್ಯಾಪ್ತಿಗೊಳಪಟ್ಟ ಭೂಪ್ರದೇಶಕ್ಕೆ ವರ್ಗಾವಣೆಯಾಗುತ್ತಿರುತ್ತದೆ. ಈ ರೀತಿಯ ವರ್ಗಾವಣೆಯು ಮಳೆಗಾಲದಲ್ಲಿ ಗುಡ್ಡಗಾಡು ಪ್ರದೇಶಕ್ಕೆ ಮತ್ತು ಮಳೆಗಾಲದ ನಂತರ ನೀರಾವರಿ ಅಥವಾ ಬಯಲು ಪ್ರದೇಶದ ಕಡೆ ಗುಡಾರ ಬದಲಾಗು ತ್ತಿರುತ್ತದೆ. ಗುಡ್ಡಗಾಡು ಪ್ರದೇಶದಿಂದ ನೀರಾವರಿ ಅಥವಾ ಬಯಲು ಪ್ರದೇಶದ ಕಡೆ ಬದಲಾಯಿಸುವಾಗ ಅಥವಾ ನೀರಾವರಿ ಪ್ರದೇಶದಿಂದ ಗುಡ್ಡಗಾಡು ಪ್ರದೇಶಕ್ಕೆ ಬದಲಾಯಿಸುವಾಗ ಒಂದೇ ದಿನದಲ್ಲಿ ಗುಡಾರ ವರ್ಗಾವಣೆ ಸಾಧ್ಯವಾಗುವುದಿಲ್ಲ. ಈ ಸಮಯದಲ್ಲಿ ಪ್ರತಿದಿನ ೨೦ ರಿಂದ ೨೫ ಕಿ.ಮೀ.ವರೆಗೆ ಕುದುರೆಗಳ ಮೇಲೆ ತಮ್ಮ

ದಿನನಿತ್ಯ ಬಳಕೆಯ ಸಾಮಾನುಗಳನ್ನು ಹೇರಿಕೊಂಡು ದಾರಿ ಸಾಗಿ ಸಾಯಂಕಾಲವಾದ ಮೇಲೆ ತಾವು ಸಾಗುವ ಹಾದಿಯಲ್ಲಿರುವ ಗ್ರಾಮದ ಹತ್ತಿರ ರಾತ್ರಿ ಗುಡಾರ ಹೂಡುವುದನ್ನು ಕಾಣುತ್ತೇವೆ. ಮರುದಿನ ಆ ಸಾಮಾನುಗಳನ್ನು ಹೇರಿಕೊಂಡು ತಾವು ಯೋಜಿಸಿದ ದಾರಿ ಹಿಡಿದುಕೊಂಡು ಮುನ್ನಡೆಯಲಾಗುತ್ತದೆ. "ಒಂದು ವೇಳೆ ಕುರಿಗಳು ದಾರಿ ನಡೆದು ದಣಿದಿದ್ದರೆ, ತಾವು ರಾತ್ರಿ ಗುಡಾರ ಹೂಡಿದ ಗ್ರಾಮದ ಸುತ್ತಮುತ್ತಲೂ ಬಯಲು ಪ್ರದೇಶವಿದ್ದು, ಕುರಿಗಳಿಗೆ ಮೇವು-ನೀರು ದೊರೆಯುವಂತಿದ್ದು ಹಾಗೂ ಮಳೆಗಾಲವಾದರೆ ವಾತವರಣ ತಿಳಿಯಾಗಿದ್ದಲ್ಲಿ ಒಂದೆರಡು ದಿನ ಗುಡಾರ ಹೂಡಿದ ಸುತ್ತಮುತ್ತಲಿನ ಪ್ರದೇಶದಲ್ಲಿ ಕುರಿಗಳನ್ನು ಮೇಯಿಸಿಕೊಂಡು, ನಂತರ ಗುಡಾರ ಬದಲಾಯಿಸುತ್ತವೆ" (ಮಾಹಿತಿದಾರ: ಖಾನಪ್ಪ ಪೂಜಾರಿ: ಕಡಕಲಾಟ). ಈ ರೀತಿ ಗುಡಾರ ಬದಲಾಯಿಸುವಿಕೆಯು ತಾವು ಯೋಜಿಸಿದ ಪ್ರದೇಶ ಮುಟ್ಟುವವರೆಗೆ ನಡೆಯುವ ನಿರಂತರ ಪ್ರಕ್ರಿಯೆ ಯಾಗಿರುತ್ತದೆ.

ಒಂದೇ ಋತುಮಾನದಲ್ಲಿ ಗುಡಾರ ಬದಲಾಯಿಸುವಾಗ ದೂರದ ಸ್ಥಳಕ್ಕೆ ಬದಲಾಯಿಸದೆ ಒಂದು ಗ್ರಾಮದ ಹೊಲಗದ್ದೆಯಿಂದ ಪಕ್ಕದ ಅಥವಾ ಸಮೀಪದ ಗ್ರಾಮದ ಹೊಲಗದ್ದೆಗಳಿಗೆ ಅಥವಾ ಅದೇ ಗ್ರಾಮದ ಬೇರೊಂದು ಜಮೀನ್ದಾರನ ಹೊಲ-ಗದ್ದೆಗಳಿಗೆ ಬದಲಾಗುತ್ತಿರುತ್ತದೆ. ಈ ಅವಧಿಯಲ್ಲಿ ಬದಲಾಯಿಸುವ ಅಂತರ ಸಾಮಾನ್ಯವಾಗಿ ೧ ರಿಂದ ೧೫ ಕಿ.ಮೀ.ವರೆಗೆ ಇರುತ್ತದೆ.

ಸಂಘಜೀವಿಯಾದ ಮಾನವ ತನ್ನ ಕಷ್ಟ-ಸುಖಗಳನ್ನು ಸಮುದಾಯದಲ್ಲಿ ಹಂಚಿಕೊಂಡು ಬದುಕುವುದು ಸಹಜವಾಗಿದ್ದು, ಅಲೆಮಾರಿ ಕುರುಬನು ಇದರಿಂದ ಹೊರತಾಗಿಲ್ಲ. ಈ ಸಮುದಾಯದ ವ್ಯಕ್ತಿ ಒಬ್ಬಂಟಿಗನಾಗಿ ಅಥವಾ ಕುಟುಂಬದ ಕುರಿಮಂದೆ, ಕುದುರೆ, ನಾಯಿ ಮತ್ತು ತನ್ನ ಸಂಸಾರ ಕಟ್ಟಿಕೊಂಡು ಕುರಿಗಳಿಗೆ ಮೇವು-ನೀರು ಹುಡುಕಿಕೊಂಡು ಅಲೆಯುವುದಿಲ್ಲ. ಅಲೆಮಾರಿ ಕುರುಬರಲ್ಲೇ ತಮಗೆ ಅನುಕೂಲವಾದ ಸಮಾನ ಮನಸ್ಕ ಅಥವಾ ಸಮಾನ ವಯಸ್ಕರಾದ ೩-೪ ವಿಭಕ್ತ ಕುಟುಂಬಗಳು ಒಟ್ಟಾಗಿ ಕುರಿಗಳಿಗೆ ಮೇವಿರುವಲ್ಲಿ ಗುಡಾರ ಹೂಡುವುದು ಮತ್ತು ಮೇವು ಖಾಲಿಯಾದಂತೆಲ್ಲಾ ಗುಡಾರ ಬದಲಾಯಿಸುವುದನ್ನು ಕಾಣುತ್ತೇವೆ. ಅವಿಭಕ್ತ ಕುಟುಂಬ ಬೇರೆ ಕುಟುಂಬಗಳೊಂದಿಗೆ ಸೇರದೆ ಕುಟುಂಬದವರೆಲ್ಲ ಸ್ವತಂತ್ರವಾಗಿ ಒಂದು ಗುಂಪಾಗಿ ಅಲೆದಾಡುವುದು ಕಂಡುಬರುತ್ತದೆ. ಅವಿಭಕ್ತ ಕುಟುಂಬದ ಇಡೀ ಸದಸ್ಯರ ಸಂಖ್ಯೆ ಜಾಸ್ತಿ ಇದ್ದು, ಕುರಿಗಳ ಸಂಖ್ಯೆಯು ಹೆಚ್ಚಿರುತ್ತದೆ. ಆದ್ದರಿಂದ ಬೇರೆ ಕುಟುಂಬದವರನ್ನು ಕೂಡಿಸಿಕೊಳ್ಳುವ ಪ್ರಸಂಗವೇ ಬರುವುದಿಲ್ಲ. ತಮ್ಮ ಕುಟುಂಬದ ಜೊತೆಗೆ ಇನ್ನೊಂದು ಕುಟುಂಬವಿರಲಿ ಎಂಬ ದೃಷ್ಟಿಯಿಂದ ಕುರಿಗಳ ಸಂಖ್ಯೆ ಕಡಿಮೆಯಿರುವ ಕುಟುಂಬವನ್ನು ತಮ್ಮ ಜೊತೆಗಿಟ್ಟುಕೊಳ್ಳುವ ಸಂದರ್ಭಗಳೂ ಉಂಟು. ಉದಾಹರಣೆಗೆ ಬೆಳಗಾವಿ ಜಿಲ್ಲೆ ಚಿಕ್ಕೋಡಿ ತಾಲೂಕು ಸೌಂದಲ ಗ್ರಾಮದ ಅಪ್ಪಣ್ಣಿ ಖಾನಪ್ಪ ಪೂಜಾರಿ ಮತ್ತು ಈತನ ೫ ಜನ ಸಹೋದರರು ಅವಿಭಕ್ತ ಕುಟುಂಬದ ಸದಸ್ಯರು. ಕುರಿ ಸಂಗೋಪನೆಯ ಅವಧಿಯಲ್ಲಿ ಇವರಿಗೆ ಇನ್ನೊಂದು

ಕುಟುಂಬದ ಜೊತೆ ಸೇರಿಸಿಕೊಳ್ಳುವ ಅನಿವಾರ್ಯತೆ ಉಂಟಾಗಿಲ್ಲ. ಈ ಕುಟುಂಬದ ಸದಸ್ಯರ ಸಂಖ್ಯೆ ಹೆಚ್ಚಾಗಿದ್ದು, ತಮ್ಮ ಕುರಿಗಳ ಜೊತೆಗೆ ಬೇರೆಯವರ ಕುರಿಗಳನ್ನು ಸರಿಪಾಲಿಗೆ ಕಾಯುತ್ತಾರೆ. ಸರಿಪಾಲು ಎಂದರೆ ಸಮಪಾಲು ಎಂದರ್ಥ. ಕುರಿಗಳ ಮಾಲಿಕನಿಗೆ ತನ್ನ ಕುರಿಗಳನ್ನು ತಾನೇ ಸಾಕಲು ಅಸಾಧ್ಯವಾದಾಗ ಅಲೆಮಾರಿ ಕುರುಬರಿಗೆ ಅಥವಾ ಇತರೆ ಕುರಿಗಾರರಿಗೆ ಸರಿಪಾಲಿಗೆ ನೀಡಲಾಗುತ್ತದೆ. ಸರಿಪಾಲಿಗೆ ನೀಡಿದ ಕುರಿಗಳು ಜನ್ಮ ನೀಡಿದ ಮರಿಗಳನ್ನು ಮಾಲಿಕ ಮತ್ತು ಅಲೆಮಾರಿ ಕುರುಬನು ವರ್ಷಕ್ಕೊಮ್ಮೆ ಸಮನಾಗಿ ಹಂಚಿ ಕೊಳ್ಳುವ ಏರ್ಪಾಟಿದೆ. ಬಂಡವಾಳದಾರರು ಲಾಭದ ದೃಷ್ಟಿಯನ್ನಿಟ್ಟುಕೊಂಡು ಕುರಿಗಳ ಮೇಲೆ ಬಂಡವಾಳ ಹೂಡಿ ಅಲೆಮಾರಿ ಕುರುಬರಿಗೆ ಕುರಿಸಾಕಣೆ ಮಾಡಲು ಕೊಡುತ್ತಾರೆ.

"ನಾವು ಪರಿಚಯವಿಲ್ಲದ ದೂರದ ಗ್ರಾಮಗಳ ಹೊಲಗದ್ದೆಗಳು ಅಥವಾ ಗುಡ್ಡಗಾಡು ಪ್ರದೇಶಕ್ಕೆ ವಲಸೆ ಹೋಗುವ ಪ್ರದೇಶಗಳಲ್ಲಿ ಕಳ್ಳರ ಕಾಟ, ಕಾಡುಪ್ರಾಣಿಗಳ ಹಾವಳಿ ಇದ್ದಾಗ ೩-೪ ಕುಟುಂಬಗಳು ಸೇರಿ ಗುಂಪಾಗಿ ವಲಸೆ ಹೋಗದೆ ೮-೧೦ ಕುಟುಂಬಗಳು ಸೇರಿ ವಲಸೆ ಹೋಗುತ್ತೇವೆ. ಉದಾಹರಣೆ ಬಳ್ಳಾರಿ ಜಿಲ್ಲೆಯ ವ್ಯಾಪ್ತಿಯಲ್ಲಿ ಅಲೆಯುವವರು ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯ ಆದೋನಿ, ಆಲೂರು, ಮತ್ತು ಪತ್ತಿಕೊಂಡ ತಾಲೂಕುಗಳ ಬಯಲು ಪ್ರದೇಶದ ಕಡೆ ವಲಸೆ ಹೋಗುತ್ತೇವೆ. ಆ ಪ್ರದೇಶದಲ್ಲಿ ಜಾಲಿ ಗಿಡಗಳು ಹೆಚ್ಚಿವೆ ಹಾಗೂ ಜಾಲಿಕಾಯಿ ಕುರಿಗಳಿಗೆ ಇಷ್ಟ ಮತ್ತು ಆರೋಗ್ಯಕರ. ಆದ್ದರಿಂದ ಜಾಲಿಕಾಯಿ ಮೇಯಿಸಲು ಜನವರಿ-ಫೆಬ್ರವರಿ ತಿಂಗಳಿನಲ್ಲಿ ವಲಸೆ ಹೋಗುವೆವು. ಆ ಪ್ರದೇಶದಲ್ಲಿ ಸ್ಥಳೀಯ ಕಳ್ಳರ ಕಾಟ ಹೆಚ್ಚಿರುವುದರಿಂದ ೮-೧೦ ಕುಟುಂಬಗಳು ಸೇರಿಕೊಂಡು ವಲಸೆ ಹೋಗುತ್ತೇವೆ" (ಮಾಹಿತಿದಾರ: ಲಿಂಗಪ್ಪ ಸಾವಿರಕುರಿ:ನವಿಲಿಹಾಳ್). ಇದರಿಂದ ತಿಳಿದುಬರುವುದೇನೆಂದರೆ ಇಂದಿಗೂ ಕುರಿಗಳನ್ನು ಕಳ್ಳತನ ಮಾಡುವವರಿದ್ದಾರೆ ಎಂಬುದು ಸ್ಪಷ್ಟವಾಗುತ್ತದೆ.

**ಗುಡಾರ ಬದಲಾಯಿಸುವ ದಿನದ ಕಾರ್ಯಚಟುವಟಿಕೆಗಳು**

ಅಲೆಮಾರಿ ಕುರುಬರು ಹೂಡಿದ ಗುಡಾರದ ಸುತ್ತಮುತ್ತ ಬದುಕು(ಕುರಿ)ಗಳಿಗೆ ಮೇವು ಮತ್ತು ನೀರು ದೊರೆಯುವವರೆಗೆ ಅಲ್ಲಿ ನಿಲ್ಲುವುದು ಕಾಣುತ್ತದೆ. ಗುಡಾರ ಹೂಡಿದ ಹೊಲ-ಗದ್ದೆಗಳಲ್ಲಿ ಬಿತ್ತನೆ ಅಥವಾ ನಾಟಿಯಾದ ತಕ್ಷಣ ಮೇವು-ನೀರು ದೊರೆಯುವ ಕಡೆ ಗುಡಾರ ಬದಲಾಯಿಸುವುದು ಅನಿವಾರ್ಯವಾಗಿರುತ್ತದೆ. ಗುಡಾರ ಬದಲಾಯಿಸುವ ಹಿಂದಿನ ದಿನ, ಗುಂಪಿನ ಕಾರಬಾರೆಯವರು (ಮುಖ್ಯಸ್ಥರು) ತಮ್ಮ ಬದುಕುಗಳಿಗೆ ಮೇವು-ನೀರು ದೊರೆಯುವ ಗ್ರಾಮದ ಹೊಲ-ಗದ್ದೆಗಳನ್ನು ನೋಡಿಕೊಂಡು ರಾತ್ರಿ ಕುರಿ ತಬ್ಬಲಿಕ್ಕೆ, ಆ ಗ್ರಾಮದ ಜಮೀನ್ದಾರರ ಬಗ್ಗೆ ಮಾಹಿತಿ ಸಂಗ್ರಹಿಸುತ್ತಾರೆ. ನಂತರ ಜಮೀನ್ದಾರನ ಮನೆಗೆ ಹೋಗಿ ನಾವು ಬೆಳಗಾಂ ಕುರುಬರು, ನಮ್ಮಲ್ಲಿ ಇಷ್ಟು ಕುರಿಗಳಿವೆ, ನಾಳೆಯಿಂದ ನಿಮ್ಮ ಜಮೀನಿನಲ್ಲಿ ಕುರಿ ತಬ್ಬುತ್ತೇವೆ ಗೌಡ್ರೇ, ಧಣಿ, ಸಾಹುಕಾರ, ರೆಡ್ಡಿ ಇತ್ಯಾದಿ ಗೌರವಾನ್ವಿತ ಪದಗಳನ್ನು ಸಂಬೋಧಿಸಿ ವಿನಮ್ರದಿಂದ ಕೇಳುತ್ತಾರೆ. ಭೂಮಾಲಿಕ ಒಪ್ಪಿಕೊಂಡರೆ ರಾತ್ರಿ

ಕುರಿ ತಬ್ಬುವ ಭತ್ಯವನ್ನು ಅಲ್ಲೆ ಮಾತಾಡಬಹುದು. ಇಲ್ಲವಾದರೆ ಭೂಮಾಲಿಕ ಕುರಿಗಳ ಹಿಂಡನ್ನು ನೋಡಿದ ನಂತರ ಚೌಕಾಸಿಯ ಮೂಲಕ ನಿರ್ಧರಿಸಬಹುದು. ಒಂದು ವೇಳೆ ಆ ಭೂಮಾಲಿಕ ಕುರಿತಬ್ಬುವುದು ಬೇಡವೆಂದರೆ ಮತ್ತೊಬ್ಬ ಜಮೀನ್ದಾರನನ್ನು ಭೇಟಿ ಮಾಡಿ ಭತ್ಯ ನಿರ್ಧರಿಸಿಕೊಂಡು ಬರಲಾಗುತ್ತದೆ. ಅಲೆಮಾರಿ ಕುರುಬರಿಗೆ ಜಮೀನ್ದಾರ ನೀಡುವ ಭತ್ಯ ಪ್ರಮುಖವಲ್ಲ. ಅದರಿಂದ ಅವರ ಜೀವನ ನಡೆಯುವುದಿಲ್ಲ. ಆದರೆ ಅವರ ಬದುಕುಗಳಿಗೆ ಸಿಗುವ ಮೇವು-ನೀರು ಪ್ರಮುಖವಾಗಿರುತ್ತದೆ.

ಗುಡಾರ ಬದಲಾಯಿಸುವ ದಿನದಂದು, ಕುಟುಂಬದ ಎಲ್ಲಾ ಸದಸ್ಯರು ನಸುಕಿನಲ್ಲಿ ಎದ್ದು ದೈನಂದಿನ ಕಾರ್ಯದಲ್ಲಿ ಮಗ್ನರಾಗುತ್ತಾರೆ. ಮಹಿಳೆಯರು ಅಂದು ಸಾಮಾನ್ಯ ಅಡುಗೆ ಮಾಡಿ ಕುಟುಂಬದ ಸದಸ್ಯರಿಗೆ ಊಟಕ್ಕೆ ಬಡಿಸುತ್ತಾರೆ. ಪುರುಷರು, ಮಕ್ಕಳು, ಆಳು ಮಕ್ಕಳಿದ್ದರೆ ಆಳುಮಕ್ಕಳು ಸೇರಿ ರಾತ್ರಿ ಗುಂಪಾಗಿ ಒಂದು ಕಡೆ ತಬ್ಬಿರುವ ಕುರಿಗಳ ಹಿಂಡನ್ನು ವಿಭಾಗಿಸಿಕೊಂಡು, ಮರಿಗಳಿಗೆ ಹಾಲುಣಿಸಿ, ಊಟ ಮಾಡುತ್ತಾರೆ. ಪುರುಷರು ಊಟವಾದ ನಂತರ ಕುರಿ-ಮರಿಗಳನ್ನು ಬೇರ್ಪಡಿಸಿ ಗುಡಾರ ಬದಲಾಯಿಸುವ ಹಾದಿ ಹಿಡಿದುಕೊಂಡು ಕುರಿ ಮೇಯಿಸಲು ಹೋಗುತ್ತಾರೆ. ಕುರಿ ಮೇಯಿಸಲು ಹೊರಡುವುದಕ್ಕಿಂತ ಮೊದಲು ಅಥವಾ ಹಿಂದಿನ ದಿನದ ರಾತ್ರಿ, ಕುಟುಂಬದ ಮುಖ್ಯಸ್ಥರು ಕುರಿ ಮೇಯಿಸುವವರಿಗೆ ಮುಂದಿನ ಗ್ರಾಮದ ಹೆಸರು, ದಾರಿ, ಮತ್ತು ಕುರಿ ತಬ್ಬಿಸಿಕೊಳ್ಳುವ ಜಮೀನ್ದಾರನ ಹೆಸರು ಹಾಗೂ ಹೊಲಗದ್ದೆಗಳಿರುವ ಸ್ಥಳಗಳ ಬಗ್ಗೆ ಸ್ಪಷ್ಟ ಮಾಹಿತಿಯನ್ನು ನೀಡುತ್ತಾರೆ. ಆ ಮಾಹಿತಿಯ ಆಧಾರದ ಮೇಲೆ ಕುರಿಗಳನ್ನು ಮೇಯಿಸಿಕೊಳ್ಳುತ್ತಾ ಸೂರ್ಯಾಸ್ತವಾಗುವುದರೊಳಗಾಗಿ ಗುಡಾರ ಹೂಡುವ ಅಥವಾ ಕುರಿ ತಬ್ಬುವ ಹೊಲ-ಗದ್ದೆಗಳನ್ನು ಸೇರಿಕೊಳ್ಳುತ್ತಾರೆ. ಇವರು ವರ್ಷವಿಡಿ ಅಲೆದಾಡುವುದರಿಂದ ಅಲೆದಾಡುವ ಗ್ರಾಮಗಳ ಹೊಲ-ಗದ್ದೆಗಳು, ಗುಡ್ಡಗಾಡು ಪ್ರದೇಶ, ಅವುಗಳ ದಾರಿ, ಇತ್ಯಾದಿ ಪ್ರತಿವರ್ಷ ಪುನರಾವರ್ತನೆಯಾಗುತ್ತಿರುತ್ತವೆ. ಯಾವುದೇ ತೊಂದರೆಯಿಲ್ಲದೆ ಸಲೀಸಾಗಿ ಸಾಯಂಕಾಲದ ಹೊತ್ತಿಗೆ ಕುರಿ ಮೇಯಿಸುತ್ತಾ ಗುಡಾರದ ಹತ್ತಿರಕ್ಕೆ ಸಾಗುತ್ತಾರೆ. ಒಂದುವೇಳೆ ಹೊಸ ಅಥವಾ ಗೊತ್ತಿಲ್ಲದ ಪ್ರದೇಶದ ಕಡೆ ಗುಡಾರ ಬದಲಾಯಿಸುವುದಾದರೆ ಗ್ರಾಮ ಮತ್ತು ದಾರಿಯ ಬಗ್ಗೆ ಸ್ಪಷ್ಟ ಮಾಹಿತಿ ಸಂಗ್ರಹಿಸಿಕೊಂಡು ಜಾಗೃತರಾಗಿ ದಾರಿಯಲ್ಲಿ ಕಾಣುವ ಅಥವಾ ಎದುರಾಗುವ ಜನರಿಂದ ಗ್ರಾಮ ಮತ್ತು ದಾರಿ ಕೇಳುತ್ತಾ ಸಾಗುತ್ತಾರೆ.

ಗುಡಾರ ಬದಲಾಯಿಸುವ ಸ್ಥಳದ ಕಡೆಗೆ ಕುರಿ ಮೇಯಿಸಲು ಅಡವಿಗೆ ಹೋದನಂತರ ಮಹಿಳೆಯರು ಮತ್ತು ಕುಟುಂಬದ ಮುಖ್ಯಸ್ಥರು ಊಟ ಮಾಡುತ್ತಾರೆ. ಊಟವಾದ ನಂತರ ತಮ್ಮ ದಿನನಿತ್ಯದ ಬಳಕೆಯ ಸಾಮಾನುಗಳಾದ ಆಹಾರಧಾನ್ಯ, ಅಡುಗೆ ಪಾತ್ರೆಗಳು, ಬಟ್ಟೆ, ಕುರಿಬಲೆ, ಮರಿಬಲೆ, ತಾಡುಪಾಲು ಇತ್ಯಾದಿ ಸಾಮಾನುಗಳನ್ನು ಚೀಲಗಳಲ್ಲಿ ಕಟ್ಟಿ ಕುದುರೆ ಜಾಳಿಗೆಯಲ್ಲಿಡುವರು. ಸಣ್ಣಪುಟ್ಟ ಸಾಮಾನುಗಳಾದ ಹಾಲು, ಮೊಸರು, ಅಡಿಗೆ ಎಣ್ಣೆ, ದೇವರ ಭಾವಚಿತ್ರ ಇತ್ಯಾದಿಗಳನ್ನು ಬಿದಿರಿನ ಪುಟ್ಟಿಯಲ್ಲಿಡುವರು. ಗುಡಾರ ಬದಲಾಯಿಸುವ

ಹಿಂದಿನ ದಿನದ ರಾತ್ರಿ ಕಟ್ಟಿ ಹಾಕಿದ ಕುದುರೆಗಳನ್ನು ಮೇಯಲು ಬಿಡುವುದಿಲ್ಲ. ಎಲ್ಲಾ ಸಾಮಾನುಗಳನ್ನು ಕಟ್ಟಿ ಜೋಡಿಸಿಟ್ಟುಕೊಂಡ ನಂತರ, ಕುದುರೆಗಳಿಗೆ ಗಂಟುಗಳಿಂದ ಕೂಡಿದ ಜಾಳಿಗೆಯಿಂದ ನೋವಾಗಬಾರದೆಂಬ ಉದ್ದೇಶದಿಂದ ಕುದುರೆಗಳ ಬೆನ್ನಿನ ಮೇಲೆ ದಪ್ಪನಾಗಿ ಕಂಬಳಿ ಹಾಸುತ್ತಾರೆ. ಕಂಬಳಿ ಹಾಸಿದ ನಂತರ ಸಮಾನ ತೂಕದ ಎರಡು ಜಾಳಿಗೆಗಳನ್ನು ಕಟ್ಟಿ ಕುದುರೆಯ ಎಡಭಾಗಕ್ಕೊಂದು ಮತ್ತು ಬಲಭಾಗಕ್ಕೊಂದು ಇಳಿಬಿಡುತ್ತಾರೆ. ಇಳಿಬಿಟ್ಟ ಎರಡು ಜಾಳಿಗೆಯ ತೂಕ ಸಮನಾಗಿರಬೇಕು. ತೂಕದಲ್ಲಿ ಒಂದು ಭಾರವಾದದ್ದು ಮತ್ತೊಂದು ಹಗುರವಾದ ಜಾಳಿಗೆ ಇಳಿಬಿಟ್ಟರೆ, ಕುದುರೆಗೆ ದಾರಿ ನಡೆಯಲು ಹಿಡಿತ ಸಿಗುವುದಿಲ್ಲ. ಜೊತೆಗೆ ಭಾರವಾದ ಕಡೆ ಜಾಳಿಗೆ ಇಳಿ ಬೀಳುತ್ತದೆ. ಕುದುರೆಗೆ ಜಾಳಿಗೆ ಹಾಕುವಾಗ ಎಚ್ಚರವಹಿಸಲಾಗುತ್ತದೆ. ಕುದುರೆಗಳ ಮೇಲೆ ಜಾಳಿಗೆಗಳನ್ನು ಹೇರಿದ ಮೇಲೆ ಬಲೆ ಮತ್ತು ಗುಡಾರ ಬಡಿಯುವ ಬಿದರಿನ ಕಟ್ಟಿಗೆಗಳನ್ನು ಕುದುರೆಯ ಮೇಲೆ ಅಡ್ಡಲಾಗಿ ಕಟ್ಟಲಾಗುವುದು. ನೀರು ತರಲು ಬಳಸುವ ಅಲ್ಯೂಮಿನಿಯಂ ಪಾತ್ರ ಮತ್ತು ಕೊಡಪಾನ ಗಳನ್ನು ಜಾಳಿಗೆಗೆ ಕಟ್ಟಿ ಇಳಿ ಬಿಡಲಾಗುತ್ತದೆ. ಇಷ್ಟೆಲ್ಲಾ ಆದನಂತರ ಅಲೆಮಾರಿ ಕುರುಬರ ಮಕ್ಕಳು, ಕುರಿಮರಿ ಮತ್ತು ನಾಯಿಮರಿ ನಡೆಯಲಾರದಷ್ಟು ಚಿಕ್ಕವಾಗಿದ್ದರೆ ಬಟ್ಟೆಯಿಂದ ಜೋಳಿಗೆ ಮಾಡಿ ಅದನ್ನು ಕುದುರೆ ಜಾಳಿಗೆಗೆ ಕಟ್ಟಿ ಕುರಿಮರಿ ಹಾಕಿ ಇಳಿಬಿಡುವರು. ತಮ್ಮ ಮಗುವನ್ನು ಕುದುರೆಯ ಮೇಲೆ ಕೂಡಿಸಿ ಬೀಳದ ಹಾಗೆ ಹಗ್ಗ ಅಥವಾ ಬಟ್ಟೆಯಿಂದ ಗಟ್ಟಿಯಾಗಿ ಕಟ್ಟುತ್ತಾರೆ. ನಾಯಿಮರಿಯನ್ನು ಮಗುವಿನ ಪಕ್ಕದಲ್ಲಿ ಕೂಡಿಸುತ್ತಾರೆ. ಒಟ್ಟಾರೆಯಾಗಿ "ಇವರು ಕುರಿಮರಿ, ನಾಯಿಮರಿ ಮತ್ತು ತಮ್ಮ ಮರಿ ಎಂಬ ಭೇದಭಾವ ಮಾಡದೆ ಮೂರಕ್ಕೂ ಸಮಾನ ಪ್ರಾಮುಖ್ಯತೆ ನೀಡುತ್ತಾರೆ. ಈ ಮೂರು ಮರಿಗಳಿದ್ದಾಗ ಮಾತ್ರ ಜೀವನ ನಿರ್ವಹಣೆ ಸಾಧ್ಯ. ಕುರಿಮರಿ ಅಥವಾ ಕುರಿ ಮಾರಾಟದಿಂದ ದೈನಂದಿನ ವೆಚ್ಚಗಳನ್ನು ಭರಿಸಲು ಸಹಾಯಕವಾದರೆ, ನಾಯಿಮರಿಯು ಕುರಿ ಮತ್ತು ಕುರುಬನ ಅಂಗರಕ್ಷಕನಾಗಿ ಕಾರ್ಯನಿರ್ವಹಿಸುತ್ತದೆ. ಮರಿಗಳು ವಂಶಾಭಿವೃದ್ಧಿಗೆ, ದಿನನಿತ್ಯದ ಕೆಲಸಗಳಲ್ಲಿ ಭಾಗಿಯಾಗಲು ಮತ್ತು ಮುಪ್ಪಾದಾಗ ನೋಡಿಕೊಳ್ಳಲು ಸಹಾಯಕವಾಗುತ್ತದೆ. ಅಲೆಮಾರಿ ಕುರುಬನಿಗೆ ಮೂರು ಮರಿಗಳು ಅವಶ್ಯಕವಾದ್ದರಿಂದ ಸಮಾನ ಪ್ರಾಮುಖ್ಯತೆ ನೀಡಿ ಅವನ್ನು ಸಾಕಿ ಸಲುಹಿ ಪೋಷಿಸುತ್ತಾನೆ" (ಗೌಡರ್ ವೈ.ಎನ್:೨೦೦೫). ಈ ಸಂಗತಿಯನ್ನು ಪ್ರಸ್ತುತ ಅಧ್ಯಯನದ ಅವಧಿಯಲ್ಲಿ ಕಂಡುಕೊಂಡಿದ್ದೇನೆ.

ಅಲೆಮಾರಿ ಕುರುಬರು ಎಲ್ಲಾ ಸಾಮಾನುಗಳನ್ನು ಕುದುರೆಗಳ ಮೇಲೆ ಹೇರಿದ ನಂತರ ತಮ್ಮ ಕುಟುಂಬದಲ್ಲಿ ಕುದುರೆಯ ಮೇಲೆ ಕೂಡಲಾರದಷ್ಟು ಚಿಕ್ಕ ಮಗು ಇದ್ದರೆ ಮಗುವಿನ ತಾಯಿ ಬಟ್ಟೆಯಿಂದ ಜೋಳಿಗೆ ಮಾಡಿ ಅದರಲ್ಲಿ ಮಗುವನ್ನು ಹಾಕಿ ತನ್ನ ತಲೆಯ ಹಿಂಭಾಗಕ್ಕೆ ಜೋಳಿಗೆ ಇಳಿಬಿಟ್ಟುಕೊಳ್ಳುತ್ತಾಳೆ. ಮಹಿಳೆಯು ೨೦ ರಿಂದ ೨೫ ಕೆ.ಜಿ. ಭಾರವಿರುವ ಪುಟ್ಟಿಯನ್ನು ತಲೆಯ ಮೇಲೆ ಹೊತ್ತುಕೊಂಡು, ಎಡಗೈಯಲ್ಲಿ ಪುಟ್ಟಿ ಮತ್ತು ಬಲಗೈಯಲ್ಲಿ ಮುಂದಾಳತ್ವದ ಕುದುರೆಯ ಲಗಾಮು ಹಿಡಿದುಕೊಂಡು, ತಾನು ಸಾಗುತ್ತಿರುವ ದಾರಿಯನ್ನು

ಕುದುರೆಗೆ ತೋರಿಸುತ್ತಾ ಮುನ್ನಡೆ ಯುವುದು ಕಾಣಬರುತ್ತದೆ. ಅವಳ ಹಿಂದೆ ಸಾಮಾನುಗಳನ್ನು ಹೊತ್ತ ಹಿಂಬಾಲಕ ಕುದುರೆಗಳು, ಪುಟ್ಟಿಗಳನ್ನು ಹೊತ್ತ ಗುಂಪಿನ ಇತರೆ ಕುಟುಂಬದ ಮಹಿಳೆಯರು ಅಥವಾ ಅವಿಭಕ್ತ ಕುಟುಂಬವಾಗಿದ್ದಲ್ಲಿ ಕುಟುಂಬದ ಮಹಿಳೆಯರು, ಸಾಕಿದ ನಾಯಿಗಳು ಹಿಂಬಾಲಿಸುತ್ತವೆ. ಕುಟುಂಬದ ಮುಖ್ಯಸ್ಥರು ಹೆಗಲ ಮೇಲೆ ಕರಿಯ ಕಂಬಳಿ ಅಥವಾ ಶಾಲು ಹಾಕಿಕೊಂಡು, ಕುರಿಕಾಯುವ ಕಟ್ಟಿಗೆ ಹೊತ್ತು, ಹಿಂದೆ ಮುಂದೆ ಎಲ್ಲವನ್ನು ವೀಕ್ಷಿಸುತ್ತಾ, ಮಹಿಳೆಯರಿಗೆ ಸಹಾಯಮಾಡುತ್ತಾ, ಕುದುರೆಗಳ ಹಿಂದೆ ಸಾಗುತ್ತಾರೆ.

ಗುಡಾರ ಬದಲಾಯಿಸುವ ದಿನದಂದು ಕುರಿಮರಿಗಳನ್ನು ಕುರಿಗಳ ಜೊತೆಯಲ್ಲಿ ಹೊಡೆದುಕೊಂಡು ಹೋಗುವುದಿಲ್ಲ. ಏಕೆಂದರೆ ಮರಿಗಳು ಚಿಕ್ಕವಾದ್ದರಿಂದ ಅಡವಿ ಸುತ್ತಿ ಕುರಿಗಳ ಹಿಂದೆ ತಿರುಗಿ ಬರುವಷ್ಟು ಶಕ್ತವಾಗಿರುವುದಿಲ್ಲ. ಮರಿಗಳು ತಾಯಿ ಜೊತೆಯಲ್ಲೆ ಇರುವುದರಿಂದ ಗುಡ್ಡ-ಬೆಟ್ಟಗಳಿದ್ದಲ್ಲಿ ತಾಯಿ ಮತ್ತು ಮರಿ ತಪ್ಪಿಸಿಕೊಳ್ಳಬಹುದು ಹಾಗೂ ಕುರಿಮರಿಯು ತಾಯಿ ಹಾಲನ್ನು ದಿನವಿಡೀ ಕುಡಿಯುವುದರಿಂದ ತಾಯಿ ಚೆನ್ನಾಗಿ ಮೇಯುವುದಿಲ್ಲ ಎಂಬ ಕಾರಣಗಳಿಂದ ಮರಿಗಳನ್ನು ಕುರಿಗಳಿಂದ ಪ್ರತ್ಯೇಕಿಸಿ ಗುಡಾರ ಹೂಡುವ ಸ್ಥಳಕ್ಕೆ ಪ್ರತ್ಯೇಕವಾಗಿ ಹೊಡೆದುಕೋಡು ಹೋಗಲಾಗುತ್ತದೆ. ಕುರಿಗಳು ಅಡವಿಗೆ ಮೇಯಲು ಹೋದ ನಂತರ, ಬಿಡಾರ ಬದಲಾಯಿಸುವ ಗುಂಪಿನಲ್ಲಿರುವ ಎಲ್ಲ ಮರಿಗಳನ್ನು ಕೂಡಿಸಿ ಒಂದು ಪ್ರತ್ಯೇಕ ಗುಂಪು ಮಾಡಿಕೊಂಡು, ಮಹಿಳೆ ಮತ್ತು ಮಕ್ಕಳು ಹೊಡೆದುಕೊಂಡು ಹೋಗುವರು. ಪುರುಷರ ಸಂಖ್ಯೆ ಹೆಚ್ಚಿದ್ದರೆ, ಪುರುಷರು ಕುರಿತಬ್ಬಿದ ಸ್ಥಳವನ್ನು ಬೇಗ ಖಾಲಿ ಮಾಡಿ, ಮಧ್ಯ ಅಲ್ಲಲ್ಲಿ ಚಿಗುರು ಮೇವು ಅಥವಾ ಜಾಲಿ, ಬಂಬೆ, ಬೇವಿನ ಗಿಡದ ಸೊಪ್ಪುಗಳನ್ನು ಮೇಯಿಸಿಕೊಳ್ಳುತ್ತ ಗುಡಾರ ಹೂಡುವ ಸ್ಥಳವನ್ನು ಸಂಜೆಯಾಗುವುದರೊಳಗೆ ಸೇರಿಕೊಳ್ಳುತ್ತಾರೆ. ಕುರಿಮರಿಗಳನ್ನು ಮಹಿಳೆಯರು ಮತ್ತು ಮಕ್ಕಳು ಜೊತೆಯಾಗಿ ಬದಲಾಯಿಸುವುದೇ ಹೆಚ್ಚಾಗಿ ಕಂಡುಬರುತ್ತದೆ.

**ಕುರಿಮಂದೆ ತಬ್ಬುವಿಕೆ**

ಮೂರು-ನಾಲ್ಕು ಕುಟುಂಬಗಳು ಜೊತೆಯಾಗಿ, ಒಂದು ಗುಂಪು ಮಾಡಿಕೊಂಡು ಗುಡ್ಡಗಾಡು ಅಥವಾ ಜಮೀನ್ದಾರರ ಹೊಲಗದ್ದೆಗಳಲ್ಲಿ ಗುಡಾರ ಹೂಡುತ್ತವೆ. ಗುಡಾರ ಹೂಡಿದ ಪ್ರದೇಶದ ಸುತ್ತಮುತ್ತ ಹಗಲೆಲ್ಲಾ ಕುರಿ ಮೇಯಿಸಿ, ರಾತ್ರಿ ಗುಡಾರ ಹೂಡಿದ ಸ್ಥಳದಲ್ಲಿ ಕುರಿಮಂದೆ ತಬ್ಬಲಾಗುತ್ತದೆ. ತಬ್ಬಿದ ಕುರಿಗಳ ಸಂಖ್ಯೆ ಸುಮಾರು ೫೦೦ ರಿಂದ ೨೦೦೦ರವರೆಗೆ ಇರುತ್ತವೆ. ಸಾಮಾನ್ಯವಾಗಿ ೪ ರಿಂದ ೧೫ ದಿನಗಳೊಳಗಾಗಿ ತಬ್ಬುವ ಸ್ಥಳ ಬದಲಾವಣೆಯಾಗುತ್ತದೆ. ಕೆಲವೊಮ್ಮೆ ತಬ್ಬಿದ ಸ್ಥಳದಲ್ಲಿ ತೊಂದರೆಯಾದಾಗ ತಬ್ಬಿದ ಮರುದಿನ ಅಥವಾ ೨-೩ ದಿನಗಳಲ್ಲಿ ಬದಲಾಯಿಸಿದ ಉದಾಹರಣೆಗಳಿವೆ. ಹಾಗೆಯೇ ಒಂದೇ ಜಮೀನಿನಲ್ಲಿ ತಿಂಗಳುಗಟ್ಟಲೇ ತಬ್ಬಿದ ಉದಾಹರಣೆಗಳು ಈ ಅಧ್ಯಯನದ ದಿನಗಳಲ್ಲಿ ಕಂಡುಬಂದಿದೆ. ತಿಂಗಳುಗಟ್ಟಲೆ ಕುರಿತಬ್ಬುವಿಕೆಯು ಕಳ್ಳರ ಕಾಟವಾಗಲಿ,

ಕಾಡುಪ್ರಾಣಿಗಳ ಹಾವಳಿಯಾಗಲಿ ಇಲ್ಲದೆ ಜಮೀನ್ದಾರನ ಭೂಮಿ ಬಹಳಷ್ಟು ಇದ್ದು, ಕುರಿ-ಮೇಕೆಗಳಿಗೆ ಸಾಕಷ್ಟು ಮೇವು ನೀರು ದೊರೆಯುವಿಕೆಯನ್ನು ಅವಲಂಬಿಸಿರುತ್ತದೆ. ಹಾಗೂ ಹೊಲ-ಗದ್ದೆಗಳಲ್ಲಿ ಮಾತ್ರ ತಿಂಗಳುಗಟ್ಟಲೇ ಕುರಿಮಂದೆ ತಬ್ಬಲಾಗುತ್ತದೆ. ಉದಾಹರಣೆಗೆ ಬಳ್ಳಾರಿ ಜಿಲ್ಲೆಯ ಶಿರುಗುಪ್ಪ ತಾಲೂಕಿನ ಮೈಲಾಪುರ ಕ್ಯಾಂಪಿನ ಗೋವರ್ಧನ ಜಮೀನಿನಲ್ಲಿ ಪ್ರತಿವರ್ಷ ಏಪ್ರೀಲ್-ಮೇ ತಿಂಗಳಲ್ಲಿ ತಿಂಗಳುಗಟ್ಟಲೇ ಅಲೆಮಾರಿ ಕುರುಬರು ಕುರಿಮಂದೆ ತಬ್ಬುವುದನ್ನು ಕಾಣಬಹುದು.

ಭೂಮಿಗೆ ಅಮೃತ ಸಂಜೀವಿನಿವೆನಿಸಿದ ಕುರಿಗಳ ಹಿಕ್ಕೆ ಮತ್ತು ಮೂತ್ರ ಪಡೆಯಲು ಜಮೀನ್ದಾರರು ತಮ್ಮ ಹೊಲಗದ್ದೆಗಳಲ್ಲಿ ಕುರಿಗಳನ್ನು ತಬ್ಬಿಸಿಕೊಳ್ಳುತ್ತಾರೆ. ಕುರಿಗಳನ್ನು ತಬ್ಬಿಸಿಕೊಳ್ಳುವುದರಿಂದ ಜಮಿನೀನ ಫಲವತ್ತತೆ ಹೆಚ್ಚುತ್ತದೆ, ಹಾಗೂ ಗಟ್ಟಿಕಾಳು ಬೆಳೆ ಹೆಚ್ಚು ಫಸಲು ಪಡೆಯಲು ಜಮೀನ್ದಾರನಿಗೆ ಸಾಧ್ಯವಾಗುತ್ತದೆ. "ಜಮೀನ್ದಾರನು ತನ್ನ ಹೊಲ-ಗದ್ದೆಗಳಲ್ಲಿ ಕುರಿಗಳನ್ನು ತಬ್ಬಿಸಿಕೊಂಡಿದ್ದಕ್ಕಾಗಿ ಪ್ರತಿಫಲವಾಗಿ ಭತ್ಯ ನೀಡುತ್ತಾನೆ. ಭತ್ಯ ನೀಡುವಿಕೆಯು ಕುರಿಗಳ ಸಂಖ್ಯೆಯನ್ನು ಅವಲಂಬಿಸುತ್ತದೆ. ಇದನ್ನು ನಗದು ಹಣದ ರೂಪದಲ್ಲಿಯಾಗಲಿ ಅಥವಾ ಆಹಾರ ಧಾನ್ಯಗಳ ರೂಪದಲ್ಲಿಯಾಗಲಿ ಮತ್ತು ಇನ್ನೂ ಕೆಲವೊಮ್ಮೆ ನಗದು ಹಣ ಮತ್ತು ಆಹಾರಧಾನ್ಯಗಳೆರಡರ ರೂಪದಲ್ಲಿ ಪಡೆಯುತ್ತಾರೆ" (ಒಡೆಯರ ಡಿ. ಹೆಗ್ಗಡೆ:೧೫೧). ಜಮೀನಿನ ಮಾಲಿಕ ಜೋಳ ಹೆಚ್ಚು ಬೆಳೆದಿದ್ದರೆ ಹಾಗೆಯೇ ಜೋಳವನ್ನು ಸ್ವೀಕರಿಸಲು ಅಲೆಮಾರಿ ಕುರುಬರು ಒಪ್ಪಿದರೆ ದಿನಕ್ಕೆ ಇಂತಿಷ್ಟು ಸೇರು(ಕೆ.ಜಿ.) ಜೋಳವನ್ನು ಪಡೆಯುತ್ತಾರೆ. ಜೋಳದ ಸಂಗಟಿ ಮತ್ತು ರೊಟ್ಟಿಯನ್ನು ಇವರು ಹೆಚ್ಚಾಗಿ ಅನುಭೋಗಿ ಸುವುದರಿಂದ ಜೋಳ ಪಡೆಯಲು ಇಷ್ಟಪಡುತ್ತಾರೆ. ಇತ್ತೀಚಿನ ದಿನಗಳಲ್ಲಿ ಆಹಾರಧಾನ್ಯಗಳನ್ನು ಅಪರೂಪಕ್ಕೊಬ್ಬ ರೈತರು ಮಾತ್ರ ಕೊಡುತ್ತಿದ್ದು ಹೆಚ್ಚಾಗಿ ನಗದು ಹಣವನ್ನು ನೀಡಲಾಗುತ್ತದೆ. ಕುರಿ ತಬ್ಬುವಿಕೆಯು ಕುರಿ ತಬ್ಬಿದ ಜಮೀನಿನ ಸುತ್ತಮುತ್ತ ದೊರೆಯುವ ಮೇವು ನೀರನ್ನು ಅವಲಂಬಿಸಿರುತ್ತದೆ. ಕುರಿಗಳಿಗೆ ಮೇವು-ನೀರು ಚೆನ್ನಾಗಿ ದೊರೆಯುವಾಗ ರೈತ ಕಡಿಮೆ ಭತ್ಯ ಕೊಟ್ಟರೂ ಆ ಜಮೀನಿನಲ್ಲಿ ತಬ್ಬುವುದು ಕಂಡುಬರುತ್ತದೆ. ಅಲೆಮಾರಿ ಕುರುಬನಿಗೆ ಕುರಿಗಳಿಗೆ ದೊರೆಯುವ ಆಹಾರ ಪ್ರಮುಖವೇ ಹೊರತು ಆದರಿಂದ ದೊರೆಯುವ ಭತ್ಯವಲ್ಲ. ಇನ್ನೂ ಕೆಲವೊಂದು ಜಮೀನ್ದಾರರು ಕುರಿತಬ್ಬಿಸಿಕೊಂಡಿದ್ದಕ್ಕೆ ಯಾವುದೇ ಭತ್ಯ ನೀಡದೆ ಕಳುಹಿಸಿದ ಪ್ರಸಂಗಗಳೂ ಇವೆ.

ಮಳೆಗಾಲದಲ್ಲಿ ಗುಡ್ಡಗಾಡು ಪ್ರದೇಶದಲ್ಲಿ ಕುರಿ ತಬ್ಬಲಾಗುತ್ತದೆ. ಬೇಲಿಯಿಂದ ಅಥವಾ ಬಲೆ ಯಿಂದ ತೆರೆದ ಕುರಿಪಟ್ಟಿ ನಿರ್ಮಾಣ ಮಾಡಿಕೊಂಡು ರಾತ್ರಿ ಸಮಯದಲ್ಲಿ ಹಟ್ಟಿಯಲ್ಲಿ ಕುರಿ ತಬ್ಬುತ್ತಾರೆ. ಬೆಳಿಗ್ಗೆ ಕುರಿ ಮೇಯಲು ಹೋದನಂತರ ಬಲೆಯೊಳಗೆ ಅಥವಾ ಹಟ್ಟಿಯೊಳಗೆ ಕುರಿಗಳು ರಾತ್ರಿ ಹಾಕಿದ ಹಿಕ್ಕೆಗಳನ್ನು ಗುಡಿಸಿ ಒಂದು ಕಡೆ ರಾಶಿ ಹಾಕುತ್ತಾರೆ. ಗುಡಾರ ಬದಲಾಯಿ ಸುವಾಗ ಸಮೀಪವಿರುವ ಗ್ರಾಮದ ರೈತನಿಗೆ ಬಂಡಿ ಅಥವಾ ಟ್ರಾಕ್ಟರ್ ಲೆಕ್ಕದಲ್ಲಿ ಮಾರಾಟ ಮಾಡಿ ಮುಂದೆ ಕುರಿತಬ್ಬುವ ಸ್ಥಳಕ್ಕೆ ಗುಡಾರವನ್ನು ಬದಲಾಯಿಸ ಲಾಗುತ್ತದೆ.

ಶ್ಯಾವುಟ್ : ಅಲೆಮಾರಿ ಕುರುಬರು ತಮ್ಮ ಗುಡಾರವನ್ನು ಒಂದು ಹೊಲ-ಗದ್ದೆಯಿಂದ ಬೇರೊಂದು ಹೊಲ-ಗದ್ದೆಗಳಿಗೆ ಬದಲಾಯಿಸಿದಾಗ ಅನುಸರಿಸಿಕೊಂಡು ಬಂದಿರುವ ಪದ್ಧತಿ ಇದು. ಗುಡಾರವನ್ನು ಬದಲಾಯಿಸಿದಾಗ ಹಿಂದಿನ ಹೊಲ-ಗದ್ದೆಯಲ್ಲಿ ಯಾವ ದಿಕ್ಕಿಗೆ ಗುಡಾರ ಹೂಡಲಾಗಿರುತ್ತದೋ ಅದೇ ದಿಕ್ಕಿನಲ್ಲಿ ಗುಡಾರವನ್ನು ಹೂಡುವುದಕ್ಕೆ 'ಶ್ಯಾವುಟ್' ಎನ್ನಲಾಗುತ್ತದೆ. ಉದಾಹರಣೆಗೆ ಈ ಹಿಂದಿನ ಹೊಲ-ಗದ್ದೆಗಳಲ್ಲಿ ನಾಲ್ಕು ಕುಟುಂಬಗಳಿದ್ದು ದಿಕ್ಕಿಗೊಂದು ಕುಟುಂಬದಂತೆ ಅಗ್ನಿ, ವಾಯು, ನೈರುತ್ಯ, ಈಶಾನ್ಯ ದಿಕ್ಕುಗಳಲ್ಲಿ ಚತುರ್ಭುಜ ಆಕಾರದಲ್ಲಿ ಗುಡಾರ ಹೂಡಿದ್ದರೆ, ಮತ್ತೊಂದು ಹೊಲ-ಗದ್ದೆಗೆ ಗುಡಾರ ಬದಲಾಯಿಸಿದಾಗ ಈ ಹಿಂದೆ ಯಾವ ದಿಕ್ಕಿನಲ್ಲಿ ಗುಡಾರ ಹೂಡಲಾಗಿತ್ತೋ ಅದೇ ದಿಕ್ಕಿನಲ್ಲಿ ಹೂಡಲಾಗುತ್ತದೆ. ಅಂದರೆ, ಅಗ್ನಿ ದಿಕ್ಕಿಗೆ ಗುಡಾರ ಹೂಡಿದ ಕುಟುಂಬ ಅಗ್ನಿ ದಿಕ್ಕಿಗೆ, ವಾಯುದಿಕ್ಕಿಗೆ ಹೂಡಿದ ಕುಟುಂಬ ವಾಯುದಿಕ್ಕಿಗೆ, ನೈರುತ್ಯ ದಿಕ್ಕಿಗೆ ಹೂಡಿದ ಕುಟುಂಬ ನೈರುತ್ಯ ದಿಕ್ಕಿಗೆ ಮತ್ತು ಈಶಾನ್ಯ ದಿಕ್ಕಿಗೆ ಹೂಡಿದ ಕುಟುಂಬ ಈಶಾನ್ಯ ದಿಕ್ಕಿಗೇ ಗುಡಾರವನ್ನು ಹೂಡಬೇಕು. ಈ ರೀತಿ ಗುಡಾರ ಹೂಡುವ ದಿಕ್ಕನ್ನು ಬದಲಾಯಿಸದೆ ಉಳಿಸಿಕೊಂಡು ಹೋಗುವ ಉದ್ದೇಶವೆಂದರೆ ಕುರಿಗಳು ಅಡವಿಯಿಂದ ಮೇವು ಮೇಯ್ದು ಗುಡಾರ ಹೂಡಿದ ಸ್ಥಳಕ್ಕೆ ಆಗಮಿಸುವಾಗ ಈ ಹಿಂದಿನ ಹೊಲಗದ್ದೆಯಲ್ಲಿ ಯಾವ ದಿಕ್ಕಿನಲ್ಲಿ ಗುಡಾರ ಹೂಡಲಾಗಿತ್ತೋ ಆ ದಿಕ್ಕಿನ ಕಡೆ ಬರುತ್ತವೆ. ಒಂದು ವೇಳೆ ಗುಡಾರದ ದಿಕ್ಕು ಬದಲಾಯಿಸಿ ಕುರಿಗಳನ್ನು ಬದಲಾಯಿಸಿದ ದಿಕ್ಕಿನ ಕಡೆ ಹೊಡೆದರೂ ಹೋಗುವುದಿಲ್ಲ. ಒಂದು ವೇಳೆ ಒತ್ತಾಯ ಪೂರ್ವಕವಾಗಿ ಬದಲಾಯಿಸಿದರೆ ಕುರಿಗಳು ಮೊದಲು ಗುಡಾರ ಹೂಡಿದ ದಿಕ್ಕಿಗೆ ಬಂದು ನಿಲುತ್ತವೆ. ದಿಕ್ಕು ಬದಲಾಯಿಸುವುದರಿಂದ ಒಂದು ಕುಟುಂಬದ ಕುರಿಗಳು ಮತ್ತೊಂದು ಕುಟುಂಬದ ಕುರಿಗಳೊಂದಿಗೆ ಬೆರೆತಾಗ ಮರಿಗಳಿಗೆ ಹಾಲುಣಿಸಲು, ಹಾಲು ಹಿಂಡಿಕೊಳ್ಳಲು, ಚುಚ್ಚು ಮದ್ದು, ಔಷಧ ಹಾಕಲು ತೊಂದರೆಯಾಗುತ್ತದೆ. ಜೊತೆಗೆ ಅವುಗಳ ಮೇಲ್ವಿಚಾರಣೆ, ನಿಯಂತ್ರಣ ಕಷ್ಟವಾಗುತ್ತದೆ. ಒಂದು ವೇಳೆ ಆ ಗುಂಪಿನಲ್ಲಿರುವ ಯಾವುದಾದರೂ ಒಂದು ಕುಟುಂಬ ದಿಕ್ಕನ್ನು ಬದಲಾಯಿಸಿದರೆ ಅವನೊಂದಿಗೆ ಜಗಳ ಉಂಟಾಗುತ್ತದೆ ಮತ್ತು ಅವನನ್ನು ಗುಂಪಿನಿಂದ ಹೊರಗೆ ಹಾಕಲಾಗುತ್ತದೆ.

ಬಲೆ ಬಡಿಯುವುದು

ಗುಡಾರ ಹೂಡಿದ ಸ್ಥಳದಿಂದ ಕುರಿಗಳು ಮತ್ತು ಮರಿಗಳು ದೂರ ಹೋಗದಂತೆ ತಡೆಯಲು ಬಲೆಯನ್ನು ಬಳಸುತ್ತಾರೆ. ಬಲೆಯಲ್ಲಿ ೨ ವಿಧಗಳಿವೆ. ಒಂದು 'ಮರಿಬಲೆ' ಮತ್ತೊಂದು 'ಕುರಿಬಲೆ'. ಹಗಲು ವೇಳೆಯಲ್ಲಿ ಮರಿಗಳಿಗೆ ಮರಿಬಲೆಯನ್ನು ರಾತ್ರಿ ಸಮಯದಲ್ಲಿ ಕುರಿಬಲೆಯನ್ನೂ ಬಡಿಯುತ್ತಾರೆ. ಕುರಿಬಲೆಯ ಕಂಡಿಗಳು ದೊಡ್ಡವಾಗಿದ್ದು, ಮರಿಬಲೆಯ ಕಂಡಿಗಳು ಚಿಕ್ಕವಾಗಿರುತ್ತವೆ. ಏಕೆಂದರೆ ಮರಿಗಳು ಕಂಡಿಯ ಮೂಲಕ ತಲೆಯನ್ನು ತೂರಿಸಿ ಹೊರಗೆ ಬಾರದಂತೆ ಚಿಕ್ಕ ಕಂಡಿಗಳನ್ನು ಬಿಟ್ಟು ಮರಿಬಲೆ ತಯಾರು ಮಾಡಲಾಗಿರುತ್ತದೆ. ಬಲೆಯನ್ನು ತಯಾರು ಮಾಡಲು ಹತ್ತಿ, ರೇಷ್ಮೆ ಅಥವಾ ನೈಲಾನ್

ನೂಲಿನ ಉಂಡೆಯನ್ನು ಕೆ.ಜಿ. ಲೆಕ್ಕದಲ್ಲಿ ತಂದು ತಾವೇ ಬಲೆಯನ್ನು ತಯಾರು ಮಾಡಿಕೊಳ್ಳುತ್ತಾರೆ. ಅಥವಾ ಗುಡಾರ ಹೂಡಿದ ಸ್ಥಳದ ಸಮೀಪ ಮೀನುಗಾರರಿದ್ದರೆ ನೂಲನ್ನು ಅವರಿಗೆ ಕೊಟ್ಟು ತಮಗೆ ಬೇಕಾದ ಆಕಾರದಲ್ಲಿ ಹಾಗೂ ಗಾತ್ರಕ್ಕನುಗುಣವಾಗಿ ಮಾಡಿಸಿಕೊಳ್ಳುತ್ತಾರೆ. ನೂಲನ್ನು ಬಲೆಯಾಗಿ ಪರಿವರ್ತನೆ ಮಾಡಿದ್ದಕ್ಕಾಗಿ ಮೀನುಗಾರರ ಶ್ರಮಕ್ಕೆ ಪ್ರತಿಫಲವಾಗಿ ಇಂತಿಷ್ಟು ಹಣವನ್ನು ನೀಡಲಾಗುತ್ತದೆ. ಬಾಳಿಕೆ ಮತ್ತು ಮಿತವ್ಯಯ ದೃಷ್ಟಿಯಿಂದ ಹತ್ತಿ ನೂಲನ್ನು ಬಳಸದೆ ರೇಷ್ಮೆ ಅಥವಾ ನೈಲಾನ್ ನೂಲನ್ನು ಬಳಸುವುದು ಕಂಡುಬರುತ್ತದೆ. ಹತ್ತಿ ನೂಲು, ರೇಷ್ಮೆ ನೂಲಿಗಿಂತ ಕಡಿಮೆ ಬೆಲೆಯಾದರೂ ರೇಷ್ಮೆ ನೂಲನ್ನೇ ಕೊಂಡುಕೊಳ್ಳಲಾಗುತ್ತದೆ. ಹತ್ತಿನೂಲು ಬಿಸಲಿಗೆ ಕಾದು, ಮಳೆಗೆ ತೊಯ್ದು ಬಾಳಿಕೆ ಬರುವುದಿಲ್ಲ. ಹತ್ತಿನೂಲಿನ ಜೀವಿತಾವಧಿ ಮತ್ತು ಬೆಲೆಯನ್ನು ಲೆಕ್ಕಹಾಕಿದಾಗ ರೇಷ್ಮೆ ನೂಲಿನ ಬಲೆ ಕಡಿಮೆ ಖರ್ಚಿನದಾಗಿದೆ ಎಂದು ರೇಷ್ಮೆನೂಲನ್ನೇ ಬಳಸಲಾಗುತ್ತದೆ. ಇತ್ತೀಚಿನ ದಿನಗಳಲ್ಲಿ ನೈಲಾನ್‌ನಿಂದ  ತಯಾರು ಮಾಡಿದ ಬಲೆಯನ್ನು ಕೆಲವೊಂದು ಅಲೆಮಾರಿ ಕುರುಬರು ಬಳಸುತ್ತಿದ್ದಾರೆ.

ರಾತ್ರಿ ಸಮಯದಲ್ಲಿ ಕುರಿ-ಮೇಕೆಗಳಿಗೆ ಬಲೆ ಬಡಿಯುವ ಉದ್ದೇಶವನ್ನು ಹೀಗೆ ಗುರುತಿಸಬಹುದು.

- ಗುಡಾರ ಹೂಡಿದ ಸುತ್ತಮುತ್ತಲಿನ ಹೊಲ-ಗದ್ದೆಗಳಲ್ಲಿ ಬೆಳೆದು ನಿಂತ ಫಸಲನ್ನು ಕುರಿ-ಮೇಕೆಗಳು ತಿನ್ನಲು ಹೋಗದಂತೆ ತಡೆಯುವುದು.
- ಕಾಡು ಪ್ರಾಣಿಗಳಿಂದ ಕುರಿಗಳನ್ನು ರಕ್ಷಿಸಿಕೊಳ್ಳುವುದು.
- ರಾತ್ರಿ ಸಮಯದಲ್ಲಿ ಸರದಿ ಕಾಯಲು ಸುಲಭವಾಗಿರುವುದು.
- ಗುಡ್ಡ-ಗಾಡು ಪ್ರದೇಶದಲ್ಲಿ ಕುರಿ ತಬ್ಬಿದಾಗ ಅವುಗಳ ಹಿಕ್ಕೆಯನ್ನು ಮಾರಾಟ ಮಾಡಲು ಅನುಕೂಲವಾಗಿರುವುದು.

ಕುರಿ ಬಲೆಯನ್ನು ಮಳೆ ಮತ್ತು ಚಳಿಗಾಲದಲ್ಲಿ ಮಾತ್ರ ಬಡಿದರೂ ಬೇಸಿಗೆ ಕಾಲದಲ್ಲಿ ಬಡಿಯುವುದಿಲ್ಲ. ಈ ಅವಧಿಯಲ್ಲಿ ಕುರಿಗಳನ್ನು ಗುಡ್ಡಗಾಡು ಮತ್ತು ಸುತ್ತಮುತ್ತ ಬೆಳೆ ಇರುವ ಹೊಲ-ಗದ್ದೆಗಳಲ್ಲಿ ತಬ್ಬಲಾಗುವುದು. ಇದರಿಂದ ಕುರಿಗಳನ್ನು ರಕ್ಷಿಸಿಕೊಳ್ಳಲು ಮತ್ತು ಬೆಳೆಗಳಿಗೆ ಹಾನಿಯಾಗದಂತೆ ನೋಡಿಕೊಳ್ಳಲು ಬಲೆ ಬಡಿಯಲಾಗುವುದು. ಬೇಸಿಗೆ ಕಾಲದಲ್ಲಿ ಹೊಲ-ಗದ್ದೆಗಳೆಲ್ಲ ಕಟಾವು ಆಗಿರುವುದರ ಜೊತೆಗೆ ವಿಶಾಲ ಬಯಲು ಪ್ರದೇಶದಲ್ಲಿ ಕುರಿ ತಬ್ಬುವುದರಿಂದ ಬಲೆ ಬಡಿಯುವ ಅನಿವಾರ್ಯತೆ ಉಂಟಾಗುವುದಿಲ್ಲ. ಒಂದು ವೇಳೆ ಕುರಿ ತಬ್ಬಿದ ಹೊಲ-ಗದ್ದೆಯ ಪಕ್ಕದಲ್ಲಿ ಬೆಳೆ ಇದ್ದಾಗ ಮಾತ್ರ ಬಲೆ ಬಡಿಯಲಾಗುತ್ತದೆ. ಆದರೆ ಮರಿ ಬಲೆಯನ್ನು ವರ್ಷವಿಡಿ ಹಗಲು ಸಮಯದಲ್ಲಿ ಬಡಿಯುವರು. ಕುರಿಗಳು ಅಡವಿಗೆ ಹೋಗಿ ಮೇವು ಮೇಯ್ದು ಗುಡಾರಕ್ಕೆ ಹಿಂದಿರುಗುವವರೆಗೂ ಬಲೆಯಲ್ಲಿ ಇರಬೇಕಾದ್ದರಿಂದ ವರ್ಷವಿಡೀ ಬಡಿಯಬೇಕಾಗುತ್ತದೆ.

ನೆಲೆನಿಂತ ಕುರಿಗಾರರು ರೇಷ್ಮೆ ಅಥವಾ ನೈಲಾನ್ ನೂಲಿನಿಂದ ತಯಾರು ಮಾಡಿದ

ಬಲೆಯನ್ನು ಬಳಸದೆ ಕಬ್ಬಿಣದ ತಂತಿಯಿಂದ ಮಾಡಿದ ಕುರಿಬಲೆಯನ್ನು ಬಳಸುತ್ತಾರೆ. ದೀರ್ಘಾವಧಿ ಬಾಳಿಕೆ ಬರುತ್ತದೆ ಮತ್ತು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ವರ್ಗಾಯಿಸುವ ಅನಿವಾರ್ಯತೆ ಇಲ್ಲದಿರುವುದರಿಂದ ಕಬ್ಬಿಣದ ಬಲೆಯನ್ನು ಬಳಸಲಾಗುತ್ತದೆ. ಆದರೆ ಅಲೆಮಾರಿ ಕುರುಬರು ಚಲನಶೀಲರಾಗಿರುವುದರಿಂದ ಗುಡಾರ ಬದಲಾಯಿಸಿದಂತೆಲ್ಲಾ ಕಬ್ಬಿಣದ ಬಲೆ ಹೊತ್ತೊಯ್ಯುವುದು ಕಷ್ಟಕರ ಕೆಲಸವಾದ್ದರಿಂದ ಹಗುರವಾದ ರೇಷ್ಮೆ ಅಥವಾ ನೈಲಾನ್ ಬಲೆಯನ್ನು ಬಳಸುವುದು ಕಂಡುಬರುತ್ತದೆ.

ಸರದಿ ಕಾಯುವುದು

ಕಳ್ಳರು ಮತ್ತು ಕಾಡುಪ್ರಾಣಿಗಳಿಂದ ರಕ್ಷಿಸಿಕೊಳ್ಳಲು ನಕ್ಷತ್ರಗಳ ಚಲನೆ ವಲನೆಯನ್ನು ಆಧಾರವಾಗಿಟ್ಟುಕೊಂಡು ಎರಡು ಗಂಟೆಗೆ ಇಬ್ಬರು ಇಡೀ ರಾತ್ರಿ ಸರದಿಯ ಮೇಲೆ ಕುರಿಕಾಯಲಾಗುತ್ತದೆ. ಇದನ್ನು ಸರದಿ ಕಾಯುವುದು ಎನ್ನುವರು. ಅಲೆಮಾರಿ ಕುರುಬರು ಮರಾಠಿ ಪದ ಬಳಸಿ ಇದನ್ನು 'ಪಾರಿ' ಕಾಯುವುದು ಎನ್ನುತ್ತಾರೆ. ಕೆಲವೊಂದು ನಕ್ಷತ್ರಗಳು ಕಾಲಗಣನೆ ಗನುಗುಣವಾಗಿ ಕಾಣಿಸಿ ಕೊಳ್ಳುತ್ತವೆ. ಅವನ್ನು ತಮ್ಮದೇ ಆದ ಸಂಕೇತ ಅಥವಾ ಗುರುತುಗಳ ಮೂಲಕ ಗುರುತಿಸಿ, ಅವುಗಳ ಚಲನೆಯ ಆಧಾರದ ಮೇಲೆ ಸರದಿ ಕಾಯಲಾಗುತ್ತದೆ. ನಕ್ಷತ್ರಗಳ ಚಲನೆಯನ್ನು ಹೀಗೆ ಗುರುತಿಸ ಲಾಗುವುದು.

* ಮೂರು ತೋಳ ಅಥವಾ ಕೂರಿಗೆ ತಾಳು: ಮೂರು ನಕ್ಷತ್ರಗಳು ಸಮಾನ ಅಂತರದಲ್ಲಿರುತ್ತವೆ.

* ಹಪ್ಪೆಮಂಚ: ನಾಲ್ಕು ನಕ್ಷತ್ರಗಳು ಮಂಚದ ಕಾಲುಗಳು ಹಾಗೆ ಕಾಣಿಸಿಕೊಳ್ಳುತ್ತವೆ.

* ಚೆನ್ನಮ್ಮ ಸೂಸುಗ ಅಥವಾ ಚೀಳು: ಐದು ನಕ್ಷತ್ರಗಳಿದ್ದು ಮಂಗಳ ಕಾರ್ಯದಲ್ಲಿ ಸ್ತ್ರೀಯರು ತಲೆಯ ಮೇಲೆ ಹಾಕಿಕೊಳ್ಳುವ ಸೂಸಗ ಅಥವಾ ಚೀಳಿನಾಕಾರವಾಗಿರುತ್ತದೆ.

* ಬೆಳ್ಳಿಚುಕ್ಕಿ: ಇದು ಎಲ್ಲ ನಕ್ಷತ್ರಗಳಿಗಿಂತ ಪ್ರಕಾಶಮಾನವಾಗಿರುತ್ತದೆ.

ಮೇಲಿನ ಪ್ರತಿಯೊಂದು ಗುಂಪಿನ ನಕ್ಷತ್ರಗಳು ಮೂರು ತಿಂಗಳಿಗೆ ಒಂದರಂತೆ ಕಾಲ ನಡೆಸುತ್ತವೆಂಬುದು ಅಲೆಮಾರಿ ಕುರುಬರ ತಿಳುವಳಿಕೆಯಾಗಿದೆ.

ಕುರಿಗಳನ್ನು ರಕ್ಷಿಸಿಕೊಳ್ಳಲು ಮುನ್ಸೂಚನೆ

ಯಾವುದೇ ಪ್ರಾಣಿ-ಪಕ್ಷಿಗಳು ತಮಗೆ ಅಥವಾ ತಮ್ಮವರಿಗೆ ಅಪಾಯ ಬರುವುದನ್ನು ಗಾಳಿ ವಾಸನೆಯಿಂದ ತಮ್ಮ ವರ್ತನೆ ಅಥವಾ ಶಬ್ದದ ಮೂಲಕ ವ್ಯಕ್ತಪಡಿಸುತ್ತವೆ. ಅಲೆಮಾರಿ ಕುರುಬರು ಬದುಕುಗಳಿಗೆ ಎದುರಾಗುವ ಆಪತ್ತುಗಳನ್ನು ಈ ಕೆಳಗಿನಂತೆ ಮುನ್ಸೂಚನೆಗಳನ್ನು ಗ್ರಹಿಸುವುದು ಕಂಡುಬರುತ್ತದೆ.

೧ ಕುರಿಗಳ ವರ್ತನೆ : ಕುರಿಮಂದೆಗಳನ್ನು ಗುಡ್ಡ ಅಥವಾ ಹೊಲಗದ್ದೆಗಳ ಪ್ರದೇಶಗಳಲ್ಲಿ ತಬ್ಬುವುದು ಸಹಜ. ಇಂತಹ ಪ್ರದೇಶಗಳಲ್ಲಿ ತಬ್ಬಿದಾಗ ಚಿರತೆ, ತೋಳ, ನರಿ ಇತ್ಯಾದಿ ಕಾಡುಪ್ರಾಣಿಗಳು ಮುಗ್ಧ ಪ್ರಾಣಿಗಳಾದ ಕುರಿ-ಮೇಕೆಗಳನ್ನು ತಿನ್ನಲು ಬರುತ್ತವೆ. ಕಾಡು ಪ್ರಾಣಿಗಳು ಸುಮಾರು ೧ ಕಿ.ಮೀ. ದೂರದಲ್ಲಿರುವಾಗಲೆ ಗಾಳಿಯ ಮೂಲಕ ವಾಸನೆ ಹಿಡಿದು

ಕುರಿಗಳು ಬೆದರಿ ಒಂದು ಕಡೆ ನಿಂತು ಕಾಡುಪ್ರಾಣಿ ಬರುವ ದಿಕ್ಕನ್ನು ವೀಕ್ಷಿಸುತ್ತಿರುತ್ತವೆ. ಕುರಿಗಳ ವರ್ತನೆಯಿಂದ ಎಚ್ಚೆತ್ತುಕೊಂಡು ಅಲೆಮಾರಿ ಕುರುಬರು ನಾಯಿಗಳನ್ನು ಸಮೀಪ ಕರೆದು ಕೋಲು ಮತ್ತು ಬ್ಯಾಟರಿಯನ್ನು ಹಿಡಿದುಕೊಂಡು ಕುರಿಗಳ ಸುತ್ತಲು ತಿರುಗುತ್ತಾರೆ.

✪ ಟಿವ್ಡಂಕಿ ಪಕ್ಷಿ : ಕಾಡುಪ್ರಾಣಿಗಳು ಮತ್ತು ಕಳ್ಳರು, ಕುರಿತಬ್ಬಿದ ಕಡೆ ಬರುವ ಹಾದಿಯಲ್ಲಿ ಈ ಪಕ್ಷಿ ಟ್ಹೀ, ಟ್ಹೀ, ಟ್ಹೀ ಎಂದು ಕೂಗುತ್ತದೆ. ಈ ಕೂಗು ಅಶುಭ ಅಥವಾ ಅಪತ್ತೆಂದು ಭಾವಿಸುವ ಅಲೆಮಾರಿ ಕುರುಬರು ಇಡೀ ರಾತ್ರಿ ಎಚ್ಚರದಿಂದಿರುತ್ತಾರೆ. ಹಾಗೆಯೇ ಟಿವ್ಡಂಕಿ ಪಕ್ಷಿಯ ಜೊತೆ ಹಾಲಹಕ್ಕಿಯೂ ಕ್ಯಾರಬ್... ಕ್ಯಾರಬ್... ಕ್ಯಾರಬ್... ಎಂದು ಕೂಗಿದರೆ ಶುಭವೆಂದರಿತು ನಿರ್ಭಯವಾಗಿ ಮಲಗುತ್ತಾರೆ.

✪ ನಾಯಿ : ನಾಯಿ, ಕುರಿ ಮತ್ತು ಕುರುಬರ ಅಂಗರಕ್ಷಕ ಪ್ರಾಣಿಯಾಗಿದೆ. ಬಹಳ ನಿಯತ್ತಿನ ಪ್ರಾಣಿಯಾದ ಇದು ಕುರುಬನಿಗೆ ಮತ್ತು ಕುರಿಗಳಿಗೆ ಅಪತ್ತು ಬಾರದ ಹಾಗೆ ನೋಡಿಕೊಳ್ಳುತ್ತದೆ. ಇವರು ಮೂರ್‍ನಾಲ್ಕು ನಾಯಿಗಳನ್ನು ಸಾಕುತ್ತಾರೆ. ಒಂದೆರಡು ನಾಯಿಗಳು ಹಗಲು ಹೊತ್ತು ಕುರಿಕಾಯಲು ಅಡವಿಗೆ ಹೋಗುತ್ತವೆ. ಬೇರೆ ಪ್ರಾಣಿಗಳು ಮತ್ತು ಇತರೆ ಜನರು ಕುರಿಗಳ ಹತ್ತಿರ ಬಾರದ ಹಾಗೆ ನೋಡಿಕೊಳ್ಳುತ್ತವೆ. ಇನ್ನೂಳಿದ ಒಂದೆರಡು ನಾಯಿಗಳು ಹಗಲೀಡಿ ಗುಡಾರದ ಸುತ್ತಮುತ್ತ ಇದ್ದು ಅಪರಚಿತ ವ್ಯಕ್ತಿ, ಪ್ರಾಣಿ, ಪಕ್ಷಿಗಳು ಸುಳಿದಾಡದಂತೆ ನೋಡಿಕೊಳ್ಳುತ್ತವೆ. ರಾತ್ರಿ ಸಮಯದಲ್ಲಿ ಕಾಡುಪ್ರಾಣಿಗಳು ಕುರಿಗಳನ್ನು ತಿನ್ನಲು ಹಾಗೂ ಕುರಿಗಳನ್ನು ಹೊತ್ತೊಯ್ಯಲು ಕಳ್ಳರು ಬಾರದಂತೆ ಇಡೀ ರಾತ್ರಿ ಕುರಿಹಿಂಡಿನ ಸುತ್ತ ತಿರುಗುತ್ತವೆ. ಯಾವುದಾದರೂ ಕಾಡುಪ್ರಾಣಿ ಅಥವಾ ಮನುಷ್ಯ ಕುರಿ ಹಿಂಡಿನ ಸಮೀಪ ಬಂದರೆ ಬೊಗಳುವುದರ ಮೂಲಕ ನಿದ್ರಿಸುತ್ತಿದ್ದ ತನ್ನ ಯಜಮಾನ ನನ್ನು ಎಬ್ಬಿಸಿ ಕುರಿಗಳನ್ನು ರಕ್ಷಿಸಿಕೊಳ್ಳುತ್ತವೆ.

**ಕುರಿಗಳನ್ನು ಗುರುತಿಸುವಿಕೆ**

ಸಾಮಾನ್ಯವಾಗಿ ಕುರಿ-ಮರಿಗಳನ್ನು ಅವುಗಳ ಮುಖ, ಎತ್ತರ, ಗಾತ್ರ, ಬಣ್ಣ, ಕಿವಿ, ಕಾಲು, ಬಾಲ, ಕೊಂಬು ಇತ್ಯಾದಿಗಳ ಆಧಾರದ ಮೇಲೆ ಗುರುತಿಸಲಾಗುತ್ತದೆ. ಕುರಿಸಾಕಣಿಕೆ ವೃತ್ತಿ ಇವರಿಗೆ ವಂಶಪರಂಪರೆಯಾಗಿ ಬಂದಿದ್ದು, ವೃತ್ತಿಯಲ್ಲಿ ನೈಪುಣ್ಯತೆಯನ್ನು ಪಡೆದಿದ್ದರಿಂದ ಸಾವಿರಾರು ಕುರಿಗಳಲ್ಲಿ ಇದೇ ನಮ್ಮ ಕುರಿ ಎಂದು ಗುರುತಿಸುವಷ್ಟು ಪರಿಪೂರ್ಣತೆ ಪಡೆದಿರುತ್ತಾರೆ. ಕುರಿಗಳನ್ನು ಗುರುತಿಸಲು ಪೂರ್ವಜರು ಕಲಿಸಿಕೊಟ್ಟ ವಿದ್ಯೆ ಅಥವಾ ಹಿಂದಿನಿಂದಲೂ ನಡೆದು ಬಂದ ಸಂಪ್ರದಾಯವೆ ಕುರಿ ಕುರಿತ ಸೂಚಿಯಾಗಿದೆ. ವೈದಿಕ ಸಂಪ್ರದಾಯದ ಪ್ರಕಾರ ಯುಗಾದಿ ಹೊಸವರ್ಷವಾಗಿದೆ. ಅಂದು ವಿವಿಧ ಕುಲ ವೃತ್ತಿಯಲ್ಲಿ ತೊಡಗಿದವರು ತಮ್ಮ ಸಲಕರಣೆಗಳನ್ನು ಶುಭ್ರಗೊಳಿಸಿ ಪೂಜೆ ಸಲ್ಲಿಸುತ್ತಾರೆ. ಹಾಗೆಯೇ ಅಲೆಮಾರಿ ಕುರುಬರು ಯುಗಾದಿಯ ಹಬ್ಬದಂದು ಶುಭ್ರಗೊಂಡು ಮುಂಜಾನೆಯೇ ತನ್ನ ಬದುಕುಗಳಿಗೆ ಪೂಜೆ ಸಲ್ಲಿಸುತ್ತಾರೆ. ಪೂಜೆ ಸಲ್ಲಿಸಿದ ನಂತರ, ಒಂದು ವರ್ಷದೊಳಗಿನ ಗಂಡು ಮರಿಗಳಿಗೆ ಬಾಲದ ತುದಿಯನ್ನು ಹೆಣ್ಣು ಮರಿಗಳಿಗೆ ಬಾಲದ

ತುದಿ ಮತ್ತು ಕಿವಿಯ ಮೇಲಿನ ಚರ್ಮದ ಸ್ವಲ್ಪ ಭಾಗವನ್ನು ಕತ್ತರಿಸುವರು. ಈ ರೀತಿ ಕತ್ತರಿಸುವಾಗ ಅಥವಾ ಬರೆ ಹಾಕುವಾಗ ತಮ್ಮ ಹಿರಿಯರು ಹಾಕಿಕೊಟ್ಟ ಅಥವಾ ಮುಂದುವರಿಸಿಕೊಂಡು ಬಂದ ಗುರುತನ್ನೆ ಹಾಕುತ್ತಾರೆ. ಇದಕ್ಕೆ 'ಲಾಕು' ಹಾಕುವುದು ಎಂದು ಕರೆಯುತ್ತಾರೆ. ಅಂತಹ ಲಾಕು ಅಥವಾ ಗುರುತುಗಳೆಂದರೆ ಬುಗಡೆ, ಸೀಳಗಿವಿ, ಅರೆಗಿವಿ, ಉಂಗುರು, ಮುಂಗವಿ, ಹಿಂಗಿವಿ ಇತ್ಯಾದಿ ರೀತಿಯ ಗುರುತುಗಳನ್ನು ಹಿಕ್ಕಳ ಅಥವಾ ಚಿಮುಟಿಗೆಯಿಂದ ಹಾಕುತ್ತಾರೆ. ಇನ್ನೂ ಕೆಲವರು ಕಬ್ಬಿಣ್ಣದ ಸಲಾಕೆಯನ್ನು ಬೆಂಕಿಯಲ್ಲಿ ಕಾಯಿಸಿ ಹಣೆ ಅಥವಾ ಬೆನ್ನಿನ ಮೇಲೆ ಕತ್ರಿಬರೆ [X], ಜೋಡುಬರೆ [||], ಒಂಟಿಬರೆ [|], ಅಡ್ಡಬರೆ [-] ಅಂದರೆ =, +, X, ||, #, |, T, V, L, ಇತ್ಯಾದಿ ಚಿಹ್ನೆಗಳನ್ನು ಹೊಂದಿರುವ ಗುರುತು ಅಥವಾ ಬರೆ ಹಾಕುತ್ತಾರೆ. ಈ ತರಹದ ಚಿಹ್ನೆಗಳ ಆಧಾರದ ಮೇಲೆ ತಮ್ಮ ಕುರಿಗಳನ್ನು ಗುರುತಿಸುತ್ತಾರೆ. ಗಂಡು ಮರಿಗಳಿಗೆ ಕಿವಿ, ಹಣೆ, ಅಥವಾ ಬೆನ್ನಿನ ಮೇಲೆ ಗುರುತು ಅಥವಾ ಬರೆ ಹಾಕುವುದಿಲ್ಲ. ಏಕೆಂದರೆ ೨-೩ ಬೀಜಕ್ಕೆ ಬಿಟ್ಟು ಉಳಿದೆಲ್ಲವನ್ನು ಮಾರಾಟ ಮಾಡುತ್ತಾರೆ. ಆದ್ದರಿಂದ ಬಹಳ ಕುಟುಂಬಗಳು ಗುಂಪಾಗಿ ಕುರಿ ತಬ್ಬಿದಾಗ ಸಾವಿರಾರು ಕುರಿಗಳಲ್ಲಿ ತಮ್ಮ ಕುರಿ ತಪ್ಪಿಸಿಕೊಂಡಾಗ, ಬೇಗನೆ ಗುರುತು ಹಚ್ಚಲು ಚಿಹ್ನೆ ಅಥವಾ ಲಾಕು ಸಹಾಯಕವಾಗುತ್ತದೆ. ಒಂದೇ ಗುರುತನ್ನು ಎರಡು ಅಥವಾ ಮೂರು ಕುಟುಂಬದವರು ಹಾಕಿದಾಗ ಹೇಗೆ ಗುರುತು ಹಿಡಿಯುತ್ತೀರಿ ಎಂದು ಪ್ರಶ್ನಿಸಿದಾಗ ನನ್ನ ಪ್ರಶ್ನೆಗೆ ಉತ್ತರಿಸುತ್ತಾ, "ಸಾಹೇಬ್ರ ಸಾಲಿ ಕಲಿತರೋಲ್ಲಾ ನೀವು ಒಂದೇ ರೀತಿಯ ಅಕ್ಷರ ಬರೆಯುತ್ತೀರಿ. ಸಾವಿರ ಪೇಪರ ತಂದು ನಿಮ್ಮ ಮುಂದಿಟ್ಟರೆ ಇದೇ ನನ್ನ ಪೇಪರ್, ಇದೇ ನನ್ನ ಬರವಣಿಗೆ ಎಂದು ಹೇಗೆ ನಿಮ್ಮದೇ ಎಂದು ಗುರುತು ಹಿಡಿಯುತ್ತೀರೋ ಹಾಗೆಯೇ ನಾವು ಎದ್ದರೂ, ಬಿದ್ದರೂ ಕುರಿಯಲ್ಲಿರುವುದರಿಂದ ನಮ್ಮ ಕುರಿಯನ್ನು ಗುರುತು ಹಿಡಿಯುವುದು ಕಷ್ಟ ವಾಗುವುದಿಲ್ಲ" ಎನ್ನುತ್ತಾರೆ (ಮಾಹಿತಿದಾರ: ಕಲ್ಲಪ್ಪ ಮುತ್ಯಪ್ಪ ತೋರಪ್ಪಗೋಳ್:ಸುಟ್ಟಟ್ಟಿಗ್ರಾಮ). ಹೌದು ಈ ಮಾತು ಸತ್ಯವೆನಿಸುತ್ತದೆ. ಜೀವನವೀಡಿ ಕುರಿಸಂಗೋಪನೆಯಲ್ಲಿ ತೊಡಗಿರುವುದರಿಂದ ಸುಲಭವಾಗಿ ಗುರುತಿಸಬಹುದಾಗಿದೆ.

**ಕುರಿ ಮೇಯಿಸುವ ವಿಧಾನ**

ವಲಸೆ ಬಂದಿರುವ ಅಲೆಮಾರಿ ಕುರುಬರೆಲ್ಲರೂ ಒಂದೇ ಕಡೆ ಗುಡಾರಗಳನ್ನು ಹೂಡಿ ಕುರಿ ಮೇಯಿಸುವುದು ಕಾಣುವುದಿಲ್ಲ. ಸಾಮಾನ್ಯವಾಗಿ ಮೂರರಿಂದ ಎಂಟು ಕುಟುಂಬಗಳು ಸೇರಿ ಒಂದು ಪ್ರದೇಶ ಅಥವಾ ಹೊಲಗದ್ದೆಗಳಲ್ಲಿ ಗುಡಾರವನ್ನು ಹೂಡಲಾಗುತ್ತದೆ. ವಲಸೆ ಬಂದ ಬಹಳಷ್ಟು ಕುಟುಂಬಗಳು ಒಂದೇ ಕಡೆ ಗುಡಾರವನ್ನು ಹೂಡಿ ಕುರಿಮೇಯಿಸಲು ಆರಂಭಿಸಿದರೆ ಎಲ್ಲಾ ಕುರಿಗಳಿಗೆ ಮೇವು-ನೀರು ಸಿಗುವುದು ಕಷ್ಟವಾಗುತ್ತದೆ. ಆದ್ದರಿಂದ ೩-೪ ಕುಟುಂಬಗಳು ಜೊತೆಯಾಗಿ ಒಂದು ಗುಂಪು ಮಾಡಿಕೊಂಡು ಗುಡಾರವನ್ನು ಹೊಡುತ್ತಾರೆ. ಗುಡಾರ ಹೂಡಿದ ಎಲ್ಲಾ ಕುಟುಂಬಗಳು ಸಹ ಜೊತೆಯಾಗಿ ಕುರಿ ಮೇಯಿಸಲು ಹೋಗುವುದಿಲ್ಲ. ಅವರಲ್ಲಿಯೇ ಹಿಂಡುಗಳಾಗಿ ಭಾಗಮಾಡಿಕೊಂಡು

ಮೇಯಿಸಲು ಹೋಗಲಾಗುತ್ತದೆ. ಉದಾಹರಣೆಗೆ ಒಂದು ಕುಟುಂಬದ ಕುರಿಗಳ ಸಂಖ್ಯೆ ೭೫ ಮತ್ತೊಂದು ಕುಟುಂಬದ ಕುರಿಗಳ ಸಂಖ್ಯೆ ೮೫ ಇದ್ದಾಗ ಒಟ್ಟು ಕುರಿಗಳ ಸಂಖ್ಯೆ ೧೬೦ ಆಗುತ್ತವೆ. ಈ ಎರಡು ಕುಟುಂಬಗಳು ಜೊತೆಯಾಗಿ ಒಂದು ಹಿಂಡು ಮಾಡಿಕೊಂಡು ಮೇಯಿಸಲಾಗುತ್ತದೆ. ಹಾಗೆಯೆ ಇನ್ನೊಂದು ಕುಟುಂಬದ ಕುರಿಗಳ ಸಂಖ್ಯೆ ೩೫೦ ಇದ್ದಾಗ, ಅವುಗಳನ್ನು ೧೭೫ ರಂತೆ ೨ ಭಾಗ ಮಾಡಿಕೊಂಡು, ಎರಡು ಹಿಂಡುಗಳಾಗಿ ಮೇಯಿಸಲಾಗುವುದು. ಈ ರೀತಿ ಭಾಗಮಾಡಿಕೊಂಡು ಕುರಿಗಳನ್ನು ಮೇಯಿಸಲು ಹೋಗುವ ಉದ್ದೇಶವೇನು? ಎಂದು ಕೇಳಿದಾಗ ಅವರು ಕೊಟ್ಟ ಉತ್ತರ - "ಕುರಿಗಳ ಸಂಖ್ಯೆ ಹೆಚ್ಚಾಗಿದ್ದರೆ, ಹೊಲ-ಗದ್ದೆಗಳ ಬದುವಿನಲ್ಲಿ, ಕಿರಿದಾದ ನಾಲೆ ಅಥವಾ ದಾರಿಯಲ್ಲಿ ಮೇಯಿಸುವುದು ಕಷ್ಟವಾಗುತ್ತದೆ. ಮೇವು ದೊರೆಯದಿದ್ದಾಗ ಬೇವಿನ, ಜಾಲೆಯ ಅಥವಾ ಜಂಬೆ ಮರದ ಕೊಲ್ಲೆಗಳನ್ನು ಕಡಿದು ಸೊಪ್ಪನ್ನು ಮೇಯಿಸಬೇಕೆಂದಾಗ ಎಲ್ಲಾ ಕುರಿಗಳಿಗೆ ಮರದ ಸೊಪ್ಪು ಸಾಕಾಗುವುದಿಲ್ಲ. ಎಲ್ಲಾ ಕುರಿಗಳಿಗೆ ಹೊಟ್ಟೆ ತುಂಬುವಷ್ಟು ಮೇವು-ನೀರು ದೊರಕಿಸುವುದಾಗಲಿ ಮತ್ತು ಅವುಗಳ ಮೇಲ್ವಿಚಾರಣೆ, ನಿರ್ವಹಣೆ, ನಿಯಂತ್ರಣ ಕಷ್ಟವಾಗುತ್ತದೆ. ಆದ್ದರಿಂದಲೇ ೧೨೦ ರಿಂದ ೨೦೦ರೊಳಗೆ ಒಂದು ಹಿಂಡು ಮಾಡಿಕೊಂಡು ಬೆಳಗ್ಗೆಯಿಂದ ಸೂರ್ಯಾಸ್ತವಾಗುವ ವರೆಗೆ ಕುರಿಗಳಿಗೆ ಮೇವು ಮೇಯಿಸುತ್ತೇವೆ" (ಮಾಹಿತಿ: ಬೀರಪ್ಪ:ನಸಲಾಪುರ).

ಒಂದು ಕುರಿ ಹಿಂಡನ್ನು ಮೇಯಿಸಲು ಇಬ್ಬರು ಅಲೆಮಾರಿ ಕುರುಬರಿರುತ್ತಾರೆ. ಹೆಚ್ಚಾಗಿ ಒಂದು ಹಿಂಡಿಗೆ ಒಬ್ಬ ವಯಸ್ಕನಿದ್ದರೆ ಮತ್ತೊಬ್ಬ ಚಿಕ್ಕವನಿರುತ್ತಾನೆ. ಚಿಕ್ಕವನು ಕುರಿಗಳಿಗೆ ದಾರಿ, ಮೇವು ತೋರಿಸುತ್ತಾ ಮುನ್ನಡೆದರೆ, ವಯಸ್ಕನಾದವನು ಕುಂಟುವ, ವಯಸ್ಸಾದ, ಮರಿ ಹಾಕಿದ ಇತ್ಯಾದಿ ಕುರಿಗಳನ್ನು ಕುರಿ ಹಿಂಡಿನ ಜೊತೆಗೆ ಕಲಿಸುತ್ತಾ, ಯಾವ ಕುರಿಗಳು ಹಿಂದಿವೆ, ತಪ್ಪಿಸಿ ಕೊಂಡಿವೆ ಎಂದು ಎಲ್ಲವನ್ನು ಗಮನಿಸುತ್ತಾ ಕುರಿಗಳ ಹಿಂದೆ ಸಾಗುತ್ತಾನೆ. ಇವರ ಕುಟುಂಬಗಳಲ್ಲಿ ಯಾರಿಗಾದರೂ ಗಂಡು ಸಂತಾನವಿಲ್ಲದಿದ್ದಾಗ ಅಥವಾ ಗಂಡ ತೀರಿಕೊಂಡು ಮಕ್ಕಳು ಚಿಕ್ಕವರಿದ್ದಾಗ ಅಥವಾ ಮಕ್ಕಳು ಚಿಕ್ಕವಿದ್ದು ಪತಿಯು ಅನ್ಯಕಾರ್ಯ ನಿಮಿತ್ತ ದೂರದ ಊರಿಗೆ ಹೋಗಿದ್ದ ಪ್ರಸಂಗಗಳಲ್ಲಿ ದೈನಂದಿನ ಅಡಿಗೆಯನ್ನು ಮಕ್ಕಳಿಗೆ ಮಾಡಿಟ್ಟು ಕುರಿ ಮೇಯಿಸಲು ಕುಟುಂಬದ ಸ್ತ್ರೀಯರೇ ಅಡವಿಗೆ ಹೋಗುತ್ತಾರೆ.

ಕುರಿಗಳನ್ನು ಬೆಳಿಗ್ಗೆ ಸುಮಾರು ೯ ಗಂಟೆಗೆ ಕುರಿತಬ್ಬಿದ ಗುಡಾರದಿಂದ ಮೇಯಲು ಬಿಟ್ಟು, ಸೂರ್ಯಾಸ್ತವಾದ ನಂತರವೇ ಮರಳಿ ಗುಡಾರದ ಸ್ಥಳಕ್ಕೆ ಹಿಂದಿರುಗಲಾಗುವುದು. ದಿನಕ್ಕೆ ಎರಡು ಬಾರಿ ಕುರಿಗಳಿಗೆ ನೀರು ಕುಡಿಸಲಾಗುತ್ತದೆ. ಬೆಳಿಗ್ಗೆ ಕುರಿ ಮೇಯಿಸಲು ಅಡವಿಗೆ ಹೋಗುವ ದಾರಿಯಲ್ಲಿ ನೀರು ದೊರೆಯುವಂತಿದ್ದರೆ ಆಗ, ಇಲ್ಲವಾದರೆ ಸ್ವಲ್ಪ ಸಮಯದವರೆಗೆ ಮೇಯಿಸಿ ೧೧ ಗಂಟೆ ಸುಮಾರಿಗೆ ನೀರು ಕುಡಿಸಲಾಗುತ್ತದೆ. ಸಾಯಂಕಾಲ ೪ ಗಂಟೆಯ ನಂತರ ಮತ್ತೊಮ್ಮೆ ನೀರು ಕುಡಿಸಲಾಗುವ ಕ್ರಮ ಕಾಣುತ್ತದೆ. ಆದರೆ ಮಳೆಗಾಲದಲ್ಲಿ ಅಥವಾ ಕಾಲುವೆ, ನದಿ, ಕೆರೆ ಅಕ್ಕಪಕ್ಕದಲ್ಲಿ ಕುರಿ ಮೇಯಿಸುವಾಗ

ದಿನಕ್ಕೆರಡು ಬಾರಿ ನೀರು ಕುಡಿಸಬೇಕೆಂಬ ನಿರ್ಬಂಧವಿರುವುದಿಲ್ಲ. ಕುರಿಗಳು ನೀರಡಿಕೆಯಾದಾಗಲೆಲ್ಲ ನೀರು ಕುಡಿದು ಮೇವು ಮೇಯುತ್ತಿರುತ್ತವೆ. ಬೇಸಿಗೆ ಕಾಲದಲ್ಲಿ ಮಧ್ಯಾಹ್ನ ಬಹಳಷ್ಟು ಬಿಸಿಲು ಇರುವುದರಿಂದ ಕುರಿಗಳು ಮೇವು ಮೇಯದೆ ಬಿಸಿಲಿನ ತಾಪಕ್ಕೆ ಆಯಾಸಪಡುತ್ತಾ ಗುಂಪಾಗಿ ಒಂದು ಕಡೆ ಮುಖ ನೆಲಕ್ಕಿಟ್ಟು ನಿಲ್ಲುತ್ತವೆ. ಮರಗಿಡಗಳಿದ್ದರೆ ನೆರಳಿಗೆ ಹೋಗಿ ನಿಲ್ಲುತ್ತವೆ. ಈ ಸಮಯದಲ್ಲಿ ಅರ್ಧಗಂಟೆ ಅಥವಾ ಒಂದು ಗಂಟೆ ಗಿಡಗಳ ನೆರಳಲ್ಲಿ ಕುರಿಗಳನ್ನು ತಬ್ಬಿ, ತಾವು ಗುಡಾರದಿಂದ ತಂದ ಬುತ್ತಿಯನ್ನು ಊಟ ಮಾಡುತ್ತಾರೆ. ಬಿಸಿಲಿನ ತಾಪ ಕಡಿಮೆಯಾದ ನಂತರ ಕುರಿಗಳನ್ನು ಮೇಯಲು ಹೊಡೆಯುವುದು ಕಂಡುಬರುತ್ತದೆ.

**ಚೆನ್ನಾಗಿ ಮೇಯುವುದು :** ಕುರಿಗಳು ದಿನವಿಡೀ ಮೇವು ಮೆಯುತ್ತವೆಯಾದರೂ ತಂಪು ಹೊತ್ತಿನ ಸಮಯದಲ್ಲಿ ಮೇಯ್ದಂತೆ ಬಿಸಿಲಿನ ಸಮಯದಲ್ಲಿ ಮೇಯುವುದಿಲ್ಲ. ಬೆಳಿಗ್ಗೆ ೯ ರಿಂದ ೧೧ ಗಂಟೆವರೆಗೆ ಮತ್ತು ಸಂಜೆ ೪.೩೦ ರಿಂದ ೬.೩೦ರವರೆಗೆ ಚೆನ್ನಾಗಿ ಮೇಯುವುದು ಕಾಣುತ್ತದೆ. ವಿಶೇಷವಾಗಿ ಕುರಿಗಳು ಗುಡಾರದ ಕಡೆ ಬರುವಾಗ ಅಥವಾ ಸೂರ್ಯಾಸ್ತವಾದಂತೆಲ್ಲಾ ಮೇಯುವುದೇ ಹೆಚ್ಚು. ಈ ಸಮಯದಲ್ಲಿ ಎಷ್ಟೇ ಹೊಡೆದರೂ ಮುಂದಕ್ಕೆ ಹೆಜ್ಜೆ ಹಾಕದೆ ನಿಂತಲ್ಲೇ ನಿಂತು ಮೇಯುತ್ತವೆ. ಗುಡಾರದ ಕಡೆ ಒತ್ತಾಯಪೂರ್ವಕವಾಗಿ ಹೊಡೆದುಕೊಂಡು ಬರಬೇಕು. ಕಾರಣವೆಂದರೆ ತಂಪಾದ ವಾತವರಣ ಮತ್ತು ಮರುದಿನ ಮುಂಜಾನೆಯವರೆಗೆ ಮೇವು ಮೇಯಲು ಅವಕಾಶವಿರುವುದಿಲ್ಲ ಎಂಬುದಾಗಿದೆ. ಆದರೆ ಮರಿ ಕುರಿಗಳು ಸಾಯಂಕಾಲವಾದಂತೆಲ್ಲಾ ತಮ್ಮ ಮರಿಗಳನ್ನು ನೆನಸಿಕೊಂಡು, ನಿಂತು ಮೇಯದೆ ಗುಡಾರದ ಕಡೆ ಬರಲು ದಡಬಡಿಸುತ್ತಿರುತ್ತವೆ.

ಆಹಾರ

ಭೂಮಿಯ ಮೇಲೆ ಜನಿಸಿದ ಪ್ರತಿಯೊಂದು ಜೀವರಾಶಿಗೂ ಬದುಕುವುದಕ್ಕೆ ಗಾಳಿ, ನೀರು ಮತ್ತು ಆಹಾರ ಮೂಲಾಧಾರವಾಗಿದೆ. ದೇಹದಲ್ಲಿ ನಡೆಯುವ ಜೈವಿಕ ರಾಸಾಯನಿಕ ಕ್ರಿಯೆಗಳಿಗೆ ದೇಹದ ಬೆಳವಣಿಗೆಗೆ ಉತ್ಪತ್ತಿಗೆ ಅಥವಾ ಪುನರ್ ಉತ್ಪತ್ತಿಗೆ ಇವು ಅತಿ ಮುಖ್ಯವಾಗಿವೆ. ಇವುಗಳಲ್ಲಿ ಯಾವುದಾದರೂ ಒಂದರ ಅಭಾವವಾದಲ್ಲಿ ಪ್ರಾಣಿ ಜೀವಂತವಾಗಿ ಉಳಿಯಲಾರದು. ಅಲೆಮಾರಿ ಕುರುಬರು ತಮ್ಮ ಬದುಕುಗಳಿಗೆ ಸರಿಯಾದ ಆಹಾರವನ್ನು ಸಾಕಷ್ಟು ಪ್ರಮಾಣದಲ್ಲಿ ಪೂರೈಸಬೇಕು. ಅವುಗಳ ಆಹಾರದ ಬಗ್ಗೆ ಹೆಚ್ಚು ಕಾಳಜಿ ವಹಿಸಬೇಕು. ಇಲ್ಲವಾದಲ್ಲಿ ಕುರಿ ಸಂಗೋಪನೆ ವೃತ್ತಿಯಲ್ಲಿ ಅಪಾರ ನಷ್ಟ ಮತ್ತು ತೊಂದರೆ ಅನುಭವಿಸಬೇಕಾಗುತ್ತದೆ. ಕುರಿ-ಆಡುಗಳಿಗೆ ಸರಿಯಾದ ಆಹಾರವನ್ನು ಸಾಕಷ್ಟು ಪ್ರಮಾಣದಲ್ಲಿ ಕೊಟ್ಟಲ್ಲಿ ಹೆಚ್ಚು ಹಾಲು ಕೊಡುವುದರ ಜೊತೆಗೆ ಮರಿಗಳ ಬೆಳೆವಣಿಗೆ ಸರಿಯಾಗಿ ಆಗುವುದು. ಅವು ಬೇಗನೆ ಬೆದೆಗೆ ಬಂದು ಆರೋಗ್ಯದಿಂದ ಉತ್ತಮ ಮರಿಗಳನ್ನೇ ನೀಡುವವು. ಆಗ ಅವರ ಆರ್ಥಿಕ ಸಂಪತ್ತು ಸುಧಾರಿಸುವುದಲ್ಲದೆ ಉತ್ತಮ ಜೀವನ ನಿರ್ಮಾಣವಾಗುವುದು.

## ಕುರಿ-ಮೇಕೆಗಳ ಆಹಾರ

ಅಲೆಮಾರಿ ಕುರುಬರ ಕುರಿಹಿಂಡುಗಳ ಬೆಳೆವಣಿಗೆ ನಿಸರ್ಗದಲ್ಲಿ ದೊರೆಯುವ ಮೇವು-ನೀರನ್ನೇ ಅವಲಂಬಿಸಿದೆ. ನಿಸರ್ಗದತ್ತವಾಗಿ ಕುರಿ-ಮೇಕೆಗಳಿಗೆ ರಸಭರಿತವಾದ ಹಸಿರು ಚಿಗುರುಹುಲ್ಲು, ತಪ್ಪಲು ಇತ್ಯಾದಿ ಸತ್ವಯುತವಾದ ಆಹಾರಬೇಕು. ಕುರಿಗಳು ಎಳೆಯ ಚಿಗುರು ಹುಲ್ಲನ್ನು ಬಹಳ ಪ್ರೀತಿಯಿಂದ ತಿನ್ನುತ್ತವೆ. "ಚಿಗುರು ಹುಲ್ಲಿನಲ್ಲಿ ಪೋಷಕಾಂಶ ಹೆಚ್ಚು ಇರುವುದು ಎಲ್ಲಾರಿಗೂ ತಿಳಿದ ವಿಷಯ. ಹಸಿರು ಹುಲ್ಲಿನಲ್ಲಿರುವಷ್ಟು 'ಎ' ಜೀವಸತ್ವ ಇನ್ನಾವ ಪದಾರ್ಥಗಳಲ್ಲಿಯೂ ಇಷ್ಟು ಸುಲಭವಾಗಿ ಸಿಗಲಾರದು. ಲವಣ ಮತ್ತು ಖನಿಜಾಂಶವುಳ್ಳ ಹಸಿರು ಮೇವು ಕುರಿ-ಮೇಕೆಗಳಿಗೆ ಅವಶ್ಯಕ. ಇಂತಹ ಲವಣ ಮತ್ತು ಖನಿಜಾಂಶವುಳ್ಳ ಕವಲು ಹುಲ್ಲು ಕುರಿಗಳಿಗೆ ಉತ್ತಮ ಆಹಾರ. ಕುರಿಗಳು ಬೆಳಗಿನ ಮೂರು ಗಂಟೆಗಳ ಕಾಲ ಬಯಲಿನಲ್ಲಿ ಮೇಯುತ್ತಿರುವಾಗ, ಹೊಂಬಿಸಿಲಿನ ನೀಲಾತೀತ ರಶ್ಮಿಗಳು ಕುರಿಗಳ ಮೈಮೇಲೆ ಬೀಳುವುದರಿಂದ ಅವುಗಳಿಗೆ 'ಡಿ' ಜೀವಸತ್ವವು ಅಧಿಕ ಪ್ರಮಾಣದಲ್ಲಿ ಸಿಗುವುದರಿಂದ ಇದರ ಫಲವಾಗಿ ಕುರಿಗಳ ಬೆಳವಣಿಗೆ ಉತ್ತಮವಾಗುವುದು" (ರಾಮರಾವ್ ಜ್ಯೋತಿ: ೧೯೮೯:೪೮). ಕುರಿಗಳಿಗೆ ಇವು ನಿಸರ್ಗದಲ್ಲಿ ದೊರೆಯುತ್ತವೆ. ಇದನ್ನು ಅಲೆಮಾರಿ ಕುರುಬರು ಮಳೆಗಾಲದ ಅವಧಿಯಲ್ಲಿ ಗುಡ್ಡಗಾಡು ಪ್ರದೇಶದಲ್ಲಿ ಗುಡಾರ ಹೂಡಿದಾಗ ಕುರಿ-ಮೇಕೆಗಳಿಗೆ ಮೇಯಿಸಿದರೆ ಮಳೆಗಾಲದ ನಂತರ ಹೊಲಗದ್ದೆಗಳಲ್ಲಿರುವ ಭತ್ತ, ಕಬ್ಬು ಮತ್ತು ಜೋಳದ ಬೆಳೆಗಳನ್ನು ಕಟಾವು ಮಾಡಿದ ನಂತರ ಮೇಯಿಸುತ್ತಾರೆ.

ಕುರಿಗಳ ಉಣ್ಣೆಯು ಒಂದು ಜೀವನೋಪಯೋಗಿ ವಸ್ತುವಾಗಿದೆ. ಇದರ ಬೆಳವಣಿಗೆಗೆ ಸಸಾರಜನಕದ ಅಮೈನೋ ಆಮ್ಲಗಳು ಬಹಳ ಅವಶ್ಯಕವಿದೆ. ಇದು ಹಸಿರು ಹುಲ್ಲಿನಲ್ಲಿ ಸಿಗುವುದು. ಹಸಿರು ಹುಲ್ಲನ್ನು ಪೂರೈಸಿದಲ್ಲಿ ಕುರಿಗಳು ಉತ್ತಮ ಉಣ್ಣೆ ಉತ್ಪಾದಿಸುವವು. ಈ ಉದ್ಯೋಗವು ಲಾಭದಾಯಕವಾಗಬೇಕಾದರೆ ಅವುಗಳಿಗೆ ಮೇಯಲು ವರ್ಷವಿಡಿ ಹೊಟ್ಟೆ ತುಂಬುವಷ್ಟು ಹಸಿರು ಮೇವಿನ ಅವಶ್ಯಕತೆ ಇದೆ.

ಆಡುಗಳು ವಿವಿಧ ಬಗೆಯ ದ್ವಿದಳ ಧಾನ್ಯಗಳ ಮೇವು, ಗಿಡಗಂಟೆಗಳ ಎಲೆ, ಚಿಗುರು, ಮೇವು ಮತ್ತು ಜಾಲೆ, ಜಂಬೆ, ರಿಜ್ಜರ್ ಇತ್ಯಾದಿ ಗಿಡಗಳ ಕಾಯಿಗಳನ್ನು ತಿನ್ನಲು ಇಷ್ಟಪಡುತ್ತವೆ. ಅದು ಹುಲಸಾದ ಮೇವನ್ನು ತಿನ್ನುವುದಿಲ್ಲ. ಆಡು ನೆಲದ ಮೇಲೆ ಮೇಯದೆ ಸ್ವಲ್ಪ ಎತ್ತರದ ಎಲ್ಲಾ ತರಹದ ಗಿಡಗಂಟೆಗಳ ಎಲೆಗಳನ್ನು ತಿನ್ನುತ್ತದೆ. ಪಶುವೈದ್ಯರ ಪ್ರಕಾರ ಸಾಧಾರಣವಾಗಿ ಒಂದು ಆಡಿಗೆ ದಿನಂಪ್ರತಿ ೫ ಕೆ.ಜಿ. ಹುಲ್ಲು ಮೇವು ಮತ್ತು ೦.೨ ರಿಂದ ೦.೭ ಕೆ.ಜಿ.ವರೆಗೆ ದಾಣಿ ಮಿಶ್ರಣ ಕೊಡಬೇಕೆಂದು ಸಲಹೆ ನೀಡುತ್ತಾರೆ.

"ಒಂದು ಕುರಿಗೆ ದಿನಂಪ್ರತಿ ಸುಮಾರು ೪ ರಿಂದ ೬ ಕೆ.ಜಿ.ಯಷ್ಟು ಹಸಿರು ಮೇವಿನ ಅವಶ್ಯಕತೆ ಇರುತ್ತದೆ. ಸಂರಕ್ಷಣೆ ಮಾಡಿದ ಒಂದು ಎಕರೆ ಹುಲ್ಲುಗಾವಲಿನಲ್ಲಿ ೩-೫ ಕುರಿಗಳನ್ನು ಮೇಯಿಸ ಬಹುದು. ಆದರೆ ಹೆಚ್ಚು ಇಳುವರಿ ಕೊಡುವಂತಹ ಮೇವಿನ ಬೆಳೆಗಳನ್ನು ಬೆಳೆಯಿಸಿದಲ್ಲಿ ಅಥವಾ ಇಂತಹ ಮೇವನ್ನು ಕಟಾವು ಮಾಡಿ ಒಣಗಿಸಿ ಕೂಡಿಟ್ಟು, ಕುರಿಗಳಿಗೆ

ಕೊಟ್ಟಿಗೆಯಲ್ಲಿ ಮೇಯಿಸುವಂತಹ ಕ್ರಮವನ್ನು ಅಳವಡಿಸಿಕೊಂಡಲ್ಲಿ ಒಂದು ಎಕರೆಯಲ್ಲಿ ಉತ್ಪಾದಿಸಿದ ಮೇವಿನಿಂದ ಸುಮಾರು ೨೦ ಕುರಿಗಳನ್ನು ಸಾಕಬಹುದು. ಕುರಿ-ಮೇಕೆಗಳನ್ನು ಬರೀ ಹುಲ್ಲುಗಾವಲಿನಲ್ಲಿ ಮೇಯಿಸಿ ಸಾಕುವುದು ನಮ್ಮಲ್ಲಿರುವ ಸಾಮಾನ್ಯ ಪದ್ಧತಿ. ಆದ್ದರಿಂದ ಮೇವಿನ ಇಳುವರಿ ಕಡಿಮೆಯಾಗುವ ಋತುಗಳಲ್ಲಿ ಕುರಿಗಳ ಬೆಳವಣಿಗೆ ಕುಂಠಿತವಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಕುರಿಗಳನ್ನು ಮೇಯಿಸುವುದರ ಜೊತೆಗೆ ದೊಡ್ಡಿಯಲ್ಲಿ ಸಂಜೆಯ ನಂತರ, ವಿಶ್ರಾಂತಿ ಸಮಯದಲ್ಲಿ ತುಂಡು ಮಾಡಿದ ರಾಗಿ ಹುಲ್ಲು, ಇಬ್ಬನಿ ಜೋಳ ಅಥವಾ ಇತರೆ ಒಣ ಮೇವು ಕೊಡುವುದರಿಂದ ಕುರಿಗಳ ಬೆಳವಣಿಗೆಯನ್ನು ಹೆಚ್ಚಿಸಲು ಸಾಧ್ಯವಾಗುತ್ತದೆ. ಇಲ್ಲವೆಂದರೆ ತಿಂಡಿ ಮಿಶ್ರಣವನ್ನು ಆಹಾರ ಧಾನ್ಯಗಳಿಂದ ತಯಾರಿಸಿ ಕೊಳ್ಳಬಹುದು. ಈ ಧಾನ್ಯಗಳ ಜೊತೆಗೆ ಹತ್ತಿಕಾಳು, ಶೇಂಗಾಹಿಂಡಿ, ಎಳ್ಳುಹಿಂಡಿ, ಹುರುಳಿನುಚ್ಚು, ಕುಸುಬೆ ಮತ್ತು ಸೂರ್ಯಕಾಂತಿ ಹಿಂಡಿಗಳನ್ನು ಸಹ ಸೇರಿಸಬಹುದು. ಈ ರೀತಿ ಮಾಡುವುದರಿಂದ ಕುರಿ-ಮೇಕೆಗಳೆರಡು ಹೆಚ್ಚು ಹಾಲು ಕೊಡುವುದರ ಜೊತೆಗೆ ಮರಿಗಳು ಮತ್ತು ತಾಯಿಗಳು ದಷ್ಟಪುಷ್ಟವಾಗಿ ಬೆಳೆಯುತ್ತವೆ" ಎಂದು ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮದ ಉಪ ನಿರ್ದೇಶಕರಾದ ಡಾ. ಜಗನ್ನಾಥ ಅವರು ಕ್ಷೇತ್ರಕಾರ್ಯದ ಸಂದರ್ಶನದಲ್ಲಿ ತಿಳಿಸುತ್ತಾರೆ.

ಕುರಿ-ಮೇಕೆಗಳು ಮೇಯುವ ಮೇವಿನ ಹೆಸರುಗಳನ್ನು ಋತುಮಾನಕ್ಕೆ ಅನುಗುಣವಾಗಿ ವಿಂಗಡಿಸಿ ಈ ಕೆಳಗಿನಂತೆ ಹೆಸರಿಸಲಾಗಿದೆ. ಕೆಲವು ಮೇವುಗಳು ಎಲ್ಲಾ ಕಾಲದಲ್ಲಿ ಎಲ್ಲಾ ಪ್ರದೇಶಗಳಲ್ಲಿ ದೊರೆಯುತ್ತ ವೆಂಬುದನ್ನು ಮರೆಯುವಂತಿಲ್ಲ.

**ಮಳೆಗಾಲ :** ಈ ಅವಧಿಯಲ್ಲಿ ದೊರೆಯುವ ಮೇವುಗಳೆಂದರೆ ಮುಂಗಾರುಚಿಗುರು, ಕರಿಕೆ, ಸಿಬಕಾನೇಹುಲ್ಲು, ಬಾದೆಹುಲ್ಲು ರವದೆಹುಲ್ಲು ಶ್ಯಾಡುಹುಲ್ಲು, ಕಲ್ಲುಂಚೆ, ಕಾರೆ ತಪ್ಪಲು, ಕವಳೆ ತಪ್ಪಲು, ಗೊರಬೆ ತಪ್ಪಲು, ಅಡವಿ ಚವಳಿತಪ್ಪಲು. ಇವುಗಳ ಜೊತೆಯಲ್ಲಿ ಆಡುಗಳಿಗೆ ಪ್ರಿಯವಾದ ಬಳ್ಳಿಗಳು ಗುಡ್ಡದಲ್ಲಿ ದೊರೆಯುತ್ತವೆ. ಅಂತವುಗಳೆಂದರೆ ಅಮೃತಬಳ್ಳಿ, ದಾಂಗಡಿಬಳ್ಳಿ, ಯಾರಿಬಳ್ಳಿ, ಕತ್ರಿಬಳ್ಳಿ, ಹಾಲಬಳ್ಳಿ ಇತ್ಯಾದಿ.

**ಚಳಿಗಾಲ :** ಈ ಅವಧಿಯಲ್ಲಿ ಹೊಲಗದ್ದೆಗಳಲ್ಲಿ ಬೆಳೆದ ಬೆಳೆಗಳನ್ನು ಕಟಾವು ಮಾಡುತ್ತಿರುತ್ತಾರೆ. ಕಟಾವು ಮಾಡಿದ ಹೊಲಗದ್ದೆಗಳಲ್ಲಿ ಕುರಿ-ಮೇಕೆಗಳನ್ನು ಮೇಯಲು ಬಿಡುತ್ತಾರೆ. ಈ ಸಮಯದಲ್ಲಿ ನೆಲ್ಲುತೆನೆ ಸೊಂಟಿಜಬ್ಬಲ, ಭತ್ತದಚಿಗುರು, ಹುಲ್ಲಿನ ಜೇಕು ಇತ್ಯಾದಿ ಗದ್ದೆಗಳಲ್ಲಿ ದೊರೆತರೆ ಅರೆ ನೀರಾವರಿ ಮತ್ತು ಬಯಲು ಭೂಮಿಯಲ್ಲಿ ಬೆಳೆಕಸ, ಗೋಳಿ ಫಲ್ಲೆ, ಗುಗ್ಗರ ಆಲುಬು, ಬಿದರ ಆಲುಬು, ಅಕ್ಕರಿಕೆ ತಪ್ಪಲು ಇತ್ಯಾದಿಗಳನ್ನು ತಿನ್ನುತ್ತವೆ.

**ಬೇಸಿಗೆ ಕಾಲ :** ಬಹಳಷ್ಟು ಹೊಲ-ಗದ್ದೆಗಳು ಕೊಯ್ಲಾಗಿರುತ್ತವೆ. ಈ ಸಮಯದಲ್ಲಿ ಸಿಗುವ ಪ್ರಮುಖ ಮೇವುಗಳೆಂದರೆ ಜೋಳದ ಸೊಪ್ಪು, ಸೂರ್ಯಕಾಂತಿ ತೆನೆ ಮತ್ತು ಎಲೆ, ಹತ್ತಿಎಲೆ, ಮೆಣಸಿನಕಾಯಿ ಎಲೆ, ಕಡಲೆ ಹೊಟ್ಟು, ಕುಸುಬೆ ತೆನೆ, ಜಾಲಕಾಯಿ, ರಿಚ್ಚರಕಾಯಿ, ಜಂಬೆಕಾಯಿಗಳ ಜೊತೆಗೆ ಜಂಬೆ, ನುಗ್ಗೆ, ಸುಬಾಬುಲ್, ಅಗಸೆ, ಔಡ್ಲ ಇತ್ಯಾದಿ ತಪ್ಪಲುಗಳ

ಮೇವುಗಳನ್ನು ತಿನ್ನುತ್ತವೆ. ಸುಬಾಬುಲ್ ಮೇವನ್ನು ಹೆಚ್ಚಾಗಿ ಕುರಿಗಳಿಗೆ ತಿನ್ನಿಸಿದರೆ ಉಣ್ಣೆಯು ಉದುರಿ ಹೋಗಿ ಕುರಿಗಳು ವಿಕಾರವಾಗಿ ಕಾಣುತ್ತವೆ. ಇದಕ್ಕೆ ಕಾರಣ 'ಮಿಮೋನಿನ್' ಎಂಬ ವಿಷಕಾರಕ ಅಂಶ ಸುಬಾಬುಲ್‌ನಲ್ಲಿರುವುದು. ಆದ್ದರಿಂದ ಕುರಿಗಳಿಗೆ ಇದನ್ನು ಹೆಚ್ಚಾಗಿ ಕೊಡಬಾರದು. ಹಾಗೆಯೇ ಜಾಲೆ ತಪ್ಪಲು ಮತ್ತು ಅದರ ಕಾಯಿಗಳು ಕುರಿ-ಮೇಕೆಗಳಿಗೆ ಬಹಳ ಒಳ್ಳೆಯ ಆಹಾರ. ಇದನ್ನು ಕುರಿ- ಮೇಕೆಗಳು ಎಷ್ಟು ತಿನ್ನುತ್ತವೆಯೋ ಅಷ್ಟೂ ಆರೋಗ್ಯವಾಗಿರುತ್ತವೆ.

**ಕುರಿ ಮೇಯಿಸಲು ಹೋಗುವಾಗ ತೆಗೆದುಕೊಂಡು ಹೋಗುವ ಸಾಮಾನುಗಳು**

ದೈನಂದಿನ ಕಾರ್ಯ ಚಟುವಟಿಕೆಗಳಲ್ಲಿ ತೊಡಗಲು ಹೊರಡುವಾಗ ಕೆಲವು ಸಾಮಾನು ಗಳನ್ನು ತೆಗೆದುಕೊಂಡು ಹೋಗುವುದು ರೂಢಿ. ಹಾಗೆಯೇ ಅಲೆಮಾರಿ ಕುರುಬರು ಕುರಿ ಮೇಯಿಸಲು ಅಡವಿಗೆ ಹೊರಡುವಾಗ ಹಲವು ಸಾಮಾಗ್ರಿಗಳನ್ನು ತೆಗೆದುಕೊಂಡು ಹೋಗುವರು. ಅವುಗಳನ್ನು ಋತುಮಾನಕ್ಕನು ಗುಣವಾಗಿ ಬದಲಾಯಿಸಲಾಗುವುದು. ಮಳೆ ಗಾಲದಲ್ಲಿ ತಾನು ತೊಯ್ಯದಂತೆ ರಕ್ಷಿಸಿಕೊಳ್ಳಲು ಪ್ಲಾಸ್ಟಿಕ್ ಚೀಲ, ಹೆಗಲಮೇಲೆ ಕೋಲು, ಕೈಯಲ್ಲಿ ಕೊಡ್ಲೆ ಆಗತ್ಯವಾಗಿವೆ. ಚಳಿಗಾಲದಲ್ಲಿ ಕೊಡ್ಲೆ ಮತ್ತು ಕುರಿ ಪೆಕಟ್ಟಿಗೆ ಹಾಗೂ ಬೇಸಿಗೆ ಕಾಲದಲ್ಲಿ ಕೋಲನ್ನು ಮಾತ್ರ ತೆಗೆದುಕೊಂಡು ಹೋಗಲಾಗುತ್ತದೆ. ಆದರೆ ಹೊಟ್ಟೆಚೀಲ (ಬುತ್ತಿಯ ಚೀಲ) ಮಾತ್ರ ಇಡೀ ವರ್ಷ ಕುರಿಕಾಯುವವರಲ್ಲಿ ಇದ್ದೇ ಇರುತ್ತದೆ.

**ಮರಿಗಳ ಆಹಾರ ಮತ್ತು ಆರೈಕೆ**

'ಮರಿಗಳ ಅಭಿವೃದ್ಧಿಯೇ ಅಲೆಮಾರಿ ಕುರುಬರ ಸಂವೃದ್ಧಿಯಾಗಿದೆ'. ಕುರಿಮರಿ, ತಾಯಿಯ ಗರ್ಭದಲ್ಲಿರುವಾಗಿನಿಂದ ಹಿಡಿದು ದೊಡ್ಡದಾಗಿ ಬೆಳೆದು, ಮಾರಾಟ ಮಾಡು ವವರೆಗೆ ಅದನ್ನು ಜೋಪಾನ ಮಾಡುವುದೇ ಇವರ ಕಾಯಕವಾಗಿದೆ. ಕುರಿಗಳು ಒಂದು ಮರಿ ಹಾಕುವುದು ಸಾಮಾನ್ಯವಾದರೂ ಕೆಲವೊಮ್ಮೆ ಎರಡು ಇಲ್ಲವೆ ಮೂರು ಮರಿಗಳನ್ನು ಈಯುತ್ತವೆ. ಸೌಂದಲಗ ಅಪ್ಪಣ್ಣನವರ ಕುರಿ ಹಿಂಡಿನಲ್ಲಿ ಒಂದು ಕುರಿಯು ನಾಲ್ಕು ಮರಿಗಳಿಗೆ ಜನ್ಮ ನೀಡಿದ ಉದಾಹರಣೆಯಿದ್ದು ಎಲ್ಲಾ ಮರಿಗಳು ಆರೋಗ್ಯವಾಗಿದ್ದವು. ಮರಿಗಳು ಜನಿಸಿ ಎದ್ದು ನಿಂತ ತಕ್ಷಣ ತಾಯಿಯ ಮೊಲೆಯ ಗಿಣ್ಣದ ಹಾಲನ್ನು ಕುಡಿಸುತ್ತಾರೆ. ಮೊದಲು ೫ ದಿನಗಳವರೆಗೆ ತಾಯಿಯ ಹಾಲೇ ಶ್ರೇಷ್ಠ. ಗಿಣ್ಣದ ಹಾಲಿನಲ್ಲಿ ಸಸಾರಜನಕ ಮತ್ತು ಖನಿಜಾಂಶಗಳು ಹೆಚ್ಚಿನ ಪ್ರಮಾಣದಲ್ಲಿರುತ್ತವೆ. ಐದು ದಿನಗಳ ನಂತರ ಹಾಲಿ ನಲ್ಲಿಯ ಸಸಾರಜನಕ ಮತ್ತು ಖನಿಜಾಂಶಗಳು ಕಡಿಮೆಯಾಗುತ್ತವೆ. ಗಿಣ್ಣದ ಹಾಲಿನಿಂದ ಮರಿಗಳ ಆರೋಗ್ಯ ಬೆಳೆವಣಿಗೆ ಸರಿಯಾಗಿ ಆಗುವುದಲ್ಲದೆ ಅವು ರೋಗ ನಿರೋಧಕ ಶಕ್ತಿಯನ್ನು ಪಡೆದುಕೊಳ್ಳುತ್ತವೆ. ಸಾಮಾನ್ಯವಾಗಿ ಕುರಿ-ಮೇಕೆಗಳು ಮರಿ ಹಾಕಿದ ಕೂಡಲೇ ಆದರ ವಾಸನೆಯಿಂದ ತನ್ನ ಮರಿಯನ್ನು ಗುರುತು ಹಿಡಿದು ತನ್ನಷ್ಟಕ್ಕೆ ತಾನು ಹಾಲುಣಿಸುತ್ತವೆ. "ಒಂದು ವೇಳೆ ಮರಿ ಹಾಕಿದ ಕುರಿಗೆ ಹಾಲು ಬೀಳದಿದ್ದರೆ ಅಥವಾ ಮರಿಯ ತಾಯಿ ಸತ್ತಿದ್ದರೆ

ಹಾಲು ಹೆಚ್ಚಿರುವ ಕುರಿಯ ಹಾಲನ್ನು ಮರಿಯ ಮೈಮೇಲೆ ಚಿಮುಕಿಸಿ ಹಾಲು ಉಣಿಸಲು ಹಚ್ಚಿ ಸಾಕು ತಾಯಿಯಾಗಿ ಮಾರ್ಪಡಿಸುತ್ತಾರೆ" (ರಾಮರಾವ್ ಜ್ಯೋತಿ:೧೯೮೯:೫೦).

ಮರಿಗಳು ಮೇವು ಮೇಯ್ದು ಜೀವಿಸುವವರೆಗೆ ದಿನಕ್ಕೆರಡು ಬಾರಿಯಂತೆ ಅಂದರೆ ಮುಂಜಾನೆ ಕುರಿಗಳು ಮೇಯಲು ಅಡವಿಗೆ ಹೋಗುವ ಮುಂಚೆ ಮತ್ತು ಸಂಜೆ ಗುಡಾರಕ್ಕೆ ಬಂದ ನಂತರ ಹಾಲುಣಿಸುತ್ತಾರೆ. ಮರಿಗಳು ಜನಿಸಿದ ಒಂದು ತಿಂಗಳವರೆಗೆ ತಾಯಿಯ ಹಾಲನ್ನೇ ಕುಡಿದು ಜೀವಿಸುತ್ತವೆ. ತಿಂಗಳಾದ ನಂತರ ಚಿಗುರು ಮೇವು ತಿನ್ನಲು ಆರಂಭಿಸುತ್ತವೆ. ಅಲೆಮಾರಿ ಕುರುಬರು ಒಂದು ತಿಂಗಳು ಮೇಲ್ಪಟ್ಟ ಮರಿಗಳಿಗೆ ತಾಯಿಯ ಹಾಲಿನ ಜೊತೆಗೆ ಚಿಗುರು ಮೇವು ಕೊಡುತ್ತಾರೆ. ಉದಾಹರಣೆಗೆ ತಪ್ಪಲು ಮೇವುಗಳಾದ ಜಾಲಿ, ಬೇವಿನ, ಬನ್ನಿ, ಸುಬಾಬಲ ಗಿಡಗಳ ತಪ್ಪಲು, ಹುಲ್ಲು ಮೇವುಗಳಾದ ನರಿಬಾಲ, ಕರಿಮೂತಿ, ಸಿಬಕೇನಿ, ಕರಿಕೆ ಹುಲ್ಲು ಇತ್ಯಾದಿ ಆಲುಬುಗಳಾದ ಗುಗ್ಗರಿ, ಚಿಂಚಲಿ, ಬಿದರ, ಹಾಲುಂಡ, ಬೆಳೆಕಸ, ಗೋಳಿಪಲ್ಲೆ ಆಲುಬುಗಳು ಇತ್ಯಾದಿ.

ಇಂತಹ ಚಿಗುರು ಮೇವುಗಳನ್ನು ಅಲೆಮಾರಿ ಕುರುಬರು, ಬೆಳಗಿನ ಜಾವದಲ್ಲಿಯೇ ತಂದು ಕುರಿಗಳು ಅಡವಿಗೆ ಹೋದನಂತರ ಕೊಡುತ್ತಾರೆ. ಮರಿಗಳಿಗೆ ಯಾವ ಸೊಪ್ಪನ್ನು ಜಾಸ್ತಿ ತಿನ್ನಿಸುತ್ತಿರಿ ಮತ್ತು ಯಾವ ಸೊಪ್ಪಿನಿಂದ ಅನುಕೂಲವೆಂದು ಕ್ಷೇತ್ರಕಾರ್ಯದ ಸಂದರ್ಶನದಲ್ಲಿ ಸೌಂದಲಗದ ಮಂಜುನಾಥ ದುರುಗಣ್ಣನವರನ್ನು ಪ್ರಶ್ನಿಸಿಸಲಾಯಿತು. "ಅಣ್ಣಾವ್ರೆ ಕಾಲಕ್ಕನುಗುಣವಾಗಿ ಅಡವಿಯಲ್ಲಿ ದೊರೆಯುವ ಎಲ್ಲ ತಪ್ಪಲುಗಳನ್ನು ನಮ್ಮ ಮರಿಗಳಿಗೆ ತಿನ್ನಿಸುತ್ತೇವೆ. ಆದರೆ ಜಾಲೆ ತಪ್ಪಲು ಮತ್ತು ಹಾಲುಂಡ ಆಲುಬುರ್ರೀ ನಮ್ಮ ಮರಿಗಳಿಗೆ ಒಳ್ಳೇದ್ರಿ. ಜಾಲೆತಪ್ಪಲು ತಿಂದ್ರೆ ಕುರಿಗಾಗಲಿ, ಮರಿಗಾಗಲಿ ಯಾವ ರೋಗ-ರುಜಿನ ಬರದಿಲ್ಲರ್ರಿ. ಹಾಲುಂಡ ಆಲುಬು ಮರಿಗಳಿಗೆ ತಿನ್ನಿಸಿದರ‍್ರೆ ಜಲ್ದಿ ದುಂಡಾಗಿ ಜಾಸ್ತಿ ತೂಕ ಬರ‍್ತಾವ್ರೀ" (ಮಾಹಿತಿ: ಮಂಜುನಾಥ ದುರಗಣ್ಣನವರ) ಎಂದು ಹೇಳುತ್ತಾನೆ. ಜಾಲೆ ತಪ್ಪಲು ಮತ್ತು ಹಾಲುಂಡ ಆಲುಬು ಇಂದು ಸಾಕಷ್ಟು ಸಿಗುತ್ತವಾ ಎಂದು ಮತ್ತೊಂದು ಪ್ರಶ್ನೆ ಕೇಳಲಾಯಿತು. "ನಾವು ಹುಡುಗರಾಗಿದ್ದಾಗ ಹೆಚ್ಚಾಗಿ ಇವನ್ನು ತಂದು ತಿನ್ನಸ್ತಾ ಇದ್ದೀವ್ರೀ. ಕುರಿಗಳಿಗೆ ಮರಿಗಳಿಗೆ ರೋಗ ಬರ‍್ತುದಿಲ್ಲರ್ರೀ. ಈವತ್ತು ಅಲ್ಲೊಂದು ಇಲ್ಲೊಂದು ಗಿಡಗಳು ಇದ್ದಾವ್ರೀ. ಜಾಲೆ ತಪ್ಪಲು ಕಡಿಲಿಕ್ಕೆ ಹೋದ್ರೆ ಹೊಲದ ಮಾಲಿಕ ನಮ್ಮನ್ನೂ ಬಡಿದು ಮರಿಕೊಡ್ಲಿ ಕಸಿದುಕೊಂಡು ಹೊಗ್ತಾನ್ರೀ" ಎಂದು ಹೇಳುತ್ತಾರೆ. ಈ ಮಾತುಗಳಲ್ಲಿ ಭವಿಷ್ಯ ಕುರಿತು ಆತಂಕ, ಭಯ ಮತ್ತು ನೋವು ಮಡುಗಟ್ಟಿರುವುದನ್ನು ಸೂಚಿಸುತ್ತದೆ. ಮರಿಗಳಿಗೆ ಎರಡು ತಿಂಗಳು ವಯಸ್ಸಾಗುತ್ತಿದ್ದಂತೆ ತಾಯಿಯ ಹಾಲು ಮರಿಗಳಿಗೆ ಸಾಲುವುದಿಲ್ಲ. ಇಂತಹ ಸಮಯದಲ್ಲಿ ಅಲೆಮಾರಿ ಕುರುಬರು ಎರಡು ತಿಂಗಳ ವಯಸ್ಸಿನ ಮರಿಗಳಿಂದ ಐದು ತಿಂಗಳ ವಯಸ್ಸಿನ ಮರಿಗಳಾಗುವವರೆಗೆ ತಾವು ಗುಡಾರ ಹೊಡಿದ ಸ್ಥಳದ ಸುತ್ತಮುತ್ತ ಬೆಳಿಗ್ಗೆ ಒಂದೆರಡು ಗಂಟೆ ಮೇಯಿಸಿ ಮಧ್ಯಾಹ್ನದ ಬಿಸಿಲಿನ ಸಮಯದಲ್ಲಿ ಗಿಡದ ನೆರಳಿಗೆ ತಬ್ಬಿ ಮತ್ತು ಸಾಯಂಕಾಲ ಒಂದೆರಡು ಗಂಟೆ ಚಿಗುರು

ಹುಲ್ಲು, ಇಲ್ಲವೇ ಪೈರು ಕೊಯ್ದ ಹೊಲಗದ್ದೆಗಳಲ್ಲಿ ಮೇಯಿಸಿಕೊಂಡು ಬರುತ್ತಾರೆ. ಸಾಮಾನ್ಯವಾಗಿ ಈ ಕಾರ್ಯವನ್ನು ಕುಟುಂಬದ ಮಹಿಳೆ ಮತ್ತು ಮಕ್ಕಳು ನಿರ್ವಹಿಸುತ್ತಾರೆ.

ಸಕಲ ಜೀವರಾಶಿಗಳು ಬದುಕಲಿಕ್ಕೆ ಆಹಾರಕ್ಕಿಂತ ನೀರು ಮುಖ್ಯ. ಇದರಿಂದ ಅಲೆಮಾರಿ ಕುರುಬರ ಮರಿಗಳು ಹೊರತಾಗಿಲ್ಲ. ಸಾಮಾನ್ಯವಾಗಿ ಮರಿಗಳಿಗೆ ಒಂದು ಸಾರಿ ನೀರು ಕುಡಿಸಿದರೆ ಸಾಕು. ಬೇಸಿಗೆ ಕಾಲದಲ್ಲಿ ಬೆಳಿಗ್ಗೆ ಮತ್ತು ಸಾಯಂಕಾಲ ಕುಡಿಸಬೇಕಾಗುತ್ತದೆ. ಮರಿಗಳಿಗೆ ಒಂದೂವರೆ ತಿಂಗಳಿಂದ ನೀರು ಕುಡಿಯಲು ಕೊಡಲಾಗುತ್ತದೆ. ನೀರು ಕುಡಿಯದೆ ತಾಯಿಯ ಹಾಲನ್ನು ಎಷ್ಟು ದಿನ ಮರಿಗಳು ಕುಡಿಯುತ್ತವೆಯೋ ಅಷ್ಟು ಆರೋಗ್ಯವಾಗಿರುತ್ತವೆ ಮತ್ತು ದಷ್ಟ-ಪುಷ್ಟವಾಗಿರುತ್ತವೆ. ಮರಿಗಳಿಗೆ ನೀರು ಕುಡಿಸಲು ಆರಂಭಿಸಿದರೆ ದಿನಾಲು ಕುಡಿಸಬೇಕು. ಇದರ ಬದಲು ಒಂದು ದಿನ ನೀರು ಮತ್ತೊಂದು ದಿನ ಹಾಲು ಕುಡಿಸಿದರೆ ಮರಿಗಳ ಆರೋಗ್ಯದಲ್ಲಿ ಅಸಮಾನತೆಯುಂಟಾಗಿ ಕೆಮ್ಮು ಜೊತೆಗೆ ಕೈಕಾಲು ಸಣ್ಣವಾಗಿ ಹೊಟ್ಟೆ ಇಳಿ ಬೀಳುತ್ತದೆ. ತಮ್ಮ ಮರಿಗಳಿಗೆ ಹೀಗಾದರೆ ತಮಗೆ ನಷ್ಟವೆಂದರಿತು ಕೊಂಡಿರುವ ಅಲೆಮಾರಿ ಕುರುಬರು ಹೆಚ್ಚು ಹಾಲು ನೀಡುವ ಕುರಿಯ ಮೊಲೆಗೆ ಕಡಿಮೆ ಹಾಲು ನೀಡುವ ಕುರಿಯ ಮರಿಯನ್ನು ಬಿಟ್ಟು ಹಾಲು ಕುಡಿಸುತ್ತಾರೆ. ಮರಿಗಳು ಮೇವು ತಿನ್ನಲು ಆರಂಭಿಸಿದ ನಂತರವೇ ನೀರು ಕುಡಿಯಲು ಕೊಡುವರು.

ಬೀಜದ ಟಗರಿನ ಆಯ್ಕೆ ಮತ್ತು ಆಹಾರ

ಕುರಿಗಳ ಅಭಿವೃದ್ಧಿಗೆ ಉತ್ತಮ ಟಗರು ಮತ್ತು ಸಾಕಷ್ಟು ಪೌಷ್ಟಿಕ ಆಹಾರ 'ಒಂದು ಹಕ್ಕಿಯ ಎರಡು ರೆಕ್ಕೆಗಳಿದ್ದಂತೆ' ಅಥವಾ "'ಒಳ್ಳೆಯ ಶುದ್ಧ ಜಾತಿಯ ಟಗರು ಅರ್ಧ ಕುರಿಹಿಂಡಿಗೆ ಸಮಾನ' ಎಂಬ ನಾಣ್ಣುಡಿಯಿದೆ. ಪೀಳಿಗೆಯ ಸುಧಾರಣೆಯು ಹಿಂಡಿನಲ್ಲಿರುವ ಟಗರುಗಳನ್ನೇ ಅವಲಂಬಿಸಿರುತ್ತದೆ. ಅಂತೆಯೇ ಟಗರು ಮತ್ತು ಪ್ರೋತ ಉತ್ತಮ ಶುದ್ಧ ಜಾತಿಯದಾಗಿರಬೇಕು. ದೃಢಕಾಯವಾಗಿಯೂ ಆರೋಗ್ಯಯುತವಾಗಿಯೂ ಇರಬೇಕು. ಎಲ್ಲಾ ಅವಯವಗಳು, ಅಂಗಾಂಗಳು ಸರಿಯಾಗಿದ್ದು ನೋಡಲು ಆಕರ್ಷಕವಾಗಿಯೂ ಸುಂದರವಾಗಿಯೂ ಇರಬೇಕು"(ರಾಮರಾವ್ ಜ್ಯೋತಿ: ೧೯೮೯:೫೧). ೩೦ ರಿಂದ ೪೦ ಕುರಿಗಳಿಗೆ ಒಂದು ಟಗರು ಸಾಕಲಾಗುತ್ತದೆ. ಆದ್ದರಿಂದ ಅಲೆಮಾರಿ ಕುರುಬರು ತಮ್ಮ ಕುರಿಗಳ ಸಂಖ್ಯೆಗನುಗುಣವಾಗಿ ಬೀಜದ ಟಗರುಗಳನ್ನು ಬಿಡುತ್ತಾರೆ. ಇವು ಕುರಿ ಹಿಂಡಿನಲ್ಲಿಯೇ ಹುಟ್ಟಿರುತ್ತವೆ. ಇವನ್ನು ಆಯ್ಕೆ ಮಾಡುವಾಗ ಕುರಿ ತಳಿಯ ಕೆಲವು ಅಂಶಗಳನ್ನು ಗಣನೆಗೆ ತೆಗೆದುಕೊಳ್ಳುತ್ತಾರೆ. ಮೊದಲು ಸೂಲು (ಈಯ್ದು) ಕುರಿಯ ಮರಿಯನ್ನು ಆಯ್ಕೆ ಮಾಡುವುದಿಲ್ಲ. ಏಕೆಂದರೆ ಮೊದಲು ಸೂಲ ಈಯ್ದಾಗ ಕುರಿಯು ದೈಹಿಕವಾಗಿ ಸಂಪೂರ್ಣ ಅಭಿವೃದ್ಧಿಯಾಗಿರುವುದಿಲ್ಲ. ಆದ್ದರಿಂದ ಎರಡನೆಯ ಅಥವಾ ಮೂರನೆಯ ಸೂಲು ಈಯ್ದ ಕುರಿಯ ಮರಿಯನ್ನು ಆಯ್ಕೆ ಮಾಡುತ್ತಾರೆ. ಈ ರೀತಿ ಮರಿಯನ್ನು ಆಯ್ಕೆ ಮಾಡಿಕೊಳ್ಳುವಾಗ ತಾಯಿಯ ದೈಹಿಕ ಲಕ್ಷಣಗಳು, ಹಾಲಿನ ಪ್ರಮಾಣ, ಮರಿಗಳನ್ನು ಜೋಪಾನ ಮಾಡುವ ರೀತಿ, ಕುರಿಯ ಆರೋಗ್ಯ ಇತ್ಯಾದಿ ಅಂಶಗಳು ಗಣನೆಗೆ ಬರುತ್ತವೆ. ಮರಿಯ ಲಕ್ಷಣ,

ನಿಲುವು, ಕೊಂಬು, ಉಣ್ಣೆ ಇತ್ಯಾದಿ ಅಂಶಗಳನ್ನು ಸಹ ಗಮನಿಸಿ ಆ ಮರಿಯನ್ನು ಮಾರಾಟ ಮಾಡದೆ ಬೀಜದ ಟಗರಾಗಿ ಹಿಂಡಿನಲ್ಲಿಟ್ಟು ಕೊಳ್ಳುತ್ತಾರೆ.

ಕುರಿಗಳ ಹಾಗೆ ಟಗರು ಅಡವಿಯಲ್ಲಿ ಸಿಗುವ ಎಲ್ಲ ಹುಲ್ಲು, ಸೊಪ್ಪು ಮತ್ತು ಕಾಯಿಗಳನ್ನು ತಿನ್ನುತ್ತವೆ. ಇದರ ಜೊತೆಗೆ ಸಜ್ಜೆ, ಜೋಳ, ಗೋಧಿ, ಉರುಳು, ನುಚ್ಚುಗಳನ್ನು ಅಥವಾ ಹತ್ತಿಕಾಳು, ಶೇಂಗಾಹಿಂಡಿ, ಸೂರ್ಯಕಾಂತಿ ಹಿಂಡಿಗಳಲ್ಲಿ ಯಾವುದಾದರೊಂದನ್ನು ಬೀಜದ ಟಗರುಗಳಿಗೆ ನೀಡಲಾಗುತ್ತದೆ. ಇದನ್ನು ಕುರಿಗಳು ಅಡವಿಯಿಂದ ಬಿಡಾರಕ್ಕೆ ಬಂದ ನಂತರ ಸಂಜೆಯಾಗಲಿ ಅಥವಾ ಮುಂಜಾನೆ ಮೇಯಲು ಅಡವಿಗೆ ಹೋಗುವ ಮುಂಚೆಯಾಗಲಿ ನೀಡುತ್ತಾರೆ. ಕೆಲವರು ಸಂಜೆ ಮತ್ತು ಮುಂಜಾನೆ ಎರಡು ಬಾರಿ ಹೆಚ್ಚುವರಿ ಆಹಾರವಾಗಿ ನೀಡುವರು. ಪಶುವೈದ್ಯರ ಪ್ರಕಾರ ಬೀಜದ ಟಗರಿಗೆ ಅಡವಿಯಲ್ಲಿ ಹುಲ್ಲು, ಸೊಪ್ಪಿನ ಜೊತೆಗೆ ಒಂದು ದಿವಸಕ್ಕೆ ಒಂದು ಕೆ.ಜಿ. ಮತ್ತು ಬೇಸಿಗೆಯ ಕಾಲದಲ್ಲಿ ಒಂದೂವರೆ ಕೆ.ಜಿ.ಯಷ್ಟು ಪೌಷ್ಟಿಕ ಕಾಳಿನ ಮಿಶ್ರಣ ಆಹಾರವನ್ನು ಕೊಟ್ಟು ಆರೈಕೆ ಮಾಡಬೇಕು. ಕಾಳಿನ ಮಿಶ್ರಣದಲ್ಲಿ ದ್ವಿದಳ ಧಾನ್ಯದ ನುಚ್ಚು ಅಥವಾ ಹಿಂಡಿ ಮಿಶ್ರಣವನ್ನು ಕೊಡಬೇಕೆಂದು ಸಲಹೆ ಮಾಡುತ್ತಾರೆ.

**ಸಂತಾನಾಭಿವೃದ್ಧಿ ಮತ್ತು ಸಂವರ್ಧನೆ**

ಸಾಮಾನ್ಯವಾಗಿ ಕುರಿಗಳು ೯ ರಿಂದ ೧೩ ತಿಂಗಳ ಅವಧಿಯಲ್ಲಿ ಮೊದಲ ಬಾರಿಗೆ ಬೆದೆಗೆ ಬಂದು ಗರ್ಭ ಧರಿಸಿದರೆ, ಆಡು ೧೦ ರಿಂದ ೧೨ ತಿಂಗಳಲ್ಲಿ ಗರ್ಭಧರಿಸುತ್ತದೆ. ಟಗರು ಮರಿ ಮತ್ತು ಹೋತ ಮರಿಗಳು ೧೨ ರಿಂದ ೧೫ ತಿಂಗಳ ಅವಧಿಯಲ್ಲಿ ಪ್ರಾಯಕ್ಕೆ ಬರುತ್ತವೆ. ಕುರಿ-ಮೇಕೆಗಳ ಸಂವರ್ಧನೆಗೆ ಅಲೆಮಾರಿ ಕುರುಬರು ತಮ್ಮ ಕುರಿ ಹಿಂಡಿನಲ್ಲಿ ೨೦-೩೦ ಕುರಿಗಳಿಗೆ ಒಂದು ಬೀಜದ ಟಗರು ಮತ್ತು ಮೇಕೆಗಳಿಗೆ ಬೀಜದ ಹೋತು ಬಿಟ್ಟಿರುತ್ತಾರೆ. ಬೀಜದ ಟಗರು ಮತ್ತು ಹೋತ ಸಾಕಣೆ ಮಾಡಿದ ಕುರಿಗಳಿಂದಲೇ ಜನಿಸಿರುತ್ತವೆ. ಕುರಿ-ಮೇಕೆಗಳ ಗರ್ಭಧಾರಣೆಯ ಅವಧಿ ಸುಮಾರು ೫ ತಿಂಗಳುಗಳಾಗಿವೆ. ಮರಿ ಹಾಕಿದ ನಂತರ ೨ ರಿಂದ ೩ ತಿಂಗಳ ಅವಧಿಯಲ್ಲಿ ಮತ್ತೆ ಬೆದೆಗೆ ಬರುತ್ತವೆ. "ಸಾಮಾನ್ಯವಾಗಿ ಕುರಿ-ಮೇಕೆಗಳು ಯುಗಾದಿ ಹಬ್ಬದ ಹಿಂದಿನ-ಮುಂದಿನ ದಿನಗಳಲ್ಲಿ ಅಂದರೆ ಮಾರ್ಚ್ ಅಥವಾ ಏಪ್ರಿಲ್ ತಿಂಗಳಲ್ಲಿ ಇಲ್ಲವೆ ನಾಗರ ಪಂಚಮಿ ಹಿಂದಿನ-ಮುಂದಿನ ಅಂದರೆ ಜುಲೈ-ಆಗಸ್ಟ್ ತಿಂಗಳಲ್ಲಿ ಬೆದೆಗೆ ಬರುತ್ತವೆ. ಯುಗಾದಿ ಹಬ್ಬದ ಸಮಯದಲ್ಲಿ ಗರ್ಭ ಧರಿಸಿದ ಕುರಿ-ಮೇಕೆಗಳು ಗಣೇಶ ಹಬ್ಬ ಎಡಬಲ ಅಂದರೆ ಆಗಸ್ಟ್ ಮತ್ತು ಸೆಪ್ಟೆಂಬರ್ ಅವಧಿಯಲ್ಲಿ ಮರಿ ಹಾಕುತ್ತವೆ. ನಾಗರಪಂಚಮಿ ಹಿಂದೆ-ಮುಂದಿನ ದಿನಗಳಲ್ಲಿ ಗರ್ಭ ಕಟ್ಟಿದ ಕುರಿಗಳು ಎಳ್ಳು ಅಮಾವಾಸ್ಯೆ (ಡಿಸೆಂಬರ್ - ಜನವರಿ) ಆಸುಪಾಸಿನಲ್ಲಿ ಮರಿ ಹಾಕುತ್ತವೆ" (ಮಾಹಿತಿದಾರ: ಹೂವಣ್ಣ:ನವಲಿ ಹಾಳ್). [ಈ ಅವಧಿಯಲ್ಲಿ ಮರಿ ಹಾಕಿದ ಕುರಿಗಳ ಹಾಲನ್ನು ಹಿಂಡಿ ಬಳಸದೆ ಮೀಸಲು ತೆಗೆದು ತುಪ್ಪ ಮತ್ತು ಹಾಲನ್ನು ಸ್ವಗ್ರಾಮಗಳಿಗೆ ತೆಗೆದುಕೊಂಡು ಹೋಗಿ ಅವರಾತ್ರಿ (ಹಿಸ್ಕಾಳೆ) ಅಮವಾಸ್ಯೆಯ ದಿನದಂದು ಸ್ವಗ್ರಾಮ

ದಲ್ಲಿರುವ ಮನೆದೇವರಿಗೆ ನೈವೇದ್ಯ ಮಾಡುತ್ತಾರೆ]. ಸಾಮಾನ್ಯವಾಗಿ ಅಗಸ್ಟ್‌ನಿಂದ ಜನವರಿ ತಿಂಗಳವರೆಗೆ ಈಯುವುದೇ ಹೆಚ್ಚು. ಕುರಿ-ಮೇಕೆಗಳಿಂದ ವರ್ಷದಲ್ಲಿ ಎರಡು ಸಾರಿ ಮರಿ ಹಾಕುವುದನ್ನು ನಿರೀಕ್ಷಿಸಲಾಗದು. ಇದು ಅಲೆಮಾರಿ ಕುರುಬರ ಬದುಕುಗಳಿಗೆ ದೊರೆಯುವ ಮೇವು-ನೀರು ರೋಗ-ರುಜಿನ ಮತ್ತು ವಾತಾವರಣವನ್ನು ಅವಲಂಬಿಸಿರುತ್ತದೆ. ಎರಡು ವರ್ಷದೊಳಗೆ ಮೂರು ಸಲ ಮರಿ ಪಡೆಯಬಹುದು. ಕೆಲವೊಂದು ಕುರಿಗಳು ಒಂದೇ ಸಲ ೨-೩ ಮರಿಗಳನ್ನು ಈಯ್ಯುತ್ತವೆ. ಅಲೆಮಾರಿ ಕುರುಬರ ಅಭಿವೃದ್ಧಿ ದೃಷ್ಟಿಯಿಂದ ಉತ್ತಮ ಗುಣಮಟ್ಟದ ಹಾಗೂ ದೃಢಕಾಯದ ಮರಿಗಳನ್ನು ಪಡೆಯಬೇಕಾದರೆ ಸಂಕರಣ ಪದ್ಧತಿಯ ಅನುಸರಿಸುವುದು ಉತ್ತಮವಾಗಿದೆ. ತಮ್ಮಲ್ಲಿರುವ ಹೆಣ್ಣು ಕುರಿಗಳಿಗೆ ಬೇರೆ ಹಿಂಡಿನಲ್ಲಿರುವ ಟಗರನ್ನು ಆಯ್ಕೆ ಮಾಡಿ ಸಂವರ್ಧನೆ ಮಾಡಿಸಬೇಕು. ಟಗರನ್ನು ಆಯ್ಕೆ ಮಾಡುವಾಗ ಅದು ಅನುವಂಶೀಯ ರೋಗ-ರುಜಿನಗಳಿಂದ ಮುಕ್ತ ವಾಗಿರಬೇಕು ಎಂದು ಎಚ್ಚರ ವಹಿಸುವುದು ಅಗತ್ಯವಾಗಿದೆ.

ಗರ್ಭನಿಂತ ಕುರಿಗಳ ಬಗ್ಗೆ ಬಳ್ಳಾರಿ ಜಿಲ್ಲೆಯ ಪಶುವೈದ್ಯ ಇಲಾಖೆಯ ಸಹಾಯಕ ನಿರ್ದೇಶಕ ರಾದ ಪ್ರಹ್ಲಾದ ಜೋಷಿಯವರು ಈ ಕೆಳಗಿನ ಸಲಹೆಯನ್ನು ನೀಡುತ್ತಾರೆ. "ಗರ್ಭನಿಂತ ಕುರಿಗಳನ್ನು ಮಿಕ್ಕ ಹಿಂಡಿನೊಂದಿಗೆ ಬೇರ್ಪಡಿಸಿ ಸಾಕಬೇಕು. ಬೀಜದ ಟಗರು ಗಳನ್ನು ಗರ್ಭ ಕಟ್ಟಿದ ಕುರಿಯ ಹಿಂಡಿನೊಂದಿಗೆ ಬಿಡಬಾರದು ಮತ್ತು ಗರ್ಭದ ಕುರಿಗಳು ಈಯ್ಯಲು ಆರು ವಾರಗಳಿರುವಾಗಲೇ ಅವುಗಳಿಗೆ ಒಳ್ಳೆಯ ಹಸಿರು ಮೇವು ಇಲ್ಲವೆ ಹಸಿರೆಲೆಗಳನ್ನು ಸ್ಥೂಲ ಆಹಾರವಾಗಿ ತಿನ್ನುವಷ್ಟು ಕೊಡಬೇಕು". ಈ ವಿಷಯವನ್ನು ಅಲೆಮಾರಿ ಕುರುಬರಾದ ಸೌಂದಲಗ ಅಪ್ಪಣ ಮತ್ತು ನವಿಲಿಹಾಳ್ ಹೂವಣ್ಣ ಅವರ ಮುಂದೆ ಪ್ರಸ್ತಾಪಿಸಿದಾಗ ಅವರು ನನಗೆ "ನೋಡ್ರಿ ಸಾಹೆಬ್ರ ಎಲ್ಲಾ ಕುರಿಗಳನ್ನು ಗುಂಪಾಗಿ ಮೇಯಿಸಿಕೊಂಡು ಈ ಅಡವಿಯಲ್ಲಿ ನಾವು ಬದುಕುವುದೇ ಕಷ್ಟಕರವಾದಾಗ ಹಿಂಡನ್ನು ಭಾಗ ಮಾಡಿ ಮೇಯಿಸುವುದು ನಮ್ಮ ಕುರುಬರಿಂದ ಆಗದ ಕೆಲಸರ್ರಿ" ಎನ್ನುತ್ತಾರೆ. ಅಲೆಮಾರಿ ಕುರುಬರು ಯಾವಾಗಲೂ ಚಲನಶೀಲ ಬದುಕಿಗೆ ಹೆಸರಾದವರು. ಕುರಿಗಳಿಗೆ ಮೇವು, ನೀರು ದೊರೆಯುವ ಕಡೆ ತಮ್ಮ ಕುರಿ ಹಿಂಡನ್ನು ಹೊಡೆದುಕೊಂಡು ಹೋಗಬೇಕು. ಹೀಗಿದ್ದಾಗ ಭಾಗ ಮಾಡಿ ಮೇಯಿಸುವುದು ಮತ್ತು ಭಾಗ ಮಾಡಿ ಹೊಡೆದುಕೊಂಡು ಹೋಗುವುದು ಇವರಿಂದ ಆಗದ ಕೆಲಸವಾಗಿ ತೋರುತ್ತದೆ.

ಆಡುಗಳೂ ೧೦ ರಿಂದ ೧೨ ತಿಂಗಳು ವಯಸ್ಸಿನಲ್ಲಿ ಗರ್ಭ ಧರಿಸುತ್ತವೆ. ಪೋತ ಮರಿ ಕೂಡಾ ೧೨ ರಿಂದ ೧೬ ತಿಂಗಳುಗಳಲ್ಲಿ ಪ್ರಾಯಕ್ಕೆ ಬರುತ್ತದೆ. ಸಾಮಾನ್ಯವಾಗಿ ಆಡುಗಳು ಕುರಿಗಳಂತೆ ಮಾರ್ಚ್, ಏಪ್ರಿಲ್ ಇಲ್ಲವೆ ಆಗಸ್ಟ್, ಸೆಪ್ಟೆಂಬರ್ ತಿಂಗಳಲ್ಲಿ ಬೆದೆಗೆ ಬಂದು ಸುಮಾರು ಐದು ತಿಂಗಳಲ್ಲಿ ಮರಿ ಹಾಕುತ್ತವೆ. ಮರಿ ಹಾಕಿದ ನಂತರ ಆಡುಗಳು ೨-೩ ತಿಂಗಳಲ್ಲಿ ಮತ್ತೆ ಬೆದೆಗೆ ಬರುತ್ತವೆ.

ಕುರಿ-ಮೇಕೆಗಳು ಬೆದೆಗೆ ಬಂದಿದ್ದನ್ನು ಗುರುತಿಸಬಹುದು. ಹಾಲು ಕೊಡುವ ಕುರಿ-

ಮೇಕೆಗಳು ಬೆದೆಗೆ ಬಂದಾಗ ಅದು ನೀಡುವ ಹಾಲಿನ ಪ್ರಮಾಣ ಕಡಿಮೆಯಾಗುತ್ತದೆ. ಆಹಾರ ಸೇವನೆಯ ಪ್ರಮಾಣ ಕಡಿಮೆಯಾಗುತ್ತದೆ. ದಿನನಿತ್ಯದ ಇರುವಿಕೆಯಲ್ಲಿ ವ್ಯತ್ಯಾಸ, ಒದರುವಿಕೆ ಹಾಗೂ ಬಾಹ್ಯ ಜನನೇಂದ್ರೀಯ ಉಬ್ಬಿದ್ದು ಸ್ವಲ್ಪ ಕೆಂಪಗೆ ಕಾಣುತ್ತದೆ. ಅಲ್ಲದೆ ಬೇರೆ ಕುರಿ-ಮೇಕೆಗಳ ಮೇಲೆ ಹತ್ತುತ್ತದೆ. ಹಿಂಡಿನಲ್ಲಿ ಟಗರು ಮತ್ತು ಹೋತ ಇದ್ದರೆ ಬೆದೆಗೆ ಬಂದ ಕುರಿ-ಆಡನ್ನು ಗುರುತಿಸುತ್ತವೆ. ಬೆದೆಗೆ ಬಂದ ಕುರಿ-ಮೇಕೆ ಗರ್ಭ ಧರಿಸದಿದ್ದಲ್ಲಿ ಮತ್ತೆ ೧೮ ರಿಂದ ೨೦ ದಿನಗಳಲ್ಲಿ ಪುನಃ ಬೆದೆಗೆ ಬರುತ್ತವೆ. ಈ ಎಲ್ಲಾ ಅಂಶಗಳು ಬೆದೆಗೆ ಬಂದ ಕುರಿ-ಮೇಕೆಗಳಲ್ಲಿ ಕಂಡುಬರುತ್ತವೆ. ಬೆದೆಗೆ ಬಂದ ಕುರಿ-ಮೇಕೆಗಳನ್ನು ಗರ್ಭಧಾರಣ ಮಾಡಿಸಲು ಒಂದು ಸಾರಿ ಟಗರು-ಹೋತ ಬಿಟ್ಟರೆ ಸಾಕು. ಗರ್ಭ ಧರಿಸಿದ ಮೇಲೆ ಸರಾಸರಿ ಐದು ತಿಂಗಳಲ್ಲಿ ಮರಿ ಹಾಕುತ್ತವೆ.

**ರೋಗದ ಮುಂಜಾಗ್ರತ ಕ್ರಮಗಳು**

- ವಲಸೆ ಹೊರಡುವ ಅಲೆಮಾರಿ ಕುರುಬರು ತಮ್ಮ 'ಕುರಿ ಪರಿವಾರ'ದ ಜೊತೆ ಆರೋಗ್ಯ ಲಸಿಕೆಗಳು, ಹೋಗುತ್ತಿರುವ ಸ್ಥಳದ ವಾತಾವರಣದ ಮಾಹಿತಿ, ರೋಗ ಪ್ರಸರಣತೆ, ಆ ಪ್ರದೇಶದ ರೋಗೋದ್ರೇಕಗಳ ಸೂಕ್ತ ಮಾಹಿತಿ ಹೊಂದಿರಬೇಕು.
- ಸಾಮಾನ್ಯವಾಗಿ ಅಲೆಮಾರಿ ಕುರುಬರು ವರ್ಷವೀಡಿ ಅಲೆದಾಡುವುದರಿಂದ ಚಳಿಗಾಲ ಮತ್ತು ಅಕ್ಟೋಬರ್‌ನಲ್ಲಿ ಕಾಣಿಸಿಕೊಳ್ಳುವ ಕಾಲುಬಾಯಿ ಜ್ವರ, ನೀಲಿನಾಲಿಗೆ ಮತ್ತು ಫೆಬ್ರುವರಿಯಲ್ಲಿ ಕಾಣಿಸಿಕೊಳ್ಳುವ ಕುರಿ ಪ್ಲೇಗಿನ ಲಸಿಕೆ ಹಾಕಿಸಬೇಕು.
- ಕುರಿಮಂದೆಯಲ್ಲಿ ಇರುವ ಮರಿಗಳು ಮತ್ತು ಗರ್ಭದ ಕುರಿಗಳ ಬಗ್ಗೆ ಹೆಚ್ಚು ಗಮನ ನೀಡಬೇಕು.
- ಎಲ್ಲಾ ಕುರಿಗಳಿಗೂ ಪರೋಪಜೀವಿಗಳಾದ ಜಂತು, ಕಾಲರಾ, ದುಂಡು ಹುಳುಗಳ ಔಷಧಿಯನ್ನು ಕಾಲಾನುಕ್ರಮವಾಗಿ ನೀಡುತ್ತಿರಬೇಕು.
- ಕುರಿಗಳನ್ನು ತಬ್ಬುವ ಜಾಗವು ನೀರಿನ ಸೌಕರ್ಯ ಇರುವ ಕೆರೆ-ಕಟ್ಟೆಗಳ ಹತ್ತಿರ ಇರಬಾರದು. ಏಕೆಂದರೆ ಆ ಊರಿನ ರೋಗಗ್ರಸ್ತ ಪ್ರಾಣಿಗಳು ಅಲ್ಲೇ ನೀರು ಕುಡಿಯುವು ದರಿಂದ ಮತ್ತು ರೈತರು ಸತ್ತ ಪ್ರಾಣಿಗಳನ್ನು ಕೆರೆಯ ಹತ್ತಿರವೆ ಬಿಸಾಡುವುದರಿಂದ ಗಳಲೆ, ಕುರಿಪ್ಲೇಗು, ಅಂತ್ರ್ಯಾಕ್ಸ್ ಬರುವ ಸಂಭವಗಳು ಹೆಚ್ಚು.
- ಕುರಿಮಂದೆ ಹಾದುಹೋಗುವ ಮತ್ತು ತಬ್ಬುವ ಊರಿನ ಹೊಲ-ಗದ್ದೆಗಳಲ್ಲಿ ಯಾವುದೇ ರೋಗ ಲಕ್ಷಣಗಳಿದ್ದರೆ, ಅವು ಕುರಿಗಳನ್ನೂ ಕಾಡುವ ಸಂಭವ ಹೆಚ್ಚಾಗಿದ್ದು, ಜಾಗೃತರಾಗಿರಬೇಕು.
- ಆಯಾ ಪ್ರದೇಶದ ವಿಷಯುಕ್ತ ಗಿಡಗಂಟೆಗಳ ಬಗ್ಗೆ ಮಾಹಿತಿ ಇರಬೇಕು.
- ಅಲೆಮಾರಿ ಕುರಿಗಾರರು ಕುರಿಮಂದೆಯನ್ನು ಊರಿನ ಇತರೆ ಪ್ರಾಣಿಗಳ ಜೊತೆ ಬೆರೆಸಬಾರದು.
- ಹೀಗೆ ಎಲ್ಲಾ ತರಹದ ಮುಂಜಾಗ್ರತಾ ಕ್ರಮಗಳನ್ನು ತೆಗೆದುಕೊಂಡು ನಡೆದಾಡುವ

ಹಣದ ಬ್ಯಾಂಕುಗಳಾದ ಕುರಿ-ಮೇಕೆಗಳನ್ನು ಆರೋಗ್ಯಕರವಾಗಿ ಬೆಳೆಸಿ ಆರ್ಥಿಕತೆ ಯನ್ನು ಹೆಚ್ಚು ಮಾಡಿಕೊಳ್ಳಬೇಕು.

ಪ್ರಸೂತಿ ಕಾರ್ಯವಿಧಾನ

ಪ್ರತಿಯೊಂದು ಪ್ರಾಣಿಯು ತನ್ನಷ್ಟಕ್ಕೆ ತಾನೇ ಮರಿಹಾಕುವುದು ಸಹಜ ಕ್ರಿಯೆಯಾಗಿದೆ. ಕೆಲವೊಮ್ಮೆ ಮರಿಹಾಕುವಾಗ ತಾಯಿ ಸಂಕಷ್ಟಕ್ಕೊಳಗಾಗಿ ತಾಯಿ ಮತ್ತು ಮರಿ ಸಾವನ್ನಪ್ಪ ಬಹುದು. ಇಂತಹ ಸಂಕಷ್ಟವನ್ನು ತಪ್ಪಿಸಲು ಅಲೆಮಾರಿ ಕುರುಬರು ಪರಂಪರಾಗತವಾಗಿ ಪೂರ್ವಜರಿಂದ ಕಲಿತುಕೊಂಡು ಬಂದ ವಿದ್ಯೆಯ ಮೂಲಕ ಕುರಿ-ಮೇಕೆಗಳಿಗೆ ಪ್ರಸೂತಿ ಮಾಡಿಸುತ್ತಾರೆ.

"ಹೆರಿಗೆ ಸಮೀಪಿಸಿದಂತೆ ಕುರಿ ನಡಿಗೆಯು ಮಂದವಾಗುತ್ತದೆ. ಬಾಲವನ್ನು ವಿಚಿತ್ರ ರೀತಿಯಲ್ಲಿ ಅಲ್ಲಾಡಿಸುತ್ತ ಮರಿ ಹಾಕುವ ಸಮಯದಲ್ಲಿ ಹಿಂಡಿನಿಂದ ಬೇರೆಯಾಗಿ ಬಿಡುತ್ತದೆ. ಮುಂಗಾಲಿನಿಂದ ನೆಲ ಕೆರೆಯುತ್ತಾ ಮಲಗುವುದು, ಏಳುವುದು, ಹೊರಳಾಡುವುದು, ಒದರುವುದು, ನಾಲ್ಕು ಕಾಲುಗಳನ್ನು ಸೆಟೆದು ನಿಲ್ಲುವುದು ಮಾಡುತ್ತದೆ"( ಗುಬ್ಬಣ್ಣವರ, ಶಿವಾನಂದ: ೧೯೯೩:೮೩).

ಕುರಿಯ ಯೋನಿಯಲ್ಲಿ ಮಡಿ ಹೊರಸೂಸುವುದು ಕುರಿ ತನ್ನ ಮರಿಗೆ ಜನನ ನೀಡುವುದರ ಮುನ್ಸೂಚನೆಯಾಗಿದೆ. ಮಡಿ ಒಡೆದ ತಕ್ಷಣ ಕುರಿ ಹೆರಿಗೆಯಾಗುವುದು ತಡವಾದಲ್ಲಿ ಕುರಿಯನ್ನು ಮಲಗಿಸಿ ಎರಡು ಕೈಯಿಂದ ಕುರಿಯ ಹೊಟ್ಟೆಯನ್ನು ಸಾವಕಾಶವಾಗಿ ಒತ್ತಲಾಗುತ್ತದೆ. ಈ ಪ್ರಕ್ರಿಯೆ ಮರಿಯ ತಲೆ ಯೋನಿಯಿಂದ ಹೊರಗಡೆ ಬರುವವರೆಗೆ ಮಾಡಿ ನಂತರ ಕೈಯನ್ನು ಒಳಹಾಕಿ ಮರಿಯನ್ನು ಹೊರಗೆಳೆಯಲಾಗುತ್ತದೆ. ಮರಿ ಗರ್ಭದಿಂದ ಹೊರಬಂದ ತಕ್ಷಣ ಅದರ ಮೂತಿ, ಮೈಯನ್ನೆಲ್ಲಾ ಒರಸಿ, ಕಾಲಿನ ಗೊರಚುಗಳನ್ನು ಚಿವುಟಿ, ತಾಯಿಯ ಮುಂದೆ ಇಡಲಾಗುತ್ತದೆ. ಕೆಲವೊಂದು ಕುರಿಗಳ ಹೆರಿಗೆ ಮಾಡಿಸುವಾಗ ಕುರಿಯನ್ನು ಮಲಗಿಸಿ ಎರಡು ಕೈಗಳಿಂದ ಹೊಟ್ಟೆಯನ್ನು ಎಷ್ಟೇ ಒತ್ತಿದರೂ ಮರಿಯ ತಲೆ ಹೊರಗೆ ಬರುವುದಿಲ್ಲ. ಆಗ ಮರಿ ಅಡ್ಡಬಿದ್ದಿರಬಹುದೆಂದು ಭಾವಿಸಿ ತನ್ನ ಎರಡು ಕೈಗಳನ್ನು ಯೋನಿಯೊಳಗೆ ತೂರಿಸಿ, ಗರ್ಭದಲ್ಲಿ ಅಡ್ಡ ಬಿದ್ದಿರುವ ಮರಿಯನ್ನು ಸರಿಯಾದ ಕ್ರಮದಲ್ಲಿ ಜೋಡಿಸಿಕೊಂಡು ಮರಿಯನ್ನು ಹೊರತೆಗೆಯಲಾಗುತ್ತದೆ. ಇನ್ನೂ ಕೆಲವೊಮ್ಮೆ ಎಷ್ಟೇ ಪ್ರಯತ್ನಪಟ್ಟರೂ ಮರಿ ಹೊರಬರದಿದ್ದಾಗ ದುಸ್ಸಾಹಸಕ್ಕೆ ಕೈಹಾಕಿ, ಅಂದರೆ ಬ್ಲೇಡಿನಿಂದ ಅಥವಾ ಕುರಿಮುಳ್ಳು ತೆಗೆಯುವ ಚಾಕುವಿನಿಂದ ಕುರಿಯ ಹೊಟ್ಟೆಯಲ್ಲಿಯೇ ಮರಿಯನ್ನು ಕೊಯ್ದು ತುಂಡು ತುಂಡು ಮಾಡಿ ಹೊರತೆಗೆಯಲಾಗುತ್ತದೆ. ಒಂದು ವೇಳೆ ಈ ರೀತಿ ಮಾಡದಿದ್ದಾಗ ಕುರಿ ಮತ್ತು ಮರಿ ಎರಡನ್ನು ಕುರುಬನು ಕಳೆದುಕೊಳ್ಳುತ್ತಾನೆ. ಆದ್ದರಿಂದ ದೊಡ್ಡ ಕುರಿಯನ್ನು ಉಳಿಸಿಕೊಳ್ಳಲು ಈ ಕಾರ್ಯ ಮಾಡಬೇಕಾದ ಅನಿವಾರ್ಯತೆ ಉಂಟಾಗುತ್ತದೆ.

ಆರೋಗ್ಯಪೂರ್ಣ ಮರಿ, ತಾಯಿಯ ಗರ್ಭದಿಂದ ಹೊರಬಂದ ತಕ್ಷಣ ಬ್ಯಾ.... ಬ್ಯಾ....

ಬ್ಯಾ... ಎಂದು ಧ್ವನಿ ಮಾಡುತ್ತದೆ. ೧೫-೨೦ ನಿಮಿಷದೊಳಗೆ ಎದ್ದು ನಿಂತು ತಾಯಿಯ ಹಾಲು ಕುಡಿಯುತ್ತದೆ. ಹಾಗೆಯೇ ಒಂದು ಗಂಟೆಯೊಳಗೆ ತಾಯಿಯ ಜೊತೆ ತಿರುಗಾಡಲು ಆರಂಭಿಸುತ್ತದೆ. ಒಂದು ವೇಳೆ ಗರ್ಭದಿಂದ ಹೊರಬಂದ ಮರಿ ಧ್ವನಿ ಮಾಡದಿದ್ದಾಗ, ಮರಿಯು ತಾಯಿಯ ಗರ್ಭದಲ್ಲಿರುವಾಗ ಕೊಳೆ (ಲೊಳೆ) ಕುಡಿದಿರಬಹುದೆಂದು ಶಂಕಿಸಿ ಮರಿಯ ಹಿಂದಿನ ಎರಡು ಕಾಲುಗಳನ್ನು ಹಿಡಿದು ಮೇಲಕ್ಕೆತ್ತಿ ಬೀಸಲಾಗುತ್ತದೆ. ಕುಡಿದ ಕೊಳೆ ಹೊರಬಿದ್ದರೆ ಮರಿ ಬದುಕುತ್ತದೆ. ಇಲ್ಲವೆಂದರೆ ಮರಿಯ ಮೂಗಿನ ಮೂಲಕ ಗಾಳಿ ಊದುವುದು ಮಾಡಲಾಗುತ್ತದೆ. ಇಷ್ಟೆಲ್ಲಾ ಪ್ರಯತ್ನಪಟ್ಟರೂ ಜೀವ ಬರದಿದ್ದಾಗ ಮರಣ ಹೊಂದಿದೆ ಎಂದು ತಿಳಿಯಲಾಗುತ್ತದೆ.

**ಪಂಗ್ಳೀಮರಿ (ಅಂಗವಿಕಲ ಮರಿ):** ಪಂಗ್ಳಿ ಎಂಬುದು ಮರಾಠಿ ಪದ. ಈ ಮರಿ ತಾಯಿಯ ಗರ್ಭದಿಂದ ಜನಿಸುತ್ತಲೇ ಅಂಗವಿಕಲವಾಗಿರುತ್ತದೆ. "ಮುಂಗಾಲುಗಳು ಒಳಗೆ ತಿರುಗಿ ಐದು ಕಾಲುಗಳಿರುವುದು. ಸ್ವಶಕ್ತಿಯಿಂದ ಎದ್ದು ನಿಂತು ಹಾಲು ಕುಡಿಯಲು ಮತ್ತು ಮೇವು ತಿನ್ನಲಾರದಷ್ಟು ಅಶಕ್ತವಾಗಿರುತ್ತದೆ. ಇಂತಹ ಮರಿ ಹುಲ್ಲು ತಿಂದು ಜೀವಿಸುವಷ್ಟು ಶಕ್ತವಾಗುವವರೆಗೆ ಗುಡಾರದಲ್ಲಿ ಸಾಕಿ ನಂತರ ಊರಿಗೆ ಸಾಗಿಸಿ ಅಲ್ಲೇ ಸಾಕಲಾಗುತ್ತದೆ. ಈ ತರಹದ ಮರಿ ಜನಿಸುವುದು 'ಸುದೈವ', ಅಥವಾ 'ದೇವರ ಅನುಗ್ರಹ'. ಈ ದೈವದ ಮರಿಯನ್ನು ಯಾವ ಕಾರಣಕ್ಕೂ ಮಾರಾಟ ಮಾಡುವುದಾಗಲಿ ಅಥವಾ ಬಲಿಕೊಡುವುದಾಗಲಿ ಮಾಡುವುದಿಲ್ಲ. ಈ ಮರಿ ತೀರಿಕೊಂಡ ಮೇಲೆ ಬಿಸಾಕದೆ ಅಥವಾ ತಿನ್ನಲು ಯಾರಿಗೂ ಕೊಡದೆ ಮಣ್ಣಿನಲ್ಲಿ ಹೂಳಲಾಗುತ್ತದೆ. ಒಂದು ವೇಳೆ ಇಂತಹ ಮರಿಯನ್ನು ನೋಡಿಕೊಳ್ಳಲು ಸ್ವಗ್ರಾಮದಲ್ಲಿ ಯಾರು ಇಲ್ಲದಿದ್ದಾಗ ತಮಗಿಷ್ಟವೆನಿಸಿದ ಗುಡಿಯ ಮುಂದೆ ದೇವರ ಹೆಸರ್ಹೇಳಿ ಬಿಟ್ಟು ಬರುತ್ತೇವೆ" (ಮಾಹಿತಿ: ಲಿಂಗಪ್ಪ, ಸಾವಿರಕುರಿ: ನವಿಲಿಹಾಳ್). ಇಂತಹ ಮರಿಗಳನ್ನು ಸಾಯುವವರೆಗೆ ರಕ್ಷಣೆ ಮಾಡುವುದು ಅವರ ಮಾನವಿಯ ಗುಣಗಳ ಪ್ರತೀಕವಾಗಿದೆ.

**ಹಾಲುಹಿಂಡುವುದು : ಹುಡಿ ಆಗುವುದು : ನಸಬಟ್ಟೆ**

**ಹಾಲು ಹಿಂಡುವುದು :** ಸರ್ವಶ್ರೇಷ್ಟ ಆಹಾರಗಳಲ್ಲೊಂದಾದ ಹಾಲು ಇವರಿಗೆ ನಿತ್ಯವು ದೊರೆಯುವ ಕಾಮಧೇನುವಾಗಿದೆ. ಕುರಿ ಮತ್ತು ಮೇಕೆಗಳು ನಿಸರ್ಗದಲ್ಲಿ ದೊರೆಯುವ ಎಲ್ಲಾ ಸಸ್ಯರಾಶಿಗಳನ್ನು ತಿಂದು ಜೀರ್ಣಿಸಿಕೊಂಡು ಅಮೃತವನ್ನೇ ನೀಡುತ್ತವೆ. ಇವುಗಳ ಹಾಲು ಹಿಂಡುವಾಗ ತುದಿಗಾಲಲ್ಲಿ ಕುಳಿತು ಎರಡು ಮೊಣಕಾಲಿನ ಮಧ್ಯದಲ್ಲಿ ಅಲ್ಯೂಮಿನಿಯಂ ತಂಬಿಗೆಯನ್ನಿಟ್ಟುಕೊಂಡು, ಎಡಗೈಯಲ್ಲಿ ಕುರಿಯ ಕೆಚ್ಚಲು ಬಿಗಿಯಾಗಿ ಹಿಡಿದುಕೊಂಡು ಬಲಗೈಯಿಂದ ಹಾಲು ಕರೆಯಲಾಗುತ್ತದೆ.

"ಹಾಲು ಹಿಂಡುವಲ್ಲಿ ಎರಡು ವಿಧಾನಗಳಿವೆ. ಒಂದೇ ಬಾರಿ ಎರಡು ಮೊಲೆಗಳಿಂದ ಹಾಲು ಹಿಂಡುವುದು. ಬುರುಕಿ ಹಿಂಡುವ ಪದ್ಧತಿ. ಒಂದೆ ಮೊಲೆಯಿಂದ ಹಾಲು ಹಿಂಡುವುದು ಸಾದಾ ಪದ್ಧತಿ ಎಂದು ಕರೆಯುತ್ತಾರೆ"(ಮಾಹಿತಿದಾರ: ಮಂಜುನಾಥ ದುರುಗಣ್ಣನವರ್:

ಸೌಂದಲಗ). ಮುಂಜಾನೆ ಕುರಿ ಮೇವು ಮೇಯಲು ಅಡವಿಗೆ ಹೋಗುವ ಮುಂಚೆ ಮತ್ತು ಸಂಜೆ ಸೂರ್ಯಾಸ್ತವಾಗಿ ಕುರಿ ಗುಡಾರಕ್ಕೆ ಮರಳಿದ ನಂತರ ಸಾಮಾನ್ಯವಾಗಿ ದಿನಕ್ಕೆರಡು ಬಾರಿ ಹಾಲು ಹಿಂಡಲಾಗುತ್ತದೆ. ಕುರಿ ಮೇಯಿಸಲು ಹೋದವರು ಮಧ್ಯಾಹ್ನ ಒಂದೆರಡು ಕುರಿಗಳ ಹಾಲನ್ನು ಹಿಂಡಿಕೊಂಡು ಊಟ ಮಾಡುವುದು ಹಾಗೂ ಹೊಲ-ಗದ್ದೆಗಳಲ್ಲಿ ಮೇಯಿಸುವಾಗ ಯಾರಾದರೂ ಹಾಲು ಕೇಳಿದರೆ ಹಿಂಡಿ ಕೊಡುವುದುಂಟು.

**ಗಿಣ್ಣದ ಹಾಲು :** ಮರಿ ಹಾಕಿದ ಮೂರು ದಿನಗಳವರೆಗೆ ಕುರಿ-ಮೇಕೆಗಳು ಗಿಣ್ಣದ ಹಾಲನ್ನು ಹಿಂಡುತ್ತವೆ. ಸಾಮಾನ್ಯವಾಗಿ ಆ ಮೂರು ದಿನಗಳು ಹಾಲು ಹಿಂಡದೆ ಎಲ್ಲಾ ಹಾಲನ್ನು ಮರಿಗೆ ಕುಡಿಸುತ್ತಾರೆ. ಒಂದು ವೇಳೆ ಮರಿಗೆ ಹಾಲು ಹೆಚ್ಚಾದರೆ ಹಾಗೂ ಯಾರಾದರೂ ಗಿಣ್ಣ ತಿನ್ನಲು ಇಷ್ಟಪಟ್ಟರೆ ಮಾತ್ರ ಗಿಣ್ಣದ ಹಾಲು ಹಿಂಡಲಾಗುತ್ತದೆ.

**ಹುಡಿ ಆಗುವುದು (ಕೆಚ್ಚಲು ಗಟ್ಟಿಯಾಗುವುದು) :** ಮರಿ ಹಾಕಿದ ನಂತರ ದಿನಕ್ಕೆರಡು ಬಾರಿ ಮರಿಗಳಿಗೆ ಹಾಲುಣಿಸುವುದು ಅಥವಾ ಹಾಲು ಹಿಂಡುವುದು ಅಗತ್ಯವಾಗಿದೆ. ಮೂರ್‍ನಾಲ್ಕು ದಿನಗಳು ಕಾಲ ಈ ಕ್ರಮ ನಿಂತು ಹೋದರೆ ಕುರಿಯ ಕೆಚ್ಚಲು ಗಟ್ಟಿಯಾಗಿ ಮೊಲೆಗಳ ಮೂಲಕ ಹಾಲುಬರುವುದು ನಿಂತು ಹೋಗುತ್ತದೆ. ಈ ರೀತಿಯಾದಾಗ ಮೊಲೆಯ ಹಾಲು ಎದೆಗೇರಿ ಕುರಿ ಪ್ರಾಣ ಕಳೆದುಕೊಳ್ಳಬಹುದು. ಅಥವಾ ಮುಂದಿನ ಮರಿ ಹಾಕುವವರೆಗೆ ಹಾಲುಕೊಡದಂತೆ ಆಗಬಹುದು.

ಅಲೆಮಾರಿ ಕುರುಬರು ನಾಟಿವೈದ್ಯ ಪದ್ಧತಿಯ ಮೂಲಕ ಹುಡಿಯಾಗಿದ್ದನ್ನು ಹೋಗಲಾಡಿಸಿ ಹಾಲು ಬರುವಂತೆ ಮಾಡಲು ಪ್ರಯತ್ನಿಸುತ್ತಾರೆ. ಕೆರುಕಾಯಿಯಲ್ಲಿರುವ ಎಣ್ಣೆಯನ್ನು ತೆಗೆದು ಕುರಿಯ ಮೊಲೆಗಳಿಗೆ ಮತ್ತು ಎದೆಗೆ ಹಚ್ಚಲಾಗುತ್ತದೆ. ಕುರಿಯ ಡುಬ್ಬದ ಮೇಲೆ ಮತ್ತು ಕೆಚ್ಚಲಿಗೆ ಚೆನ್ನಾಗಿ ತಣ್ಣೀರನ್ನು ತಟ್ಟಿ ಹಾಲು ಹಿಂಡಲಾಗುತ್ತದೆ. ಈ ರೀತಿ ಮಾಡುವುದರಿಂದ ಕುರಿಯ ಕೆಚ್ಚಲು ಮೃದುವಾಗಿ ಹಾಲು ಬರಲು ಶುರುವಾಗುತ್ತದೆ. ಕೆಚ್ಚಲು ಮೃದುವಾಗದೆ ಹಾಗೆಯೇ ಗಟ್ಟಿಯಾಗಿದ್ದರೆ ಹಾಲುಕೊಡದಂತಾಗುತ್ತದೆ. ಕೆಚ್ಚಲು ಗಟ್ಟಿಯಾಗುವ ಸಂದರ್ಭಗಳೆಂದರೆ ಕುಟುಂಬದ ಸದಸ್ಯರೆಲ್ಲರು ಶುಭ ಅಥವಾ ಅಶುಭ ಕಾರ್ಯಕ್ರಮಗಳಿಗಾಗಿ ಸ್ವಗ್ರಾಮಕ್ಕೆ ತೆರಳಿದಾಗ ಇತರೆ ಕುಟುಂಬದವರಿಗೆ ಅಥವಾ ಆಳು ಮಕ್ಕಳಿಗೆ ತಮ್ಮ ಕುರಿಗಳ ಜವಾಬ್ದಾರಿಯನ್ನು ವಹಿಸಿಕೊಟ್ಟು ಹೋಗುತ್ತಾರೆ. ಮಳೆಗಾಲದಲ್ಲಿ ನಾಲ್ಕೈದು ದಿನಗಳು ಜಿನಿ-ಜಿನಿ ಮಳೆ ಅಂಟಿಕೊಂಡ ದಿನಗಳಲ್ಲಿ ಮರಿಹಾಕಿದ ಯಾವುದಾದರೂ ಕುರಿ-ಮೇಕೆಗಳ ಹಾಲುಣಿಸುವುದನ್ನು ಅಥವಾ ಹಾಲು ಹಿಂಡುವುದು ಮರೆತಾಗ ಹುಡಿ ಆಗುತ್ತದೆ.

**ನಸೆಬಟ್ಟೆ :** ಮರಿಗಳು ತಾಯಿಯ ಹಾಲುಣಿಸಿಕೊಳ್ಳದಂತೆ ತಡೆಯಲು ಕುರಿ-ಮೇಕೆಗಳ ಮೊಲೆಗಳಿಗೆ ಸುತ್ತುವ ಬಟ್ಟೆ ಇದು. ಮರಿಗಳು ಜನಿಸಿದ ಮೂರು ತಿಂಗಳು ಬಳಿಕ ತಾಯಿಯ ಜೊತೆ ಅಡವಿಗೆ ಹೋಗಿ ಮೇವು ಮೇಯ್ದು ಜೀವಿಸುವಷ್ಟು ಶಕ್ತವಾಗುತ್ತವೆ. ಈ ರೀತಿ ಶಕ್ತವಾದ ಮೇಲೆ ಅವು ತಾಯಿಯ ಹಾಲು ಕುಡಿಯದಂತೆ ಮಧ್ಯಾಹ್ನದ ನಂತರ ಅಂದರೆ

ಮೂರು-ನಾಲ್ಕು ಗಂಟೆ ಅವಧಿಯಲ್ಲಿ ಕುರಿಯ ಹಸೆ ಹಿಕ್ಕೆಯಲ್ಲಿ ಬಟ್ಟೆಯನ್ನು ಒದ್ದೆಮಾಡಿ ಮೊಲೆಗಳಿಗೆ ಸುತ್ತುತ್ತಾರೆ. ಈ ರೀತಿ ಸುತ್ತುವುದರ ಹಿಂದೆ ಎರಡು ಉದ್ದೇಶಗಳಿವೆ. ಒಂದನೆಯದು ಕುಟುಂಬದವರು ಹಾಲುಣ್ಣಲು, ಚಹಾ ಕುಡಿಯಲು ಬಳಸುವುದು. ಎರಡನೆಯದಾಗಿ, ಕೆಲವು ಕುರಿ-ಮೇಕೆಗಳು ಒಂದೇ ಸಾರಿ ಎರಡು ಮೂರು ಮರಿಗಳನ್ನು ಈಯುತ್ತವೆ. ತಾಯಿಯ ಹಾಲು ಮರಿಗಳಿಗೆ ಸಾಲುವುದಿಲ್ಲ. ಹಾಲು ಸಾಲದ ಅಂತಹ ಚಿಕ್ಕ ಮರಿಗಳಿಗೆ ನಸೆಬಟ್ಟೆ ಸುತ್ತಿದ ಕುರಿಯ ಹಾಲನ್ನು ಕುಡಿಸುತ್ತಾರೆ. ಇದರಿಂದ ಕುರಿಗಳು ಆರೋಗ್ಯವಾಗಿರುವುದರ ಜೊತೆಗೆ ಚಿಕ್ಕ ಮರಿಗಳು ಸದೃಢವಾಗಿ ಬೆಳೆಯುತ್ತವೆ. ಒಂದು ವೇಳೆ ಕುರಿಗಳಲ್ಲಿ ಯಥೇಚ್ಛವಾಗಿ ಹಾಲು ದೊರೆಯುವಂತಿದ್ದರೆ ನಸೆಬಟ್ಟೆ ಸುತ್ತುವ ಅವಶ್ಯಕತೆ ಬರುವುದಿಲ್ಲ.

# ೧೦

# ಸಮಸ್ಯೆ ಸಂಘಟನೆ ಪರಿಹಾರ

## ಸಮಸ್ಯೆಗಳು

ಇಂದು ಬಹುತೇಕ ಜನರು ಗ್ರಾಮ, ಪಟ್ಟಣ ಹಾಗೂ ನಗರಗಳಲ್ಲಿ ವಾಸಿಸುತ್ತಿದ್ದಾರೆ. ಇವರಲ್ಲಿಯೇ ಹಲವು ಜನರಿಗೆ ಮೂಲಭೂತ ಅವಶ್ಯಕತೆಗಳು ಮತ್ತು ಸಾಮಾಜಿಕ ಸೌಕರ್ಯಗಳು ದೊರೆಯದಿರುವುದು ಎಲ್ಲರಿಗೂ ತಿಳಿದಿರುವ ಸಂಗತಿ. ಸದಾ ಅಡವಿಯಲ್ಲಿಯೆ ಗಾಳಿ, ಮಳೆ, ಚಳಿ ಎನ್ನದೆ ಬೆಟ್ಟ-ಗುಡ್ಡ, ಹೊಲ-ಗದ್ದೆಗಳಲ್ಲಿ ಕುಟುಂಬ ಕಟ್ಟಿಕೊಂಡು ಕುರಿಗಳ ಜೊತೆಯಲ್ಲಿಯೇ ಅಲೆದಾಡುತ್ತಾ ಜೀವನ ಸಾಗಿಸುವ ಅಲೆಮಾರಿ ಕುರುಬರು ಇನ್ನೆಷ್ಟು ಸಮಸ್ಯೆಗಳನ್ನು ಎದುರಿಸುತ್ತಿರಬಹುದು ಎಂಬುದನ್ನು ಕುರಿತು ಯೋಚಿಸಿದಾಗ ಉತ್ತರ ಸುಲಭವಾಗಿ ದೊರೆಯುವುದಿಲ್ಲ. ಪ್ರಕೃತಿಯ ಮಡಿಲಲ್ಲಿಯೇ ಗುಡಾರ ಹೂಡಿ ಜೀವಿಸುವ ಇವರು ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ.

### ಹುಲ್ಲುಗಾವಲುಗಳ ಕೊರತೆ

ಕೃಷಿ ಉತ್ಪಾದನೆಯ ಅಭಿವೃದ್ಧಿ ಹೆಸರಿನಲ್ಲಿ ಇತ್ತೀಚಿನ ದಿನಗಳಲ್ಲಿ ಹುಲ್ಲುಗಾವಲುಗಳು ಬೇಸಾಯದ ಭೂಮಿಗಳಾಗಿ ಪರಿವರ್ತನೆಗೊಳ್ಳುತ್ತಲಿವೆ. ಹೀಗಾಗಿ ಕುರಿಗಳಿಗೆ ಆಹಾರ ಸಿಗುವುದೇ ಕಷ್ಟಕರವಾದಂತಹ ಪರಿಸ್ಥಿತಿ ನಿರ್ಮಾಣವಾಗಿದೆ. ಅಲೆಮಾರಿತನಕ್ಕೆ ಪ್ರಮುಖ ಕಾರಣವೇ ಈ ಹುಲ್ಲುಗಾವಲುಗಳು. ಕುರಿಗಳು ಆಹಾರ ಸೇವಿಸಿ ಬದುಕುಳಿದರೆ ಮಾತ್ರ ಅಲೆಮಾರಿ ಕುರುಬರು ಬದುಕುಳಿಯುತ್ತಾರೆ. ಹೀಗೆ ಅವಿನಾಭಾವ ಸಂಬಂಧವಿರುವ ಹುಲ್ಲುಗಾವಲುಗಳೇ ನಾಶವಾದ ಮೇಲೆ ಕುರಿ ಸಂತತಿಯನ್ನು ಉಳಿಸಿಕೊಳ್ಳುವುದೇ ಕಷ್ಟವಾಗುತ್ತದೆ. ಅದರ ಪರಿಣಾಮವನ್ನು ಕುರಿತು ಬರಹಗಾರ ಅಗರ್‌ವಾಲ್ ಅವರು "An expansion of crop lands on grazing sites has made grazing areas less and still lesser. This turn has led to the overstocking of grazing lands, destroying thier productivity and impovershing the grazier in the process" (Pragya Sharma:2005:292). ಮಂಕಡ್ ಅವರು ಅಲೆಮಾರಿ ಕುರುಬರ ಭವಿಷ್ಯದಲ್ಲಾಗುವ ಸಮಸ್ಯೆಯನ್ನು ಕುರಿತು ಈ ರೀತಿ ಹೇಳಿದ್ದಾರೆ. "The forests are being cut down so they are slowely giving up their original occupation and

have thought it proper to settle down and take to agricutlture. They take to cultivate for others as servants and get a settled sum of money of their work"(Mankad B.L:1939:79).

ನೀರಾವರಿ ಯೋಜನೆಗಳೂ ಹುಲ್ಲುಗಾವಲನ್ನು ಕಡಿಮೆಗೊಳಿಸಿವೆ. ರೈತರು ಮೊದಲು ಒಂದೇ ಬೆಳೆಯನ್ನು ಬೆಳೆಯುತ್ತಿದ್ದರು. ಆ ಬೆಳೆಗಳು ನವೆಂಬರ್ ಅಥವಾ ಡಿಸೆಂಬರ್ ತಿಂಗಳೊಳಗೆ ಬಹಳಷ್ಟು ಜಮೀನುಗಳಲ್ಲಿ ಕಟಾವು ಆಗುತ್ತಿದ್ದರಿಂದ ನಂತರ ದಿನಗಳಲ್ಲಿ ಕುರಿಗಳನ್ನು ಮೇಯಿಸಲು ವಿಶಾಲವಾದ ಭೂ ಪ್ರದೇಶ ದೊರೆಯುತ್ತಿತ್ತು. ಆದರೆ ನೀರಾವರಿ ಯೋಜನೆಗಳು ಜಾರಿಗೆ ಬಂದ ನಂತರ ರೈತರು ವರ್ಷದಲ್ಲಿ ಒಂದು ಬೆಳೆಯ ಬದಲಾಗಿ ಎರಡು ಬೆಳೆಗಳನ್ನು ಬೆಳೆಯಲು ಆರಂಭಿಸಿದರು. ಪರಿಣಾಮವಾಗಿ ಹುಲ್ಲುಗಾವಲಿನ ಪ್ರದೇಶ ಕಡಿಮೆಯಾಯಿತು. ಬೆಳಗಾವಿ ಜಿಲ್ಲೆಯವರಾದ ಇವರು ತಮ್ಮ ಗ್ರಾಮಗಳನ್ನು ತ್ಯಜಿಸಿ ಕುರಿಗಳಿಗೆ ಮೇವು ಹುಡುಕಿಕೊಂಡು ಬರಲು ಇದು ಕೂಡ ಒಂದು ಪ್ರಮುಖ ಕಾರಣವಾಗಿದೆ. ಆದರೆ ವಲಸೆ ಬಂದ ಅಲೆಮಾರಿ ಕುರುಬರಿಗೆ ತುಂಗಭದ್ರ ನೀರಾವರಿ ಯೋಜನೆಯು ಬೇಸಿಗೆಯ ಕಾಲದಲ್ಲಿ ವರದಾನವಾಗಿ ಪರಿಣಮಿಸಿದೆ ಎಂಬುದನ್ನು ಮರೆಯುವಂತಿಲ್ಲ. ನೀರಾವರಿ ಸೌಲಭ್ಯದಿಂದ ಎರಡು ಬೆಳೆ ಬೆಳೆಯಲು ಆರಂಭಿಸಿದ ನಂತರ, ಕುರಿಗಳು ಬೆಳೆದು ನಿಂತ ಬೆಳೆಯನ್ನು ಹಾಳು ಮಾಡುತ್ತವೆಂಬ ನೆಪವೊಡ್ಡಿ ರೈತರು ಅಲೆಮಾರಿ ಕುರುಬರ ಮೇಲೆ ದೌರ್ಜನ್ಯ ಮಾಡುವುದು, ಬೈಯುವುದು, ಹೊಡೆಯುವುದು ಇತ್ಯಾದಿ ಮಾಡುತ್ತಾರೆ. ಇದು ಕೆಲವೊಮ್ಮೆ ಜಗಳಕ್ಕೆ ತಿರುಗಿ ಬಹಳಷ್ಟು ಅನಾಹುತಕ್ಕೆ ಕಾರಣವಾಗುತ್ತದೆ.

"The pasture lands are generally getting smaller and narrower, the rainfull in the following province is gradually becoming less. In these circumstances shephards find it extermely difficult to rear a number of Sheeps and Goats"(Mankad B.L:1939:31). ಸ್ವಾತಂತ್ರ್ಯ ನಂತರ ಭಾರತ ಸರ್ಕಾರ ಹಲವಾರು ಯೋಜನೆ ಮತ್ತು ಘೋಷಣೆಗಳ ಮೂಲಕ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುತ್ತಾ ಸಾಗಿದೆ. ಅಂಥವುಗಳಲ್ಲಿ ಒಂದಾದ 'Grow more food' rather than 'Grow more wool'(Pragya Sharma:2005:293) ಎಂಬ ಘೋಷಣೆಯು ಅಲೆಮಾರಿ ಕುರುಬರಿಗೆ ಮಾರಕವಾಗಿ ಪರಿಣಮಿಸಿದೆ. ಇದು ರೈತರಿಗೆ ಕಾನೂನು ಬಾಹಿರವಾಗಿ ಹುಲ್ಲುಗಾವಲು ಒತ್ತುವರಿ ಮಾಡಿಕೊಳ್ಳಲು ದಾರಿ ಮಾಡಿಕೊಟ್ಟಿತು. ಪರಿಣಾಮವಾಗಿ ಕುರಿ ಮೇಯಿಸಲು ಹುಲ್ಲುಗಾವಲಿನ ಕೊರತೆ ಉಂಟಾಯಿತು. ಹುಲ್ಲುಗಾವಲಿನ ಕೊರತೆಗೆ ಇತರೆ ಕಾರಣಗಳನ್ನು ಕಾಣಬಹುದಾಗಿದೆ. "Along with agriculture, other developments include increased availabity of tractors shortening of the following period, mining activities, creation of nature reserves"(Jodh:1985:294). ಹೀಗೆ ಹಲವಾರು ಕಾರಣಗಳಿಂದ ಮೇವಿನ ಕೊರತೆ ಉಂಟಾಗಿದೆ. ಇದು ಅಲೆಮಾರಿ ಕುರುಬನ ಮೂಲ ವೃತ್ತಿಯ ಮೇಲೆ ದುಷ್ಪರಿಣಾಮ ಬೀರಿದೆ.

ಗಣಿಗಾರಿಕೆ : ಗಣಿಗಾರಿಕೆಯು ಬಂಡವಾಳದಾರರಿಗೆ ವರವಾದರೆ ಅಲೆಮಾರಿ ಕುರುಬರಿಗೆ ಶಾಪವಾಗಿ ಪರಿಣಮಿಸಿದೆ. ವಿಶೇಷವಾಗಿ ಬಳ್ಳಾರಿ ಜಿಲ್ಲೆಯಲ್ಲಿ ಅಲೆದಾಡುವ ಅಲೆಮಾರಿ ಕುರುಬರಿಗೆ ಮಳೆಗಾಲದಲ್ಲಿ ಅಂದರೆ ಆಗಸ್ಟ್‌ನಿಂದ ನವ್ಹೆಂಬರ್ ತಿಂಗಳವರೆಗೆ ಕುರಿ-ಕುರುಬನ ಆಶ್ರಯ ತಾಣವಾಗಿದ್ದ ಗುಡ್ಡಗಾಡು ಗಣಿ ಪ್ರದೇಶ ಇಂದು ಗಣಿಗಾರಿಕೆಯಿಂದ ಸಾವಿರಾರು ಎಕರೆ ಹುಲ್ಲುಗಾವಲು ಇಲ್ಲದಂತಾಗಿವೆ. ಗಣಿಗಾರಿಕೆಯು ಅಲೆಮಾರಿ ಕುರುಬನ ಮೇಲೆ ಎರಡು ರೀತಿಯ ದುಷ್ಪರಿಣಾಮ ಬೀರಿದೆ. ಒಂದು ಕುರಿಗಳಿಗೆ ಮೇಯಿಸುವ ಭೂಪ್ರದೇಶ ಕಡಿಮೆಯಾಗಿರುವುದು. ಎರಡು ಗಣಿಗಾರಿಕೆಯಿಂದ ಹರಿದು ಬಂದ ನೀರನ್ನು ಕುಡಿದ ಕುರಿಗಳು ಹಲವಾರು ರೋಗಗಳಿಗೆ ತುತ್ತಾಗುತ್ತಿರುವುದು. ಇನ್ನೂ ಅಲ್ಪ-ಸ್ವಲ್ಪ ಹುಲ್ಲುಗಾವಲು ಪ್ರದೇಶವಿದ್ದರೂ ಗಣಿ ಮಾಲಿಕರು ತಂತಿ ಬೇಲಿಯನ್ನು ಹಾಕಿ ಕುರಿ ಮೇಯಿಸದಂತೆ ನಿರ್ಬಂಧಿಸಿದ್ದಾರೆ. ಸುಮಾರು ಹತ್ತು-ಹನ್ನೆರಡು ವರ್ಷಗಳ ಹಿಂದೆ ಈ ಪ್ರದೇಶದಲ್ಲಿ ಕುರಿಗಳಿಗೆ ಉತ್ಕೃಷ್ಟವಾದ ಮೇವು, ಗಿಡ-ಗಂಟೆಗಳ ತಪ್ಪಲು ದೊರೆಯುತ್ತಿತ್ತು. ಆದರೆ ಇಂದು ಗಣಿಗಾರಿಕೆಯು ಅಲೆಮಾರಿ ಕುರುಬನನ್ನು ಆತಂಕದ ಸ್ಥಿತಿಯಲ್ಲಿಡುವುದರ ಜೊತೆಗೆ ಪ್ರಾಣಿ ಸಂತತಿಗಳ ಭವಿಷ್ಯ ಕುರಿತು ಯೋಚಿಸುವಂತೆ ಮಾಡಿದೆ.

**ನೈಸರ್ಗಿಕ ವಿಕೋಪಗಳು**

ಇವರು ಪ್ರಕೃತಿಯ ಮಡಿಲಲ್ಲಿ ಬದುಕುತ್ತಾರೆ. ಇವರ ಬದುಕುಗಳು ಹಲವಾರು ನೈಸರ್ಗಿಕ ವಿಕೋಪಗಳಿಗೆ ಬಲಿಯಾಗುತ್ತವೆ. ಪ್ರಕೃತಿಯ ವಿಕೋಪಗಳಾದ ಗುಡುಗು, ಸಿಡಿಲು, ಆಲಿಕಲ್ಲು ಮಳೆ, ಅತಿವೃಷ್ಟಿ, ಅನಾವೃಷ್ಟಿ, ನೆರೆಹಾವಳಿ ಇತ್ಯಾದಿ ಪ್ರತಿವರ್ಷವೂ ಸಾಮಾನ್ಯವಾಗಿರುತ್ತದೆ. ಸಿಡಿಲು ಮತ್ತು ಆಲಿಕಲ್ಲು ಮಳೆ ಬಡಿದು ಸಾವಿಗೀಡಾಗುವವರಲ್ಲಿ ಅಲೆಮಾರಿ ಕುರುಬರ ಸಂಖ್ಯೆಯೇ ಅಧಿಕವಾಗಿದೆ. ಸಾಕಷ್ಟು ಸಂಖ್ಯೆಯ ಕುರಿಗಳು ಸಿಡಿಲು ಮತ್ತು ಆಲಿಕಲ್ಲು ಮಳೆಗೆ ಬಲಿಯಾಗುತ್ತವೆ. ಅಷ್ಟೇ ಅಲ್ಲದೆ ದಿಡೀರ್ ಬಂದ ಪ್ರವಾಹದಲ್ಲಿ ಕೊಚ್ಚಿ ಹೋಗುವುದುಂಟು. ರಸ್ತೆ ಅಥವಾ ಒಳದಾರಿಗಳಲ್ಲಿ ಕುರಿಗಳನ್ನು ಸಾಗಿಸುವಾಗ ಯದ್ವಾಬಿದ್ವಿಯಾಗಿ ಓಡುವ ವಾಹನಗಳು ಡಿಕ್ಕಿ ಹೊಡೆದು ನೂರಾರು ಕುರಿಗಳು ಅಸು ನೀಗುತ್ತವೆ. ಉದಾಹರಣೆಗೆ ೧೮.೫.೨೦೦೭ ರಂದು ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ಪ್ರಕಟವಾದಂತೆ ಕೊಪ್ಪಳದ ಹತ್ತಿರ ಮೈಲಾರಪ್ಪ ಗಿಣಗೇರವರ ೫ ಕುರಿಗಳು ಮತ್ತು ೧೫ ಮರಿಗಳು ಆಲಿಕಲ್ಲು ಮಳೆ ಬಡಿದು ಸಾವಿಗೀಡಾಗಿವೆ. "೨೦.೫.೦೭ ರಂದು ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲೂಕಿನ ಉಣ್ಣರಗಿ ಗ್ರಾಮದ ವಾಸಪ್ಪ ಬನ್ನೇ ಎಂಬುವವರು ಕಾರ್ಚಿಗಿ ಸಮೀಪ ಚೆನ್ನಳ್ಳಿಯಲ್ಲಿ ಕುರಿ ತಬ್ಬಿದಾಗ ೪ ಜನರಿಗೆ ಸಿಡಿಲು ಬಡಿಯಿತು. ಅವರಲ್ಲಿ ಮೂರು ಜನರಿಗೆ ಗಾಯಗಳಾದರೆ ಒಬ್ಬರು ಸಾವಿಗೀಡಾಗಿದ್ದಾರೆ. ಇಂತಹ ಅನೇಕ ಸಂದರ್ಭಗಳಲ್ಲಿ ಕುರಿಗಳು ಮತ್ತು ಅಲೆಮಾರಿ ಕುರುಬರು ಮೃತಪಡುತ್ತಾರೆ.(ಮಾಹಿತಿ: ಮಂಜುನಾಥ ದುರುಗಣ್ಣನವರ್. ಸೌಂದಲಗ)

**ಕುರಿಗಳ ಚಿಕಿತ್ಸೆ ಮತ್ತು ಆರೈಕೆ ಜ್ಞಾನದ ಕೊರತೆ**

ಕುರಿಗಳಿಗೆ ಬಂದೊದಗಿದ ರೋಗ ಗುರುತಿಸುವುದು ಮತ್ತು ಆ ರೋಗಗಳಿಗೆ ಚಿಕಿತ್ಸೆ ನೀಡುವುದು ಅಲೆಮಾರಿ ಕುರುಬನ ಮತ್ತೊಂದು ಪ್ರಮುಖ ಸಮಸ್ಯೆ. ಪರಂಪರಾಗತವಾಗಿ

ಹಿರಿಯರಿಂದ ಕಲಿತ ವಿದ್ಯೆಯ ಮೂಲಕ ಸಣ್ಣ ಪುಟ್ಟ ರೋಗಗಳಾದ ನೆಗಡಿ, ಗಾಯ, ಚರ್ಮರೋಗ, ಕೆಮ್ಮು, ಕಾಲು ಕಟ್ಟುವುದು ಇತ್ಯಾದಿ ರೋಗಗಳಿಗೆ ಗಿಡಮೂಲಿಕೆಗಳ ಸಹಾಯದಿಂದ ಪರಿಣಾಮಕಾರಿಯಾಗಿ ಚಿಕಿತ್ಸೆ ನೀಡುತ್ತಾರೆ. ವೈರಸ್, ಬ್ಯಾಕ್ಟೀರಿಯಾ, ಬೂಸ್ಟ್, ಪ್ರೋಟೋಜೋವ್ (ಏಕಾಣು ಜೀವಿಗಳು) ಕೀಟಗಳಿಂದ ಬರುವ ಸಾಂಕ್ರಮಿಕ ರೋಗಗಳನ್ನು ಗುರುತಿಸಿ ಚಿಕಿತ್ಸೆ ನೀಡಿ ಕುರಿಗಳನ್ನು ರಕ್ಷಿಸಿಕೊಳ್ಳುವಷ್ಟು ಜಾಣರಲ್ಲ. ಇವರು ಅಲೆಮಾರಿಗಳಾಗಿರುವುದರ ಜೊತೆಗೆ ಅವಿದ್ಯಾವಂತರಾಗಿರುವುದರಿಂದ, ಕುರಿಗಳಿಗೆ ಯಾವ ರೋಗ ಬಂದಿದೆ, ಯಾವ ಔಷಧ ಕೊಡಬೇಕು? ಔಷಧದ ಹೆಸರೇನು? ಎಷ್ಟು ಪ್ರಮಾಣದಲ್ಲಿ ನೀಡಬೇಕೆಂಬುದು ತಿಳುವಳಿಕೆಯಿಲ್ಲದಿರುವುದು. ಅವರಿಗೆ ರೋಗ ಕಾಣಿಸಿಕೊಂಡ ನಂತರ ಪಶುಚಿಕಿತ್ಸಾ ಲಯಕ್ಕೆ ಹೋಗಿ ರೋಗ ತಿಳಿಸಿ ಅವರು ಕೊಟ್ಟ ಔಷಧಿಯನ್ನು ತಂದು ಚಿಕಿತ್ಸೆ ನೀಡುತ್ತಾರೆ. ಸಾಂಕ್ರಮಿಕ ರೋಗಗಳಿಗೆ ಚಿಕಿತ್ಸೆಯು ಸಾಮಾನ್ಯ ವಾಗಿ ಚುಚ್ಚುಮದ್ದುಗಳ ಮೂಲಕ ನೀಡಬೇಕು. ಚುಚ್ಚು ಮದ್ದುಗಳ ಮೂಲಕ ನೀಡುವ ಔಷಧ ಅದು ಪೆನ್ಸಿಲಿನ್ ಔಷಧವೇ ಅಥವಾ ವಿಷಕಾರಿ ಬಿಳಿ ಪೌಡರೆ (BHC ಪೌಡರ್) ಎಂದು ಗುರುತಿಸುವಷ್ಟು ಬುದ್ಧಿವಂತಿಕೆಯೂ ಅಲೆಮಾರಿ ಕುರುಬರಿಗೆ ಇಲ್ಲ. ಕೆಲವೊಮ್ಮೆ ಔಷಧಿ ಅಂಗಡಿಯವರು ವಿಷಕಾರಿ ಔಷಧ ಕೊಟ್ಟಾಗ ಕುರಿಗಳ ರೋಗ ನಿಯಂತ್ರಣ ವಾಗುವುದರ ಬದಲು ಸಾವಿಗೀಡಾಗುತ್ತವೆ. ಇವರ ಅಮಾಯಕತನವನ್ನು ಬಳಸಿಕೊಂಡು ಅಂಗಡಿಯವರು ಮತ್ತು ಪಶು ಚಿಕಿತ್ಸಾಲಯಗಳು ಔಷಧದ ಕೊರತೆ ಸೃಷ್ಟಿಸಿ ಹೆಚ್ಚು ಬೆಲೆಗೆ ಮಾರಾಟ ಮಾಡುತ್ತಾರೆ. ಇವರು ಅವಿದ್ಯಾವಂತರಾದ್ದರಿಂದ ಔಷಧದ ಹೆಸರು, ಕಂಪನಿ ಮತ್ತು ಬೆಲೆ ಗುರುತಿಸುವಷ್ಟು ಶಕ್ತರಾಗಿಲ್ಲ.

ಸರ್ಕಾರಿ ದಾಖಲೆಗಳ ಪ್ರಕಾರ ಪಶುವೈದ್ಯಕೀಯ ಆಸ್ಪತ್ರೆಗಳು ಕುರಿಗಳ ರೋಗ ನಿಯಂತ್ರಿಸಲು ಸಾಕಷ್ಟು ಪ್ರಯತ್ನ ಪಟ್ಟಿವೆ ಮತ್ತು ಔಷಧಗಳನ್ನು ವಿತರಿಸಿವೆಯೆಂದು ತಿಳಿದುಬರುತ್ತದೆ. ಉದಾಹರಣೆ ಕರ್ನಾಟಕ ಸರ್ಕಾರವು ೨೦೦೫-೦೬ನೇ ಸಾಲಿನಲ್ಲಿ ೧,೯೩,೦೮೭ ಕುರಿಗಳಿಗೆ ಹಾಗೂ ೧,೬೪,೪೪೯ ಮೇಕೆಗಳಿಗೆ ಚಿಕಿತ್ಸೆ ನೀಡಲಾಗಿದೆ ಎಂದು ದಾಖಲಾಗಿದೆ. ಆದರೆ ವಾಸ್ತವಿಕವಾಗಿ ಹೇಳುವುದಾದರೆ ಸರ್ಕಾರಿ ಪಶುವೈದ್ಯಕೀಯ ಆಸ್ಪತ್ರೆಗಳು ಕುರಿಗಾರರಿಂದ ಅದರಲ್ಲೂ ವಿಶೇಷವಾಗಿ ಅಲೆಮಾರಿ ಕುರುಬರಿಂದ ಬಹಳಷ್ಟು ದೂರ ಇವೆ. ಸರ್ಕಾರ ಅಂದಾಜಿಸಿದಂತೆ ಔಷಧ ವಿತರಣೆ ಮತ್ತು ಚಿಕಿತ್ಸೆ ನಡೆಯುತ್ತಿಲ್ಲ. ಅಲೆಮಾರಿ ಕುರುಬರು ಕುರಿಗಳ ಔಷಧ ಪಡೆಯಲು ಸರ್ಕಾರಿ ಆಸ್ಪತ್ರೆಗಳಿಗೆ ತೆರಳಿ ಔಷಧ ಕೇಳಿದರೆ ನೀವು ನಮ್ಮ ಜಿಲ್ಲೆಯವರಲ್ಲ, ಬೆಳಗಾವಿ ಜಿಲ್ಲೆಗೆ ಹೋಗಿ ಔಷಧಿ ಪಡೆಯಿರಿ ಎಂದು ಪಶುವೈದ್ಯರಿಂದ ಉತ್ತರ ಬರುತ್ತದೆ. ಒಂದು ವೇಳೆ ಹಣ ಕೊಟ್ಟರೆ ಔಷಧ ವಿತರಣೆ ಮಾಡುತ್ತಾರೆ. ಪಶುವೈದ್ಯರು ಕುರಿಗಳಿದ್ದಲ್ಲಿಗೆ ಬಂದು ಚಿಕಿತ್ಸೆ ನೀಡಿದರೆ ಕುರಿಯೊಂದಕ್ಕೆ ಎರಡು ರೂಪಾಯಿ ಬೇಡುತ್ತಾರೆ. ಚಿಕಿತ್ಸೆಗೆ ಹಣ ವ್ಯಯ ಮಾಡಲಾರದ ಸ್ಥಿತಿ ಇರುವುದರಿಂದ ಅಲೆಮಾರಿ ಕುರುಬರೇ ಚಿಕಿತ್ಸೆ ಮಾಡುತ್ತಾರೆ. ಕೆಲವೊಮ್ಮೆ

ಅಂದಾಜಿಗಿಂತ ಹೆಚ್ಚಿನ ಪ್ರಮಾಣದಲ್ಲಿ ಔಷಧ ಕೊಟ್ಟಾಗ ಕುರಿಗಳು ಪ್ರಾಣ ಕಳೆದು ಕೊಳ್ಳುತ್ತವೆ.

ಅಲೆಮಾರಿ ಕುರುಬರಿಗೆ ಸ್ವಂತಿಕೆ ಅಥವಾ ಸ್ವತಂತ್ರ ನಿರ್ಧಾರ ಕಡಿಮೆ ಎಂದು ಹೇಳಬಹುದು. ಪಕ್ಕದ ಕುರಿಗಾರರು ಕುರಿಗಳಿಗೆ ಇಂಜಕ್ಷನ್ ಮಾಡುತ್ತಾರೆಂದರೆ ತಾವು ಕೂಡ ಮಾಡಬೇಕೆನ್ನುವ ಮನೋಭಾವದವರು. ತಮ್ಮ ಕುರಿಗಳಿಗೆ ರೋಗ ಇದೆ ಅಥವಾ ಇಲ್ಲ ಎಂದು ಗುರುತಿಸಲಾರದವರು. ಕೆಲವೊಮ್ಮೆ ದೇವರ ಮೇಲೆ ಭಾರ ಹಾಕಿ ಕೈಕಟ್ಟಿ ಕುಳಿತುಕೊಳ್ಳುತ್ತಾರೆ. ಈ ಎರಡು ರೀತಿಯ ವರ್ತನೆಯಿಂದ ಅಲೆಮಾರಿ ಕುರುಬರು ಆರ್ಥಿಕ ಸಂಕಷ್ಟಕ್ಕೆ ಸಿಲುಕುತ್ತಾರೆ.

**ಮಾರುಕಟ್ಟೆಯ ಸಮಸ್ಯೆಗಳು**

ಯಾವುದೇ ಉತ್ಪಾದನಕಾರನ ಉತ್ಪನ್ನವು ಉತ್ತಮ ಬೆಲೆ ಪಡೆಯಬೇಕಾದರೆ ಅದು ಮಾರುಕಟ್ಟೆ ಪ್ರವೇಶಿಸಿ ಮಾರಾಟವಾಗುವಂತಿರಬೇಕು. ಹಾಗಿದ್ದಾಗ ಮಾತ್ರ ಒಳ್ಳೆಯ ಬೆಲೆ ಬಂದು ಲಾಭಗಳಿಸಲು ಸಾಧ್ಯವಾಗುತ್ತದೆ. ಅಲೆಮಾರಿ ಕುರುಬನ ಬದುಕುಗಳು ಮಾರುಕಟ್ಟೆ ಪ್ರವೇಶಿಸದೆ ತಾನು ಅಲೆದಾಡುವ ಪ್ರದೇಶದಲ್ಲಿಯೇ ಮಾರಾಟ ಮಾಡುವುದರಿಂದ ಉತ್ತಮ ಬೆಲೆ ಪಡೆಯಲು ಸಾಧ್ಯವಾಗುತ್ತಿಲ್ಲ, ಅವನ್ನು ಮಾರುಕಟ್ಟೆಗೆ ಸಾಗಿಸುವುದು ಬಹಳ ಕಷ್ಟ. ಒಂದು ವೇಳೆ ಪ್ರಯತ್ನ ಪಟ್ಟು ಸಾಗಿಸಿದ ನಂತರ ಮಾರಾಟವಾಗದಿದ್ದ ಪಕ್ಷದಲ್ಲಿ ಮರಳಿ ಹಿಂದಕ್ಕೆ ಸಾಗಿಸುವುದು ಇನ್ನೂ ಕಷ್ಟಕರ. ಆದ್ದರಿಂದ ಅಲೆಮಾರಿ ಕುರುಬರು ತಾವು ಅಲೆದಾಡುವ ಪ್ರದೇಶದಲ್ಲಿಯೇ ಕುರಿ ವ್ಯಾಪಾರಸ್ಥರು(ಕಟುಕರು) ಕೇಳಿದ ಬೆಲೆಗೆ ಮಾರಾಟ ಮಾಡುತ್ತಾರೆ. ಮಾರಾಟ ಮಾಡುವಾಗ ಅವನ್ನು ತೂಕದ ಆಧಾರದಲ್ಲಿ ಮಾರುವುದಿಲ್ಲ. ಬದಲಾಗಿ ಗುಂಪಾಗಿ ಒಂದಕ್ಕೆ ಇಂತಿಷ್ಟು ಬೆಲೆಗೆ ಮಾರುತ್ತಾರೆ. ಕುರಿಗಾರರಿಗೆ ಮಾರುಕಟ್ಟೆ ಯಲ್ಲಾಗುವ ಶೋಷಣೆ ಕುರಿತಂತೆ ಲಕ್ಷ್ಮಣರಾವ್ ಚಿಂಗಳೆ ಈ ರೀತಿಯ ಅಭಿಪ್ರಾಯ ಪಡುತ್ತಾರೆ. "ವ್ಯಾಪಾರಸ್ಥರು ಕುರಿ-ಮರಿಗಳನ್ನು ಕೊಳ್ಳುವಾಗ ಮರಿಗಳಿಗೆ, ವಯಸ್ಕ ಕುರಿಗಳಿಗೆ ಮತ್ತು ವಯಸ್ಸಾದ ಕುರಿಗಳಿಗೆ ವಿವಿಧ ಬೆಲೆ ನಿಗದಿ ಮಾಡಿಕೊಂಡು ಕೊಳ್ಳುತ್ತಾರೆ. ಆದರೆ ತಾವು ಗ್ರಾಹಕರಿಗೆ ಮಾಂಸ ಮಾರಾಟ ಮಾಡುವಾಗ ಎಲ್ಲ ಕುರಿಗಳ ಮಾಂಸಕ್ಕೆ ಒಂದೇ ಬೆಲೆ ನಿಗದಿ ಮಾಡಿ ಮಾರಾಟ ಮಾಡುತ್ತಾರೆ. ಇಲ್ಲಿ ಗ್ರಾಹಕ ಮತ್ತು ಉತ್ಪಾದಕ ಇಬ್ಬರೂ ಮಧ್ಯಸ್ಥಗಾರರಿಂದ ಶೋಷಣೆಗೆ ಒಳಗಾಗುತ್ತಾರೆ. ಇದಕ್ಕೆ ಉದಾಹರಣೆ ಎಂಬಂತೆ 'ಚಿಕನ್ ಗುನ್ಯಾ' (Bird flu) ರೋಗ ಕೋಳಿಗಳಿಗೆ ಹರಡಿದೆ ಎಂಬ ವದಂತಿಯಿಂದ ೧ ಕೆ.ಜಿ. ಕುರಿಗಳ ಮಾಂಸ ೧೫೦ ರಿಂದ ೧೮೦ ರೂ.ಗಳಿಗೆ ದಿಢೀರನೆ ಏರಿಕೆಯಾಗಿತ್ತು. ಆದರೆ ಕುರಿ-ಮರಿಗಳ ಬೆಲೆಯಲ್ಲಿ ಮಾತ್ರ ಏರಿಕೆ ಕಾಣಲಿಲ್ಲ". ಇದರಿಂದ ಕುರಿ ಮಾರುಕಟ್ಟೆಯು ಎಷ್ಟರ ಮಟ್ಟಿಗೆ ಮಧ್ಯವರ್ತಿಗಳ ಬಿಗಿ ಹಿಡಿತದಲ್ಲಿದೆ ಎಂಬುದು ತಿಳಿದುಬರುತ್ತದೆ. ೨೦೦೩ರ ಜಾನುವಾರು ಗಣತಿಯ ಪ್ರಕಾರ ಕರ್ನಾಟಕ ರಾಜ್ಯದಲ್ಲಿ ೭೨.೬೫ ಲಕ್ಷ ಕುರಿಗಳು ಮತ್ತು ೪೪.೮೪ ಲಕ್ಷ ಮೇಕೆಗಳಿವೆ. ಇಷ್ಟೊಂದು ಕುರಿ-ಮೇಕೆಗಳಿದ್ದರೂ ಕ್ರಮಬದ್ಧ ಮಾರುಕಟ್ಟೆ

ಇಲ್ಲದಿರುವುದನ್ನು ನೋಡಿದರೆ ಕುರಿ ಮಾರುಕಟ್ಟೆ ಎಷ್ಟರ ಮಟ್ಟಿಗೆ ಹಿಂದುಳಿದಿದೆ ಎಂಬುದು ಅರ್ಥವಾಗುತ್ತದೆ.

**ಕುರಿಗಳ ಭದ್ರತೆಯ ಕೊರತೆ**

ಬಯಲು ಅಥವಾ ಗುಡ್ಡಗಾಡು ಪ್ರದೇಶದಲ್ಲಿ ಕುರಿ ತಬ್ಬುವುದರಿಂದ ಕಾಡು ಪ್ರಾಣಿಗಳ ಹಾವಳಿ ಹೆಚ್ಚಾಗಿದೆ. ಚಿರತೆ, ತೋಳ, ನರಿ ಕತ್ತೆಕಿರುಬು ಮೊದಲಾದ ಕಾಡುಪ್ರಾಣಿಗಳು ಕುರಿಗಳನ್ನು ತಿನ್ನಲು ಬಂದು ಬಹಳ ತೊಂದರೆ ಕೊಡುತ್ತವೆ. ಕುರಿಗಳನ್ನು ರಕ್ಷಿಸಿಕೊಳ್ಳಲು ಇಡೀ ರಾತ್ರಿ ಬ್ಯಾಟರಿ ಹಿಡಿದು ನಾಯಿಗಳ ಸಹಾಯದಿಂದ ಕುರಿಗಳ ಸುತ್ತ ತಿರುಗುತ್ತಾ ಕಾಡುಪ್ರಾಣಿಗಳನ್ನು ಕಾಯಬೇಕು. ಕುರಿಗಾರ ಎಷ್ಟೇ ಎಚ್ಚರದಿಂದ ಇದ್ದರೂ ಕೆಲವೊಮ್ಮೆ ಅಪಾಯ ತಪ್ಪಿದ್ದಲ್ಲ.

ಇವರು ಕಳ್ಳರ ಕಾಟದಿಂದ ಮುಕ್ತರಾಗಿಲ್ಲ. ಕೆಲವರು ಹಗಲು ಕಳ್ಳತನ ಮಾಡಿದರೆ ಇನ್ನು ಕೆಲವರು ರಾತ್ರಿ ಕಳ್ಳತನ ಮಾಡುತ್ತಾರೆ. ಗುಡ್ಡಗಾಡು ಪ್ರದೇಶದಲ್ಲಿ ಕುರಿ ಮೇಯಿಸುವಾಗ ಹಗಲುಗಳ್ಳರು ಹಿಂದೆ ಬಿದ್ದ ಅಥವಾ ಹಿಂಡು ಬಿಟ್ಟು ದೂರ ಮೇಯುತ್ತಿರುವ ಕುರಿಗಳನ್ನು ಹಿಡಿದು, ಕಾಲುಕಟ್ಟಿ ನಂತರ ಅರಚದಂತೆ ನಾಲಿಗೆಗೆ ಪಿನ್ನು ಅಥವಾ ಮುಳ್ಳು ಹಾಕುತ್ತಾರೆ. ಕುರಿಗಳು ಗುಡಾರಕ್ಕೆ ಮರಳಿದ ನಂತರ ರಾತ್ರಿ ಸಾಗಿಸಿ ಮಾರಾಟ ಮಾಡುತ್ತಾರೆ. ರಾತ್ರಿ ಕಳ್ಳತನ ಮಾಡುವವರು ಕುರಿಗಾರರು ಸಂಪೂರ್ಣ ನಿದ್ರೆ ಹೋಗಿದ್ದನ್ನು ಗಮನಿಸಿ, ಕುರಿಗಳನ್ನು ಹೊತ್ತುಕೊಂಡು ಹೋಗುತ್ತಾರೆ. ಇತ್ತೀಚಿನ ದಿನಗಳಲ್ಲಿ ಕುರಿ ಕಳವು ಹೆಗಲ ಮೇಲೆ ಹೊತ್ತು ಸಾಗಿಸುವುದರ ಬದಲು ಟೆಂಪೋ ಅಥವಾ ಲಾರಿಗಳಲ್ಲಿ ಹೇರಿಕೊಂಡು ಹೋಗುತ್ತಿದ್ದಾರೆ. ಉದಾಹರಣೆಗೆ ಅಕ್ಷಯ ತದಗಿ ಅಮವಾಸ್ಯೆಯ ದಿನ ಅಂದರೆ ೧೭.೪.೨೦೦೭ರಂದು ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲೂಕಿನ ಸೌಂದಲಗ ಗ್ರಾಮದ ಮಂಜುನಾಥ ದುರುಗಣ್ಣನವರ್, ಕಟಕಲಾಟ ಗ್ರಾಮದ ಖಾನಪ್ಪ ಪೂಜಾರಿ ಮತ್ತು ನಾಯಿಂಗಲಾಜ್ ಗ್ರಾಮದ ದೇವರಸಿ ಖಾನಪ್ಪನವರಿಗೆ ಸಂಬಂಧಿಸಿದ ೪೫ ಕುರಿಗಳನ್ನು ಬಳ್ಳಾರಿ-ಸಿರುಗುಪ್ಪ ಮುಖ್ಯ ರಸ್ತೆಯಲ್ಲಿರುವ ಶ್ರೀನಿವಾಸ ಕ್ಯಾಂಪ್ ಹತ್ತಿರ ಕುರಿಗಳನ್ನು ತಬ್ಬಿದಾಗ, ಕುರಿ ಕಳ್ಳತನವಾಗಿವೆ. ಇದು ಒಂದು ಉದಾಹರಣೆ. ಇಂತಹ ಕಳ್ಳತನಗಳು ವರ್ಷದಲ್ಲಿ ಎಷ್ಟು ಆಗುತ್ತವೆ ಎಂಬುದನ್ನು ಸ್ಪಷ್ಟವಾಗಿ ಹೇಳಲು ಸಾಧ್ಯವಿಲ್ಲ. ಪೋಲಿಸ ಇಲಾಖೆಗೆ ದೂರು ನೀಡಿದರೂ ಪ್ರಯೋಜನವಾಗುತ್ತಿಲ್ಲ. ಇತ್ತೀಚಿನ ದಿನಗಳಲ್ಲಿ ಈ ರೀತಿ ಕಳ್ಳತನ ಹೆಚ್ಚಾಗುತ್ತಿರುವುದರಿಂದ ಕೆಲವರು ವೃತ್ತಿಯಿಂದ ದೂರ ಸರಿಯುತ್ತಿದ್ದಾರೆ.

**ಮೂಲಭೂತ ಸೌಕರ್ಯ ವಂಚಿತರು**

ಮಾನವನ ಬದುಕು ಸುಲಲಿತವಾಗಿ ನಡೆದುಕೊಂಡು ಹೋಗಲು ಮೂಲಭೂತ ಸೌಕರ್ಯಗಳು ಬೇಕು. ಅವುಗಳಲ್ಲಿ ಸಾರಿಗೆ-ಸಂಪರ್ಕ, ಕುಡಿಯುವ ನೀರು, ಶಿಕ್ಷಣ, ಆರೋಗ್ಯ, ವಸತಿ ಇತ್ಯಾದಿ ಮುಖ್ಯವಾದವು. ಆದರೆ ಅಲೆಮಾರಿ ಕುರುಬರು ಇವೆಲ್ಲವುಗಳಿಂದ ವಂಚಿತರಾಗಿದ್ದಾರೆ. ಇಂದು ಇಡೀ ಪ್ರಪಂಚವನ್ನು ತಿರುಗಲು ಸುಲಭ ಮಾರ್ಗಗಳಿವೆ.

ಆದರೆ ಇವರು ಅಲೆದಾಡುವ ದಾರಿ ಮಾತ್ರ ದುರ್ಗಮವಾದದು. ಅದು ಬೆಟ್ಟ-ಗುಡ್ಡ, ಕಲ್ಲು-ಮುಳ್ಳು, ತೆಗ್ಗು-ದಿನ್ನೆ, ನೀರು-ಕೆಸರುಗಳಿಂದ ಕೂಡಿರುತ್ತದೆ. ಇಂತಹ ದಾರಿಯಲ್ಲಿಯೇ ತಮ್ಮ ಕೌಟುಂಬಿಕ ಸಾಮಾನುಗಳನ್ನು ಕುದುರೆಯ ಮೇಲೆ ಹೇರಿಕೊಂಡು, ಇನ್ನು ಕೆಲವನ್ನು ತಲೆಯ ಮೇಲೆ ಹೊತ್ತುಕೊಂಡೇ ಸಾಗಿಸಬೇಕು. ಹೀಗೆ ಸಾಮಾನುಗಳನ್ನು ಸಾಗಿಸುವಾಗ ಅವರು ಅನುಭವಿಸುವ ಕಷ್ಟ ಹೇಳತೀರದು. ಅಂತಹ ಕಷ್ಟ ವೈರಿಗೂ ಬರಬಾರದೆನ್ನಿಸುತ್ತದೆ.

ಗ್ರಾಮ-ನಗರಗಳ ಸಂಪರ್ಕದಿಂದ ಬಹುದೂರ ಇರುವುದರಿಂದ ಸಂತೋಷ ಅಥವಾ ದುಃಖದ ವಿಷಯವನ್ನು ಮುಟ್ಟಿಸಬೇಕು ಅಥವಾ ಬೇಟಿಯಾಗಬೇಕೆಂದರೆ ಇವರು ಪಡಬಾರದ ಕಷ್ಟ ಪಡುತ್ತಾರೆ. ಯಾವ ದಿನ ಯಾವ ಸ್ಥಳದಲ್ಲಿ ಕುರಿ ತಬ್ಬುತ್ತಾರೆ ಮತ್ತು ಯಾವತ್ತು ಎಲ್ಲಿಗೆ ಬದಲಾಯಿಸುತ್ತಾರೆಂಬುದು ಯಾರಿಗೂ ಗೊತ್ತಾಗುವುದಿಲ್ಲ. ಅದು ಬದಲಾಯಿಸುವವರಿಗೆ ಮಾತ್ರ ತಿಳಿದಿರುತ್ತದೆ. ಕೆಲವೊಂದು ಸಲ ಸ್ವಗ್ರಾಮದಿಂದ ಕಾಣಲು ಬಂದವರು ವಾರಗಟ್ಟಲೇ ಹುಡುಕಿ ಹಿಂತಿರುಗಿದ ಸಂದರ್ಭಗಳಿವೆ. ಆದರೆ ಇತ್ತೀಚಿಗೆ ಮೊಬೈಲ್ ಮತ್ತು ದೂರವಾಣಿ ಸೇವೆಯ ಇಂತಹ ಸಂದರ್ಭಗಳನ್ನು ಎದುರಿಸುವಲ್ಲಿ ಪ್ರಮುಖ ಸಾಧನವಾಗಿ ಹಾಗೂ ಅನುಕೂಲ ಸಿಂಧು ಮಾಧ್ಯಮವಾಗಿ ಅಲೆಮಾರಿ ಕುರುಬರಿಗೆ ಲಭಿಸಿದೆ.

**ಕುಡಿಯುವ ನೀರು :** ಇವರಿಗೆ ಶುದ್ಧ ಕುಡಿಯುವ ನೀರು ಕನಸಿನ ಮಾತು. ಮಳೆಯಿಂದ ಅಥವಾ ಬಸಿಯಿಂದ ಹರಿದು ಬಂದು ಕುಣಿ, ತೆಗ್ಗು, ಕೆರೆ, ಹಳ್ಳ ಇತ್ಯಾದಿ ಸ್ಥಳಗಳಲ್ಲಿ ನಿಂತ ನೀರನ್ನೇ ಕುಡಿಯಲು ಹಾಗೂ ದಿನ ಬಳಕೆ ಮಾಡಲು ಬಳಸುತ್ತಾರೆ. ಕೆಲವೊಮ್ಮೆ ನೀರಾವರಿ ಪ್ರದೇಶದಲ್ಲಿ ಸಿಂಪಡಿಸಿದ ಕ್ರಿಮಿನಾಶಕಗಳ ಮಿಶ್ರಣವು ಈ ನೀರಿನಲ್ಲಿ ಬೆರೆತು ಅಥವಾ ಸಾಂಕ್ರಾಮಿಕ ರೋಗಾಣುಗಳು ಸೇರಿ ಕುರಿಗಳ ಸಾವನ್ನಪ್ಪಿದ ಸಂದರ್ಭಗಳು ಹಾಗೂ ಕುರಿಗಾರರು ವಾಂತಿ ಭೇದಿಯಂತಹ ರೋಗಗಳಿಗೆ ತುತ್ತಾಗಿರುವ ಉದಹಾರಣೆಗಳೂ ಉಂಟು.

**ಆರೋಗ್ಯ :** ಇವರು ಸದಾ ಅಡವಿಯಲ್ಲಿ ಅಲೆದಾಡುತ್ತಿರುವುದರಿಂದ ವಾತಾವರಣ ಮತ್ತು ನೀರಿನಲ್ಲಿ ಬದಲಾವಣೆಯಾಗುತ್ತವೆ. ಪರಿಣಾಮವಾಗಿ ಇವರ ಕುರಿಗಳಿಗೆ ಮತ್ತು ಇವರಿಗೆ ಹಲವಾರು ರೋಗಗಳು ಕಾಣಿಸಿಕೊಳ್ಳುತ್ತವೆ. ಕೆಲವೊಮ್ಮೆ ಗರ್ಭಿಣಿ ಸ್ತ್ರೀಗೆ ಕುರಿ ತಬ್ಬಿದ ಸ್ಥಳದಲ್ಲಿಯೇ ಹೆರಿಗೆ ನೋವು ಕಾಣಿಸಿಕೊಂಡು ಅಲ್ಲೆ ಹೆರಿಗೆಯಾದ ಪ್ರಸಂಗಗಳನ್ನು ಕಾಣುತ್ತೇವೆ. ಉದಾಹರಣೆ ೨೦೦೬ ಸೆಪ್ಟೆಂಬರ್ ತಿಂಗಳಲ್ಲಿ ಚಿಕ್ಕೋಡಿ ತಾಲೂಕಿನ ನಾಯಿಂಗಳಾಜ್ ಗ್ರಾಮದ ದೇವರಸಿ ಖಾನಪ್ಪನವರ ಸೊಸೆ ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ಬೈಲುವದ್ದಿಗೇರಿಯ ಗ್ರಾಮದ ಹತ್ತಿರವಿರುವ ಗುಡ್ಡದಲ್ಲಿ ಹೆರಿಗೆಯಾಯಿತು. ಅವರು ಒಂದೆರಡು ದಿನ ಬೈಲುವದ್ದಿಗೇರಿಯಲ್ಲಿದ್ದುಕೊಂಡು ನಂತರ ತಮ್ಮ ಸ್ವಗ್ರಾಮಕ್ಕೆ ತೆರಳಿದರು. ಇಂತಹ ಸ್ಥಳದಲ್ಲಿ ವೈದ್ಯರು ಮತ್ತು ಸೂಲಗಿತ್ತಿ ಇಲ್ಲದಿರುವ ಕಾರಣ ತಾಯಿ ಮತ್ತು ಮಗುವಿಗೆ ತೊಂದರೆಯಾಗುವ ಲಕ್ಷಣಗಳು ಹೆಚ್ಚಿರುತ್ತವೆ. ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ವರ್ಷಕ್ಕೊಮ್ಮೆ ಅಥವಾ ಎರಡೂ ಬಾರಿ ಐದು ವರ್ಷದೊಳಗಿನ ಎಲ್ಲಾ ಮಕ್ಕಳಿಗೆ ಪಲ್ಸ್ ಪೋಲಿಯೋ ಲಸಿಕೆಯನ್ನು ಹಾಕಿಸುತ್ತವೆ. ಅಡವಿಯಲ್ಲಿರುವ ಅಲೆಮಾರಿ

ಕುರುಬರ ಮಕ್ಕಳಿಗೆ ಪಲ್ಸ್ ಪೋಲಿಯೋ ಹಾಕುವವರ್ಯಾರು? ಏತಕ್ಕಾಗಿ ಹಾಕಿಸಬೇಕು? ಯಾರು ಹಾಕುತ್ತಾರೆ? ಎಂಬುದರ ಬಗ್ಗೆ ಇವರಿಗೆ ತಿಳಿದಿರುವುದಿಲ್ಲ.

**ಉತ್ತಮ ತಳಿಗಳ ಕೊರತೆ**

ಅಲೆಮಾರಿ ಕುರುಬರು ಸ್ಥಳೀಯ ಕಪ್ಪು ಕುರಿಗಳನ್ನೇ (ಬಳ್ಳಾರಿ ಮತ್ತು ಡೆಕ್ಕನಿ) ಸಾಕಣೆ ಮಾಡುವುದರಿಂದ ಅವುಗಳ ಉತ್ಪನ್ನವು ರಾಜ್ಯದ ಹಾಗೂ ರಾಷ್ಟ್ರೀಯ ಇತರೆ ತಳಿಗಳಿಗಿಂತ ಕೆಳಮಟ್ಟದಲ್ಲಿವೆ. ಅನುವಂಶೀಯ ತಳಿಗಳನ್ನೇ ಮುಂದುವರಿಸಿಕೊಂಡು ಬಂದಿರುವುದು ಇದಕ್ಕೆ ಕಾರಣವಾಗಿದೆ. ಇವು ಮಾರುಕಟ್ಟೆಯಲ್ಲಿ ಕಡಿಮೆ ಬೆಲೆಗೆ ಮಾರಾಟವಾಗುವುದರಿಂದ ಆರ್ಥಿಕ ಪ್ರತಿಫಲ ಕಡಿಮೆ ಯಾಗುತ್ತದೆ. ಕುರಿ ಉತ್ಪನ್ನಗಳ ಪ್ರಮಾಣ ಮತ್ತು ಗುಣಮಟ್ಟ ಎರಡರಲ್ಲಿ ಉತ್ತಮತೆ ಕಂಡುಕೊಳ್ಳಲು ಸರ್ಕಾರ ರ್‍ಯಾಂಬ್ಯೋಲೇ, ಮೆರಿನೋ, ಸೌತ್‌ಡೌನ್ ಮುಂತಾದ ಉತ್ತಮ ತಳಿಯ ಕುರಿಗಳನ್ನು ಅಮದು ಮಾಡಿಕೊಂಡಿದೆ. ಇವನ್ನು ನಾಡು ತಳಿಯೊಂದಿಗೆ ಸಂವರ್ಧನೆ ಮಾಡಿ ಮಿಶ್ರತಳಿ ಟಗರುಗಳನ್ನು ಕುರಿಗಾರರಿಗೆ ವಿತರಿಸಲಾಗುತ್ತಿದೆ. ಈ ತಳಿಗಳು ಅಲೆಮಾರಿ ಕುರುಬರ ಉಪಯೋಗಕ್ಕೆ ಬರುತ್ತಿಲ್ಲ. ಇವರು ಅಲೆದಾಡುವ ವಾತಾವರಣಕ್ಕೆ ಹೊಂದಿಕೊಳ್ಳುತ್ತಿಲ್ಲ, ಬಹುದೂರ ಸಾಗಿ ಮೇವು ಮೇಯುವುದಿಲ್ಲ ಮತ್ತು ದಾರಿಯಲ್ಲಿ ಸಿಗುವ ಗಿಡ-ಬಳ್ಳಿ ಹುಲ್ಲು-ಮೇವನ್ನು ತಿನ್ನುವುದಿಲ್ಲ. ಇಂತಹ ತಳಿಗಳನ್ನು ಅಲೆಮಾರಿ ಕುರುಬರು ಸಾಕಲು ಸಾಧ್ಯವಾಗದು. ಇವರಿಗೆ ಬೇಕಾಗಿರುವುದು ಸಿಕ್ಕಿದ್ದನ್ನು ಮೇಯ್ದು ಕೆಟ್ಟ ಪರಿಸ್ಥಿತಿಯಲ್ಲಿಯೂ ಬದುಕುವ ತಳಿಗಳಾದುದರಿಂದ ಇವರು ತಳಿಯನ್ನು ಬದಲಾಯಿಸಲು ಮನಸ್ಸು ಮಾಡುತ್ತಿಲ್ಲ.

**ಕಡಿಮೆ ಗುಣಮಟ್ಟದ ಉಣ್ಣೆ :** ಇವರು ಉತ್ಪಾದಿಸುವ ಉಣ್ಣೆ ಒರಟು ಉತ್ಪನ್ನಗಳಿಗೆ ಮಾತ್ರ ಬಳಕೆಯಾಗುತ್ತಿದೆ. ಇದಕ್ಕೆ ಬೇಡಿಕೆ ಕಡಿಮೆ. ರಾಜ್ಯದಲ್ಲಿ ಉತ್ಪಾದನೆಯಾಗುತ್ತಿರುವ ಉಣ್ಣೆಯಲ್ಲಿ ಶೇ. ೨೦ ರಷ್ಟು ಮಾತ್ರ ಉಪಯೋಗವಾಗುತ್ತಿದೆ. ಉಳಿದ ಶೇ. ೮೦ ರಷ್ಟು ಭಾಗ ವ್ಯರ್ಥವಾಗುತ್ತದೆ. ಕರ್ನಾಟಕದಲ್ಲಿ ಉಣ್ಣೆಯನ್ನು ಉಣ್ಣೆಯ ವಸ್ತುಗಳಾಗಿ ಮಾರ್ಪಡಿಸುವ ಕಾರ್ಖಾನೆಗಳೇ ಇಲ್ಲದಿರುವುದೇ ಇದಕ್ಕೆ ಕಾರಣವಾಗಿದೆ. ಜೊತೆಗೆ ಸರ್ಕಾರ ಜವಳಿ ಇಲಾಖೆಯ ರೇಷ್ಮೆ ಮತ್ತು ಹತ್ತಿ ಉದ್ಯಮಕ್ಕೆ ನೀಡಿದ ಪ್ರಾಮುಖ್ಯತೆಯನ್ನು ಉಣ್ಣೆ ಉದ್ಯಮಕ್ಕೆ ನೀಡುತ್ತಿಲ್ಲ. ಉಣ್ಣೆ ಉತ್ಪಾದನೆಯಲ್ಲಿ ದೇಶದಲ್ಲಿಯೇ ಎರಡನೆ ಸ್ಥಾನದಲ್ಲಿರುವ ಕರ್ನಾಟಕದಲ್ಲಿ ಉಣ್ಣೆ ಸಂಸ್ಕರಣಾ ಘಟಕ ಸ್ಥಾಪನೆಗೆ ಸರ್ಕಾರ ಆಸಕ್ತಿ ಹೊಂದಿಲ್ಲ. ರಾಣೆಬೆನ್ನೂರಿನಲ್ಲಿ ೨೦೦೩-೦೪ನೇ ಸಾಲಿನಲ್ಲಿ ಒಂದೂವರೆ ಕೋಟಿ ರೂಪಾಯಿ ವೆಚ್ಚದಲ್ಲಿ ಉಣ್ಣೆ ಘಟಕಕ್ಕೆ ಅಡಿಗಲ್ಲು ನಿರ್ಮಿಸಿದರು. ಆದರೆ ಈವರೆಗೆ ಆ ಘಟಕ ಕಾರ್ಯಾರಂಭ ಮಾಡಿಲ್ಲ.

**ಶೈಕ್ಷಣಿಕ ಸ್ಥಿತಿಗತಿ**

ಶಿಕ್ಷಣ ಅಭಿವೃದ್ಧಿಯ ಮೂಲ ಮಂತ್ರ ಹಾಗೂ ಸಾಮಾಜಿಕ ಪರಿವರ್ತನೆಯ ಮೂಲ ಸಾಧನವಾಗಿದೆ. ಇದು "ಪ್ರಾಣಿ ರೂಪದಲ್ಲಿರುವ ಮಾನವನನ್ನು ಮಾನವತ್ವದೆಡೆಗೆ ಒಯ್ಯುವ ಸಾಧನ"(ಎಚ್ಚಾರ್ಕೆ:೨೦೦೩:೫೦೬). ಇದು ಸಾಮಾಜಿಕ ಚಲನೆಯ ವಾಹಕವಾಗಿದ್ದು,

ಮೇಲ್ಮುಖ ಚಲನೆಗೆ ಅನುವು ಮಾಡಿಕೊಡುವುದರ ಜೊತೆಗೆ ವ್ಯಕ್ತಿಯ ಅಂತಸ್ತಿನ ನಿರ್ಧಾರಕ ಅಂಶವಾಗಿದೆ. ಶಿಕ್ಷಣವಿಲ್ಲದ ವ್ಯಕ್ತಿ ವೈಯಕ್ತಿಕವಾಗಿಯೇ ಆಗಲಿ ಸಾಮಾಜಿಕವಾಗಿಯೇ ಆಗಲಿ ಅಭಿವೃದ್ಧಿ ಹೊಂದಲು ಸಾಧ್ಯವಿಲ್ಲ. ಶಿಕ್ಷಣದ ಕೊರತೆಯು ವ್ಯಕ್ತಿ ಮತ್ತು ಸಮಾಜ ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ರಾಜಕೀಯವಾಗಿ ಹಿಂದುಳಿಯಲು ಕಾರಣವಾಗುತ್ತದೆ. ಎಲ್ಲಕ್ಕಿಂತ ಮಿಗಿಲಾಗಿ ಸಮಾಜದ ಮುಖ್ಯವಾಹಿನಿಗೆ ಬರಬೇಕೆಂದರೆ ಶಿಕ್ಷಣ ಅತ್ಯಂತ ಆಗತ್ಯವಾಗಿದೆ.

ಶಿಕ್ಷಣವು ಆರ್ಥಿಕ ಅಭಿವೃದ್ಧಿಯಲ್ಲಿ ಅತ್ಯಂತ ಮಹತ್ವವನ್ನು ಹೊಂದಿದೆ. ಮಾನವ ಮನೋವೃತ್ತಿ, ಕೌಟುಂಬಿಕ ಗಾತ್ರ ಮತ್ತು ಸಂಪ್ರದಾಯಗಳ ಮೇಲೆ ಪರಿಣಾಮ ಬೀರಿ ಬದಲಾವಣೆ ತರುತ್ತದೆ. ಅನುಭೋಗದ ಆದ್ಯತೆ ಮತ್ತು ಸಮುದಾಯದ ಆಚರಣೆ, ಸಂಪ್ರದಾಯಗಳ ಮೇಲೆ ಮಾಡುವ ವೆಚ್ಚವನ್ನು ಕಡಿಮೆ ಮಾಡುವ ಮೂಲಕ ಬಂಡವಾಳ ನಿರ್ಮಾಣವನ್ನು ಹೆಚ್ಚಿಸುತ್ತದೆ. "ವ್ಯಕ್ತಿಗತ ದಕ್ಷತೆಯ ಕೊರತೆಯು ಆರ್ಥಿಕ ಬೆಳವಣಿಗೆಗೆ ಗಂಭೀರ ತೊಡಕಾಗಿದೆ. ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಜ್ಞಾನವು ಒಂದು ಪ್ರಮುಖ ಕೊರತೆಯು ಸಂಪನ್ಮೂಲವೆಂದು ಯೋಜನೆಗಳ ಅನುಭವದಿಂದ ತಿಳಿದುಬರುತ್ತದೆ"(ದೊಡ್ಡನಗೌಡ ಪಾಟೀಲ:೨೦೦೩:೦೦).

ಮುಂದಿನ ಕೋಷ್ಟಕ ೧೦.೧ ನ್ನು ಗಮನಿಸಿದಾಗ ಬೆಳಗಾಂ ಜಿಲ್ಲೆಯ ೩೮೬ ಕುಟುಂಬಗಳ ಸಾಕ್ಷರರ್ಹರ ಜನಸಂಖ್ಯೆ ೧೯೨೫. ಅದರಲ್ಲಿ ಶೇ. ೫೦.೪೯ ರಷ್ಟು ಪುರುಷರು ಮತ್ತು ಶೇ. ೪೯.೫೧ರಷ್ಟು ಸ್ತ್ರೀಯರಿದ್ದಾರೆ. ಸಾಕ್ಷರರ್ಹರ ಸಂಖ್ಯೆಯನ್ನು ಸಾಕ್ಷರಸ್ತರ ಸಂಖ್ಯೆಗೆ ಹೋಲಿಸಿದಾಗ ಶೇ. ೨೫.೦೩ ರಷ್ಟು ಇದ್ದು, ಅದರಲ್ಲಿ ಶೇ. ೧೮.೪೪ ರಷ್ಟು ಪುರುಷರು ಮತ್ತು ೬.೫೯ ರಷ್ಟು ಸ್ತ್ರೀಯರು ಸಾಕ್ಷರತೆಯನ್ನು ಹೊಂದಿದ್ದಾರೆ. ಸಾಕ್ಷರರ್ಹರ ಜನಸಂಖ್ಯೆಯನ್ನು ಅನಕ್ಷರಸ್ಥರ ಸಂಖ್ಯೆಗೆ ಹೋಲಿಸಿದಾಗ ಅನಕ್ಷರಸ್ಥರು ಶೇ. ೭೪.೯೭ ಇದ್ದಾರೆ. ಅದರಲ್ಲಿ ಶೇ. ೩೨.೦೫ ಪುರುಷರು ಮತ್ತು ಶೇ. ೪೨.೯೦ರಷ್ಟು ಸ್ತ್ರೀಯರಿದ್ದಾರೆ. ದೇಶದ ಸ್ತ್ರೀ ಮತ್ತು ಪುರುಷರ ಸಾಕ್ಷರತೆಗೆ ಹೋಲಿಕೆ ಮಾಡಿದಾಗ ಅಲೆಮಾರಿ ಕುರುಬರ ಸಾಕ್ಷರತೆ ಕಡಿಮೆ ಇದೆಯೆಂದು ಇದರಿಂದ ವ್ಯಕ್ತವಾಗುತ್ತದೆ. ೨೦೦೧ರ ಜನಗಣತಿಯ ಪ್ರಕಾರ ದೇಶದ ಒಟ್ಟು ಸಾಕ್ಷರತೆಯ ಶೇ. ೬೫.೩೮ ಕರ್ನಾಟಕ ಶೇ. ೬೭.೦೪ ರಷ್ಟು ಇದೆ. ಅದರಲ್ಲಿ ಪುರುಷರು ಶೇ. ೭೫.೮೫ ಮತ್ತು ಸ್ತ್ರೀಯರು ೫೪.೧೬ ರಷ್ಟು ಇದೆ. ಆದರೆ ಅಲೆಮಾರಿ ಕುರುಬರ ಸಾಕ್ಷರತೆಯು ಶೇ. ೨೫.೦೩ರಷ್ಟು ಇದ್ದು ಅದರಲ್ಲಿ ಪುರುಷರು ಶೇ. ೧೮.೪೪ ಮತ್ತು ಸ್ತ್ರೀಯರು ಶೇ. ೬.೫೯ ರಷ್ಟು ಹೊಂದಿದ್ದಾರೆ.

ಪ್ರಸ್ತುತ ಕ್ಷೇತ್ರಕಾರ್ಯದ ಅಂಕಿ-ಅಂಶಗಳಿಂದ ತಾಲೂಕುವಾರು ಸಾಕ್ಷರಸ್ಥರು ಹಾಗೂ ಅನಕ್ಷರಸ್ಥರ ಸಂಖ್ಯೆಗಳನ್ನು ಗಮನಿಸಿದಾಗ ಚಿಕ್ಕೋಡಿ ತಾಲೂಕಿನ ಒಟ್ಟಾರೆ ಸಾಕ್ಷರತೆಯು ಶೇ. ೨೩.೬೦ರಷ್ಟಾಗಿದೆ. ಅದರಲ್ಲಿ ಪುರುಷರು ಶೇ. ೧೭.೭೬ ರಷ್ಟು ಮತ್ತು ಸ್ತ್ರೀಯರು ಶೇ. ೫.೮೩ ರಷ್ಟು ಹೊಂದಿದ್ದಾರೆ. ಹಾಗೆಯೇ ಅನಕ್ಷರಸ್ಥರು ಶೇ. ೭೬.೩೯ ರಷ್ಟಿದ್ದು,

## ಕೋಷ್ಟಕ ೧೦.೧ ಅಲೆಮಾರಿ ಕುರುಬರ ಸಾಕ್ಷರತೆಯ ಪ್ರಮಾಣ

| ಸಂ. | ತಾಲೂಕುಗಳು | ಸಾಕ್ಷರ್ಹರು | | | ಸಾಕ್ಷರಸ್ಥರು | | | ಅನಕ್ಷರಸ್ಥರು | | |
|---|---|---|---|---|---|---|---|---|---|---|
| | | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ೧ | ಅಥಣಿ | ೪ | ೩ | ೭ | ೧ | - | ೧ | ೩ | ೩ | ೬ |
| ೨ | ಖಾನಾಪುರ | ೩೨ | ೨೬ | ೫೮ | ೧೩ | ೩ | ೧೬ | ೧೯ | ೨೩ | ೪೨ |
| ೩ | ಗೋಕಾಕ್ | ೯ | ೧೨ | ೨೧ | ೪ | - | ೪ | ೫ | ೧೨ | ೧೭ |
| ೪ | ಚಿಕ್ಕೋಡಿ | ೭೭೭ | ೭೮೨ | ೧೫೫೯ | ೨೭೭ | ೯೧ | ೩೬೮ | ೫೦೦ | ೬೯೧ | ೧೧೯೧ |
| ೫ | ಬೈಲಹೊಂಗಲ | - | - | - | - | - | - | - | - | - |
| ೬ | ಬೆಳಗಾವಿ | ೧೧೯ | ೧೦೦ | ೨೧೯ | ೫೦ | ೩೩ | ೮೩ | ೬೯ | ೬೭ | ೧೩೬ |
| ೭ | ರಾಮದುರ್ಗ | ೭ | ೪ | ೧೧ | ೩ | - | ೩ | ೪ | ೪ | ೮ |
| ೮ | ರಾಯಬಾಗ್ | ೧೫ | ೧೪ | ೨೯ | ೫ | - | ೫ | ೧೦ | ೧೪ | ೨೪ |
| ೯ | ಸವದತ್ತಿ | ೨ | ೩ | ೫ | ೧ | - | ೧ | ೧ | ೩ | ೪ |
| ೧೦ | ಹುಕ್ಕೇರಿ | ೭ | ೯ | ೧೬ | ೧ | - | ೧ | ೬ | ೯ | ೧೫ |
| | ಒಟ್ಟು | ೯೭೨ | ೯೫೩ | ೧೯೨೫ | ೩೫೫ | ೧೨೭ | ೪೮೨ | ೬೧೭ | ೮೨೬ | ೧೪೪೩ |

ಇದರಲ್ಲಿ ಪುರುಷರು ಶೇ. ೩೨.೦೭ ಹಾಗೂ ಶೇ. ೪೪.೩೨ ಸ್ತ್ರೀಯರಿರುವುದು ಕಂಡುಬರುತ್ತದೆ. ಎರಡನೆಯದಾಗಿ ಬೆಳಗಾವಿ ತಾಲೂಕಿನ ಒಟ್ಟಾರೆ ಸಾಕ್ಷರತೆಯು ಶೇ. ೩೭.೮೯ರಷ್ಟು ಹೊಂದಿದ್ದು, ಪುರುಷರು ಶೇ. ೨೨.೮೩ ಮತ್ತು ಸ್ತ್ರೀಯರು ಶೇ. ೧೫.೦೬ ರಷ್ಟಿರುವುದು ಕಂಡುಬಂದರೆ, ಅನಕ್ಷರಸ್ಥರು ಶೇ. ೬೨.೧೦ ರಷ್ಟು ಹೊಂದಿದೆ. ಇದರಲ್ಲಿ ಪುರುಷರು ಶೇ. ೩೧.೫೦ ಮತ್ತು ಶೇ. ೩೦.೫೯ ರಷ್ಟು ಸ್ತ್ರೀಯರು ಹೊಂದಿರುವರು. ಮೂರನೆಯದಾಗಿ ಖಾನಾಪುರ ತಾಲೂಕಿನ ಸಾಕ್ಷರತೆ ಶೇ. ೨೭.೫೮ ರಷ್ಟು ಹೊಂದಿದೆ. ಇದರಲ್ಲಿ ಪುರುಷರು ಶೇ. ೨೨.೪೧ ಮತ್ತು ಶೇ. ೫.೧೭ ರಷ್ಟು ಸ್ತ್ರೀಯರು ಕಂಡುಬಂದರೆ, ಅನಕ್ಷರಸ್ಥರ ಪ್ರಮಾಣವು ಶೇ. ೭೨.೪೧ ರಷ್ಟಾಗಿದ್ದು, ಪುರುಷರು ಶೇ. ೩೨.೭೫ ಮತ್ತು ಶೇ. ೩೯.೬೫ ರಷ್ಟು ಸ್ತ್ರೀಯರನ್ನು ಕಾಣಬಹುದು. (ವೃತ್ತಚಿತ್ರ: ೧೦.೧ ಮತ್ತು ೧೦.೨ ಗಮನಿಸಿ) ಹೀಗೆ ಉಳಿದ ತಾಲೂಕುವಾರುಗಳಲ್ಲಿ ಸಾಕ್ಷರತೆ ಹಾಗೂ ಅನಕ್ಷರತೆಯ ಪ್ರಮಾಣದಲ್ಲಿ ಅನಕ್ಷರತೆಯು ಹೆಚ್ಚಿರುವುದನ್ನು ಗಮನಿಸಬಹುದು.

ವೃತ್ತಚಿತ್ರ: ೧೦.೧ ಅಲೆಮಾರಿ ಕುರುಬರ ಸಾಕ್ಷರತೆಯ ಶೇಕಡವಾರು ಪ್ರಮಾಣ




ವೃತ್ತಚಿತ್ರ: ೧೦.೨ ಅಲೆಮಾರಿ ಕುರುಬರ ಅನಕ್ಷರತೆಯ ಶೇಕಡವಾರು ಪ್ರಮಾಣ



## ಕೋಷ್ಟಕ ೧೦.೨ ಅಲೆಮಾರಿ ಕುರುಬರ ತಾಲೂಕುವಾರು, ಶೈಕ್ಷಣಿಕ ಮಟ್ಟ

| | ಶೈಕ್ಷಣಿಕ ಮಟ್ಟ | | | | | | | | | | | | | | |
|---|---|---|---|---|---|---|---|---|---|---|---|---|---|---|---|
| | ಪ್ರಾಥಮಿಕ | | | ಮಾಧ್ಯಮಿಕ | | | ಪ್ರೌಢಶಾಲೆ | | | ಪದವಿಪೂರ್ವ | | | ಪದವಿಯೇತರ | | |
| ತಾಲೂಕು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು | ಗಂಡು | ಹೆಣ್ಣು | ಒಟ್ಟು |
| ಅಥಣಿ | ೧ | -- | ೧ | -- | -- | -- | -- | -- | -- | -- | -- | -- | -- | -- | -- |
| ಖಾನಾಪುರ | ೧೨ | ೧ | ೧೩ | -- | ೧ | ೧ | ೧ | ೧ | ೨ | -- | -- | -- | -- | -- | -- |
| ಗೋಕಾಕ್ | ೪ | -- | ೪ | -- | -- | -- | -- | -- | -- | -- | -- | -- | -- | -- | -- |
| ಚಿಕ್ಕೋಡಿ | ೧೮೯ | ೫೪ | ೨೪೩ | ೩೪ | ೨೦ | ೫೪ | ೩೩ | ೭ | ೪೦ | ೧೬ | ೫ | ೨೧ | ೫ | -- | ೫ |
| ಬೆಳಗಾವಿ | ೧೦ | ೧೩ | ೨೩ | ೧೫ | ೧೧ | ೨೬ | ೧೯ | ೯ | ೨೮ | ೬ | -- | ೬ | -- | -- | -- |
| ರಾಮದುರ್ಗ | ೩ | -- | ೩ | -- | -- | -- | -- | -- | -- | -- | -- | -- | -- | -- | -- |
| ರಾಯಬಾಗ್ | ೪ | -- | ೪ | ೧ | -- | ೧ | -- | -- | -- | -- | -- | -- | -- | -- | -- |
| ಸವದತ್ತಿ | -- | ೧ | ೧ | -- | -- | -- | -- | -- | -- | -- | -- | -- | -- | -- | -- |
| ಹುಕ್ಕೇರಿ | ೧ | -- | ೧ | -- | -- | -- | -- | -- | -- | -- | -- | -- | -- | -- | -- |
| ಒಟ್ಟು | ೨೨೪ | ೬೯ | ೨೯೩ | ೫೦ | ೩೨ | ೮೨ | ೫೩ | ೧೭ | ೭೦ | ೨೨ | ೫ | ೨೭ | ೫ | -- | ೫ |

ಅಲೆಮಾರಿ ಕುರುಬ ಸಮುದಾಯದ ಶಿಕ್ಷಣ ಪ್ರಮಾಣ ಪ್ರಾಥಮಿಕ ಹಂತದಲ್ಲಿ ಶೇ. ೬೧ ರಷ್ಟು, ಮಾಧ್ಯಮಿಕ ಹಂತದಲ್ಲಿ ಶೇ. ೧೭ ರಷ್ಟು, ಪ್ರೌಢಶಿಕ್ಷಣವು ಶೇ. ೧೫ ರಷ್ಟು ಪದವಿ ಪೂರ್ವ ಶಿಕ್ಷಣ ಶೇ. ೬ ರಷ್ಟು, ಪದವಿಯೇತರ ಶೇ. ೧ ರಷ್ಟು ಹೊಂದಿದ್ದಾರೆ. ಅಲೆಮಾರಿ ಕುರುಬರು ಪ್ರಾಥಮಿಕ ಹಂತದ ಶಿಕ್ಷಣದಲ್ಲಿ ಉತ್ತಮವಾಗಿದ್ದರೂ ಲಿಂಗಪ್ರಮಣಾವನ್ನು ಗಮನಿಸಿದಾಗ ಪುರುಷರು ಶೇ. ೭೬.೪೫, ಸ್ತ್ರೀಯರು ಶೇ. ೨೩.೫೪ ರಷ್ಟಿರುವುದು ಕಂಡುಬರುತ್ತದೆ.

ವೃತ್ತಚಿತ್ರ: ೧೦.೩ ಅಲೆಮಾರಿ ಕುರುಬರ ಒಟ್ಟಾರೆ ಶೇಕಡವಾರು ಶೈಕ್ಷಣಿಕ ಹಂತಗಳು




ಆಧುನಿಕ ಅಥವಾ ಔಪಚಾರಿಕ ಶಿಕ್ಷಣ ಚಾರಿಗೆ ಬಂದ ಮೇಲೆ ರಾಜ್ಯದ ಬೇರೆ ಬೇರೆ ಸಮುದಾಯಗಳು ಅವರವರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳಿಗೆ ತಕ್ಕಂತೆ ಶಿಕ್ಷಣವನ್ನು ಪಡೆದು ವಿದ್ಯಾವಂತರಾಗತೊಡಗಿದರು. ಆದರೆ ಅಲೆಮಾರಿ ಕುರುಬ ಸಮುದಾಯದವರಿಗೆ ಔಪಚಾರಿಕ ಶಿಕ್ಷಣದ ಅವಕಾಶವೇ ಸಿಗಲಿಲ್ಲ. ಅತಿ ಹಿಂದುಳಿದಿರುವಿಕೆ ಮತ್ತು ತಮ್ಮ ಜೀವನೋಪಾಯಕ್ಕಾಗಿ ಕುಟುಂಬವನ್ನು ಕಟ್ಟಿಕೊಂಡು ಕುರಿಗಳ ಜೊತೆ ಬೆಟ್ಟ-ಗುಡ್ಡ, ಹೊಲ-ಗದ್ದೆ ಮುಂತಾದ ಸ್ಥಗಳಲ್ಲಿ ವರ್ಷವಿಡಿ ಅಲೆದಾಡುತ್ತಿರುತ್ತಾರೆ. ಇದು ಅವರ ಮಕ್ಕಳನ್ನು ಶಾಲೆಗೆ ಕಳುಹಿಸಲು ಅಡ್ಡಿ ಉಂಟು ಮಾಡಿದೆ. ಈ ಸಮುದಾಯದ ಬಹುತೇಕ ತಂದೆ-ತಾಯಿಗಳು ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸುವುದಿಲ್ಲ. ಚಿಕ್ಕವರಿದ್ದಾಗ ಮರಿಗಳ ಸಂಗೋಪನೆ, ಹತ್ತು-ಹನ್ನೆರಡು ವರ್ಷಗಳಾದ ನಂತರ ಕುರಿಕಾಯಲು ಕಳುಹಿಸುತ್ತಾರೆ. ಕುರಿಸಂಗೋಪನೆ ಶ್ರಮಸಾಂದ್ರ ಉದ್ಯೋಗವಾದ್ದರಿಂದ ಕುಟುಂಬದ ಎಲ್ಲ ವಯಸ್ಸಿನ ಸದಸ್ಯರು ಆ ಉದ್ಯೋಗದಲ್ಲಿ ತೊಡಗಿಸಿಕೊಳ್ಳುವುದು ಅಗತ್ಯವಿದೆ. ಕ್ಷೇತ್ರಕಾರ್ಯದ

ಸಂದರ್ಭದಲ್ಲಿ ಹಲವಾರು ಅಲೆಮಾರಿ ಕುರುಬ ಕುಟುಂಬ ಮುಖ್ಯಸ್ಥರಿಗೆ ನಿಮ್ಮ ಮಕ್ಕಳನ್ನು ಏಕೆ ಶಾಲೆಗೆ ಕಳುಹಿಸುವುದಿಲ್ಲ ಎಂದು ಪ್ರಶ್ನಿಸಲಾಯಿತು. ಆಗ ದೊರೆತ ಉತ್ತರಗಳು ವಿಭಿನ್ನವಾಗಿವೆ.

- "ಶಾಲೆಗೆ ಹೋಗಿ ಯಾರು ಉದ್ಧಾರ ಆಗಿದ್ದಾರೆ?" ನಮ್ಮಪ್ಪ ಓದಿಲ್ಲ, ನಮ್ಮ ತಾತ ಓದಿಲ್ಲ, ಅವರೆಲ್ಲಾ ಜೀವನ ಮಾಡಲಿಲ್ಲರ್ರೀ? (*ವಕ್ತೃ: ದೇವರಸಿ ಖಾನಪ್ಪ, ನಾಯಿಂಗಳಾಜ್*)
- "ಶಾಲೆಗೆ ಕಳುಹಿಸಿದ್ರೇ, ಈ ಬದುಕು ಯಾರೂ ಮಾಡುತಾರ್ರೀ?" ಸಾಹೆಬ್ರೇ (*ವಕ್ತೃ: ಮಂಜುನಾಥ ದುರುಗಣ್ಣನವರ, ಸೌಂದಲಗ*)
- "ನೀವೇನು ಕರೇ ಹೇಳ್ತಿರ್ರೀ, ಈ ಬದುಕುಗಳನ್ನು ಯಾರು ನೋಡಿಕೊಳ್ಳಬೇಕು?". ನೀವೇ ಹೇಳ್ರಿ? (*ವಕ್ತೃ: ಖಾನಪ್ಪ ಪೂಜಾರಿ, ಕಟಕಲಾಟ*)
- "ನೀವು ಹೇಳ್ದಂಗೆ ಮಾಡುತ್ತೀವ್ರಿ, ಸಾಲಿ ಕಲಿತ ಮೇಲೆ ಕೆಲಸ ಸಿಗದಿದ್ರೇ? ಸಾಲಿ ಕಲತರ್ರೋ ಮುಂದೆ ಈ ಬದುಕು ಮಾಡತಾರ್ರೀ?" ಎಂಬುದಾಗಿ ತನ್ನ ಪಕ್ಕದಲ್ಲಿಯೆ ನಿಂತಿದ್ದ ಪಿ.ಯು.ಸಿ. ಓದಿದ ತನ್ನ ಮಗನ ಕಡೆಗೆ ಕೈ ತೋರಿಸಿ ಹೇಳುತ್ತಾರೆ. (*ವಕ್ತೃ: ಲಿಂಗಪ್ಪ, ಸಾವಿರಕುರಿ, ನವಲಿಹಾಳ್*)

ಇವರನ್ನು ಶಿಕ್ಷಿತರನ್ನಾಗಿಸಿದ ಮೇಲೆ ಮರಳಿ ನಿಮ್ಮ ಜೀವನ ಪದ್ಧತಿಗೆ ಸಾಗಿ ಎನ್ನುವುದು ಅಥವಾ ಅವರು ಸಾಗುವುದು ಸಾಧ್ಯವಾದಿತೆ? ಇಲ್ಲೂ ದಿಕ್ಕು ಕಾಣದೇ ತಮ್ಮ ಕುಲಪದ್ಧತಿಗೆ ಮರಳಲು ಸಾಧ್ಯವಾಗದ ತ್ರಿಶಂಕು ಸ್ಥಿತಿ ನಿರ್ಮಾಣವಾದರೆ ಹೇಗೆ? ನಿಜವಾಗಿಯು ಶಿಕ್ಷಣ ಅವರಿಗೊಂದು ಬದುಕನ್ನು ನೀಡಬೇಕು. ಇಲ್ಲದಿದ್ದರೆ ಶಿಕ್ಷಣ ಅವರ ಬದುಕಿನಲ್ಲಿ ತ್ರಿಶಂಕು ಸ್ಥಿತಿ ನಿರ್ಮಾಣ ಮಾಡುವುದರಲ್ಲಿ ಸಂದೇಹವಿಲ್ಲ.

ಅಡವಿಯಲ್ಲಿ ಬಿಡಾರ ಹೂಡಿಕೊಂಡು ಜೀವಿಸುವ ಮಕ್ಕಳಿಗೆ ಎಂತಹ ಶಿಕ್ಷಣ ನೀಡಬೇಕು ಎಂಬುದನ್ನು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಯೋಚಿಸಬೇಕು. ಇತ್ತೀಚಿಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ೧೪ ವರ್ಷದವರೆಗಿನ ಮಕ್ಕಳಿಗೆ 'ಉಚಿತ' ಮತ್ತು 'ಕಡ್ಡಾಯ ಶಿಕ್ಷಣ' ಘೋಷಣೆಗಳು ಅಲೆಮಾರಿ ಕುರುಬರ ಮಕ್ಕಳ ವ್ಯಾಪ್ತಿಯವರೆಗೆ ಸಾಗಿದರೆ ಅದಕ್ಕೊಂದು ಅರ್ಥ ಸಿಕ್ಕಂತಾಗುತ್ತದೆ.

**ಮಹಿಳೆಯರ ಶಿಕ್ಷಣ :** ಮಹಿಳೆಯರು ಶಿಕ್ಷಣದಿಂದ ವಂಚಿತರಾಗಿರುವುದರ ಜೊತೆಗೆ ನಿರ್ಲಕ್ಷಿತವಾಗಿದ್ದಾಳೆ ಎಂದರೆ ತಪ್ಪಾಗಲಾರದು. ಇದಕ್ಕೆ ಕಾರಣ ಅವರ ಬದುಕಿನ ವಿಧಾನ ಒಂದಾದರೆ ಮತ್ತೊಂದು ಬಹಳಷ್ಟು ಮಹಿಳೆಯರಿಗೆ ಋತುಮತಿಯಾಗುವ ಮೊದಲೇ ಮದುವೆ ಮಾಡುವುದು. ಇಂದು ದೇಶದಾದ್ಯಂತ "ಮಹಿಳಾ ಸಶಕ್ತೀಕರಣ" (Women Empowerment) ಪ್ರಕ್ರಿಯೆ ನಡೆಯುತ್ತಿದೆ. ೨೦೦೧ನೇ ವರ್ಷವನ್ನು "ಮಹಿಳಾ ಸಬಲೀಕರಣ ವರ್ಷ"ವೆಂದು ಕೇಂದ್ರ ಸರ್ಕಾರ ಘೋಷಣೆ ಮಾಡಿದೆ. ಮಹಿಳೆಯರ ಆರ್ಥಿಕ ಸಾಮಾಜಿಕ ರಾಜಕೀಯ ಅಭ್ಯುದಯದ ಕಾರ್ಯಗಳನ್ನು ಅನುಷ್ಠಾನಕ್ಕೆ ತರಲಾಗುತ್ತಿದೆ. ಇನ್ನೊಂದೆಡೆ

ಮಹಿಳೆಯರ ಆರ್ಥಿಕ, ಸಾಮಾಜಿಕ ಸ್ವಾವಲಂಬನೆಗೆ ಸ್ವಸಹಾಯ ಗುಂಪುಗಳ ರಚನೆ ಸಂಘಟನೆ ಯಾಗುತ್ತಿವೆ. ನಗರ ಪ್ರದೇಶದಲ್ಲಿ ಮಹಿಳಾ ಚಳವಳಿಗಳು ಚುರುಕಾಗುತ್ತಿವೆ. ವಿಶ್ವವಿದ್ಯಾಲಯ ಗಳಲ್ಲಿ ಮಹಿಳಾ ಅಧ್ಯಯನ ಕೇಂದ್ರಗಳನ್ನು ತೆರೆಯಲಾಗುತ್ತಿದೆ. ಇಷ್ಟಾದರೂ ಅಲೆಮಾರಿ ಕುರುಬರ ಮಹಿಳೆಯರು ಶಿಕ್ಷಣದ ಬಾಗಿಲು ತಟ್ಟಲು ಸಾಧ್ಯವಾಗುತ್ತಿಲ್ಲ.

**ರಾಜಕೀಯ ಸ್ಥಿತಿಗತಿ**

ಭಾರತ ಪ್ರಜಾಪ್ರಭುತ್ವ ರಾಷ್ಟ್ರವಾಗಿದ್ದು, ಪ್ರಜೆಗಳದೆ ಪರಮಾಧಿಕಾರ ಎನ್ನುವ ಅಂಶವು ಅತ್ಯಂತ ಮಹತ್ವದ ಪಾತ್ರವಹಿಸುತ್ತದೆ. ಪ್ರಜೆಗಳ ಮತ ಪಡೆಯಲು ರಾಜಕೀಯ ಪಕ್ಷಗಳು ಚುನಾವಣೆ ಸಮಯದಲ್ಲಿ ಜನಪರ ಘೋಷಣೆಗಳ ಮೂಲಕ ಬಹುಮತ ಪಡೆದು ಅಧಿಕಾರದ ಚುಕ್ಕಾಣಿಯನ್ನು ಹಿಡಿಯುತ್ತವೆ. ಮತದಾನದ ಮೂಲಕ ಅಧಿಕಾರ ನೀಡುವ ಅಥವಾ ಹಿಂತೆಗೆದುಕೊಳ್ಳುವ ರಾಜಕೀಯ ಕೀಲಿಕೈ ಪ್ರಜೆಗಳಲ್ಲಿದೆ. ಆದರೆ ವಿಷಾದದ ಸಂಗತಿ ಎಂದರೆ ಭಾರತದಲ್ಲಿರುವ ಬಹಳಷ್ಟು ಪ್ರಜೆಗಳಿಗೆ ಮತದಾನದ ಮಹತ್ವ ಗೊತ್ತಿಲ್ಲದಿರುವುದು. ಅದರಲ್ಲೂ ವಿಶೇಷವಾಗಿ ಅಲೆಮಾರಿ ಸಮುದಾಯಗಳಲ್ಲಿ ಬಹಳಷ್ಟು ಜನರು ನಿರಕ್ಷರಿಗಳು ಹಾಗೂ ಬಡವರು. ಚುನಾವಣೆ ದಿನದಂದು ಮತ ಚಲಾಯಿಸದೆ ತಮ್ಮ ನಿತ್ಯ ಬದುಕಿನ ಜೀವನೋಪಾಯದ ಕೆಲಸ ಕಾರ್ಯಗಳಲ್ಲಿ ಮಗ್ನರಾಗಿರುತ್ತಾರೆ. ನಿರಕ್ಷರಿ ಗಳಾದ್ದರಿಂದ ಯಾವ ಅಭ್ಯರ್ಥಿಯನ್ನು ಆಯ್ಕೆ ಮಾಡಬೇಕು ಮತ್ತು ಯಾವ ಪಕ್ಷವನ್ನು ಅಧಿಕಾರಕ್ಕೆ ತಂದರೆ ತಮಗೆ ಅನುಕೂಲ ಎಂಬುದನ್ನು ಅರ್ಥೈಸಿಕೊಳ್ಳಲು ದೇಶದ ರಾಜಕೀಯ ವ್ಯವಸ್ಥೆ ಕುರಿತು ಅರಿಯುವ ಅವಕಾಶ ಇನ್ನೂ ಇವರಿಗೆ ಒದಗಿ ಬಂದಿಲ್ಲ.

ಅಲೆಮಾರಿ ಕುರುಬರು ನಿರಕ್ಷರಿಗಳು, ಹಿಂದುಳಿದವರು ಹಾಗೂ ಅಲೆಮಾರಿಗಳು. ತಮಗೆ ಯಾವ ಹಕ್ಕುಗಳಿವೆ? ಮತದಾನ ಎಂದರೇನು? ಓಟಿನ ಮಹತ್ವ? ಇತ್ಯಾದಿ ಅಂಶಗಳನ್ನು ತಿಳಿಯದವರು. ಇವರು ಸ್ವಗ್ರಾಮ ಬಿಟ್ಟು ಅಲೆಮಾರಿಗಳಾಗಿ ವಲಸೆ ಬಂದಿರುವವರು. ಕೆಲವರಿಗೆ ಓಟಿನ ಕಾರ್ಡ್ ಅಥವಾ ಮತದಾರರ ಪಟ್ಟಿಯಲ್ಲಿ ಹೆಸರಿದ್ದರೂ ಮತದಾನ ಮಾಡಲು ಸಾಧ್ಯವಾಗುತ್ತಿಲ್ಲ. ಸ್ವಗ್ರಾಮ ಬಿಟ್ಟು ಸುಮಾರು ೪೦೦ ರಿಂದ ೫೦೦ ಕಿ.ಮೀ. ದೂರ ಸಾಗಿ ವಲಸೆ ಬಂದಿರುವುದು ಹಾಗೂ ಅಡವಿಯಲ್ಲಿಯೇ ಗುಡಾರ ಹೂಡಿ ಸಂಚರಿ ಸುವಂಥ ಕ್ಲಿಷ್ಟ ಪರಿಸ್ಥಿತಿ ಇರುವುದರಿಂದ ಮತದಾನ ಮಾಡಲು ಸಾಧ್ಯವಾಗುತ್ತಿಲ್ಲ. ರಾಜಕೀಯ ಇವರ ಮತ ಪಡೆಯಲು ಪ್ರಯತ್ನಿಸುತ್ತಿಲ್ಲ. ಪಕ್ಷಗಳು ಅವರ ಸಮಸ್ಯೆಗಳನ್ನು ಕುರಿತು ಅಸೆಂಬ್ಲಿ ಹಾಗೂ ಪಾರ್ಲಿಮೆಂಟ್‌ನಲ್ಲಿ ಇವರ ಪರವಾಗಿ ಪ್ರಶ್ನೆಗಳನ್ನು ಕೇಳಿ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವವರ್‍ಯಾರು? ಇವರ ಸಮಸ್ಯೆಗಳು ಕುರಿತು ರಾಜಕೀಯ ನಾಯಕರು, ಮಂತ್ರಿಗಳು ಹಾಗೂ ಅಧಿಕಾರಿಗಳು ಕೇವಲ ಅನುಕಂಪ ತೋರುತ್ತಾರೆಯೇ ವಿನಹಃ ಸಮಸ್ಯೆಗಳಿಗೆ ಪರಿಹಾರ ನೀಡುವ ಪ್ರಯತ್ನ ಮಾಡುತ್ತಿಲ್ಲ ಎಂಬುದು ವಿಷಾದದ ಸಂಗತಿಯಾಗಿದೆ.

**ಪರಿಹಾರೋಪಾಯಗಳು**

ಅಲೆಮಾರಿ ಕುರುಬರ ಜೀವನ ವಿಧಾನವೇ ವೈಶಿಷ್ಟ್ಯವಾಗಿದೆ. ಅವರು ಇತರೆ ಸಮುದಾಯಗಳಿಗಿಂತ ಭಿನ್ನ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಆದ್ದರಿಂದ ಅವರಿಗೆ ವಿಶೇಷವಾದ ಮತ್ತು ಪ್ರತ್ಯೇಕವಾದ ಕ್ರಮಗಳನ್ನು ಸರ್ಕಾರ ಕೈಗೊಳ್ಳಬೇಕಾಗಿರುವುದು ಅಗತ್ಯ ಮತ್ತು ಅನಿವಾರ್ಯವಾಗಿದೆ. ಪ್ರಸ್ತುತ ಅಧ್ಯಯನದ ಅವಧಿಯಲ್ಲಿ ಕಂಡುಕೊಂಡ ಪರಿಹಾರೋಪಾಯಗಳನ್ನು ಈ ಕೆಳಗಿನ ಅಂಶಗಳ ಮೂಲಕ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

**ಹುಲ್ಲುಗಾವಲು ಮೀಸಲಿಡುವುದು**

ಇವರು ಎದುರಿಸುವ ಹಲವಾರು ಸಮಸ್ಯೆಗಳಲ್ಲಿ ಹುಲ್ಲುಗಾವಲಿನ ಕೊರತೆ ಪ್ರಮುಖವಾದದು. ರಾಜ್ಯವು ಸತತವಾಗಿ ಅಥವಾ ಆಗಿಂದಾಗ್ಗೆ ಎದುರಿಸುತ್ತಿರುವ ಬರಗಾಲ ಇದಕ್ಕೆ ಕಾರಣವಾಗಿದೆ. ಬರಗಾಲದ ಪರಿಣಾಮಗಳನ್ನು ನಿವಾರಿಸುವ ನಿಟ್ಟಿನಲ್ಲಿ ಶಾಶ್ವತ ಪರಿಹಾರಗಳನ್ನು ಕಂಡುಕೊಳ್ಳುವುದು ಅನಿವಾರ್ಯವಾಗಿದೆ. ಇವರು ಅಲೆದಾಡುವ ಗ್ರಾಮಗಳಲ್ಲಿರುವ ಸರ್ಕಾರಿ ಒಡೆತನದ ಅರಣ್ಯಭೂಮಿ, ರಾಜಸ್ವಭೂಮಿ, ಗೋಮಾಳ ಮತ್ತು ಇತರ ಭೂಪ್ರದೇಶಗಳನ್ನು ಪ್ರತಿ ಹೋಬಳಿ ಮಟ್ಟದಲ್ಲಿ ಗುರುತಿಸುವುದು ಹಾಗೂ ಆ ಭೂಮಿಯನ್ನು ಅಲೆಮಾರಿ ಕುರುಬರ ಕುರಿಗಳಿಗೋಸ್ಕರ ಮೀಸಲಿಡುವುದು. ಮೀಸಲಿಟ್ಟ ಭೂಮಿಗೆ ಶಾಶ್ವತ ನೀರಾವರಿ ಸೌಲಭ್ಯಗಳನ್ನು ಒದಗಿಸುವುದು ಹಾಗೂ ಕುರಿಗಳಿಗೆ ಹಿತವೆನಿಸುವ ಸುಧಾರಿತ ತಳಿಯ ಮೇವಿನ ಬೆಳೆಗಳನ್ನು ಬೆಳೆಯುವುದು- ಇದರ ನಿರ್ವಹಣೆಯನ್ನು ಅಲೆಮಾರಿ ಕುರುಬರ ಸಹಕಾರದೊಂದಿಗೆ ಸರ್ಕಾರ ಕೈಗೊಳ್ಳುವದು. ಇದರಿಂದ ಬರಗಾಲದ ಅವಧಿಯಲ್ಲಿ ಮತ್ತು ಕುರಿಗಳಿಗೆ ಮೇವಿನ ಕೊರತೆ ಕಂಡುಬಂದಾಗ ಮೇವಿನ ಸಮಸ್ಯೆಯನ್ನು ಬಗೆಹರಿಸಬಹುದು.

**ಕುಡಿಯುವ ನೀರಿನ ವ್ಯವಸ್ಥೆ**

ಸದಾ ಅಡವಿಯಲ್ಲಿ ಗುಡಾರವನ್ನು ಹೂಡಿ ಜೀವಿಸುವುದರಿಂದ ಇವರು ಮತ್ತು ಇವರ ಬದುಕು(ಕುರಿ)ಗಳಿಗೆ ಕುಡಿಯುವ ನೀರು ಲಭ್ಯವಾಗದೇ ಬಹಳಷ್ಟು ತೊಂದರೆ ಎದುರಿಸುತ್ತಿದ್ದಾರೆ. ಈ ಬವಣೆಯನ್ನು ಹೋಗಲಾಡಿಸಲು ಅಲೆಮಾರಿ ಕುರುಬರು ಅಲೆದಾಡುವ ಮಾರ್ಗಗಳಲ್ಲಿ ಕೊಳವೆ ಬಾವಿಗಳನ್ನು ಕೊರೆದು, ನೀರಿನ ತೊಟ್ಟಿಗಳನ್ನು ನಿರ್ಮಿಸಿ, ಕುಡಿಯುವ ನೀರಿನ ಸೌಲಭ್ಯ ಕಲ್ಪಿಸಬೇಕು. ಇದರಿಂದ ಕುರಿಗಳಿಗೆ ಮತ್ತು ಕುರಿಗಾರರಿಗೆ ಕಾಣಿಸಿಕೊಳ್ಳುವ ರೋಗ-ರುಜಿನಗಳನ್ನು ಕಡಿಮೆ ಗೊಳಿಸಬಹುದು.

**ರಾಜ್ಯಮಟ್ಟದ 'ಬಂದೂಕು ಪರವಾನಗಿ' ನೀಡುವುದು**

ಅಲೆಮಾರಿ ಕುರುಬರು ಅರಣ್ಯ ಪ್ರದೇಶಗಳಲ್ಲಿ ವಾಸಿಸುವುದರಿಂದ ಅವರಿಗೆ ಮತ್ತು ಕುರಿಗಳಿಗೆ ವನ್ಯ-ಮೃಗಗಳು ಹಾಗೂ ಆಗಂತುಕರಿಂದ ಜೀವಭಯವಿದೆ. ಆದ್ದರಿಂದ ಆತ್ಮರಕ್ಷಣೆಗಾಗಿ ಬಂದೂಕು ಹೊಂದುವ ಪರವಾನಗಿಯನ್ನು ಸೂಕ್ತ ಪ್ರಾಧಿಕಾರದಿಂದ

ನೀಡುವುದು ಹಾಗೂ ಸದರಿ ಬಂದೂಕನ್ನು ಯಾವುದೇ ಜಿಲ್ಲೆಗಳ ಗಡಿ ನಿರ್ಬಂಧವಿಲ್ಲದೆ ಇಡೀ ರಾಜ್ಯದಾದ್ಯಂತ ತೆಗೆದುಕೊಂಡು ಹೋಗಲು ಪರವಾನಗಿಯನ್ನು ನೀಡುವುದು ಅವಶ್ಯ ವಾಗಿದೆ.

**ಎಲ್ಲೆಲ್ಲಿ ವಲಸೆಯೋ ಅಲ್ಲಿ ಶಾಲೆ**

ಅಲೆಮಾರಿ ಕುರುಬರು ವರ್ಷವಿಡೀ ಕುರಿಗಳ ಜೊತೆ ಕುಟುಂಬ ಸಮೇತ ಅಲೆದಾಡುವುದರಿಂದ ಅವರ ಮಕ್ಕಳು ಶಿಕ್ಷಣದಿಂದ ವಂಚಿತರಾಗಿದ್ದಾರೆ. ಈ ಸಮಸ್ಯೆಯನ್ನು ಬಗೆಹರಿಸಲು ಬಿಹಾರ ಸರ್ಕಾರ ಮಾದರಿಯಲ್ಲಿ 'ಎಲ್ಲಿ ವಲಸೆಯೋ; ಅಲ್ಲಿ ಶಾಲೆ' ಎಂಬ ಯೋಜನೆಯನ್ನು ಜಾರಿಗೊಳಿಸುವುದು ಅಗತ್ಯವಾಗಿದೆ. ಈ ಯೋಜನೆಯಡಿ ಕ್ಷೇತ್ರಶಿಕ್ಷಣ ಸಂಪನ್ಮೂಲ ಕೇಂದ್ರಗಳಿಂದ ಅಲೆಮಾರಿ ಕುರುಬರ ಮಕ್ಕಳಿಗೆ ವರ್ಗಾವಣೆ ಪತ್ರವನ್ನು ವಿತರಿಸುವುದು. ವಲಸೆಯ ಸಮಯದಲ್ಲಿ ನೆಲಸಬಹುದಾದ ಗ್ರಾಮದ ಶಾಲೆಯಲ್ಲಿ ಇವರ ಮಕ್ಕಳಿಗೆ ದಾಖಲಾತಿ ಮತ್ತು ಶಿಕ್ಷಣವನ್ನು ದೊರಕಿಸಿ ಕೊಡುವುದು. ಮುಂದಿನ ಗ್ರಾಮದ ಭೂ ಪ್ರದೇಶಕ್ಕೆ ವಲಸೆ ಹೋಗುವ ಮುನ್ನ ವರ್ಗಾವಣೆ ಪತ್ರದಲ್ಲಿ ದಾಖಲಿಸಿ, ಮುಂದಿನ ಶಾಲೆಗೆ ವರ್ಗಾಯಿಸುವ ಪದ್ಧತಿಯನ್ನು ಅನುಸರಿಸುವುದು. ಹಾಗೆಯೇ ಮಕ್ಕಳನ್ನು ಕುರಿ ತಬ್ಬಿದ ಸ್ಥಳದಿಂದ ಬೆಳಿಗ್ಗೆ ಶಾಲೆಗೆ ಕರೆತರಲು ಮತ್ತು ಸಂಜೆ ಕುರಿ ತಬ್ಬಿದ ಸ್ಥಳಕ್ಕೆ ಬಿಟ್ಟು ಬರಲು ವಾಹನದ ವ್ಯವಸ್ಥೆ ಮಾಡಬೇಕು.

ಋತುಮಾನಕ್ಕನುಗುಣವಾಗಿ ಒಂದು ಪ್ರಮುಖ ಊರಿನ ಸುತ್ತಮುತ್ತಲಿನ ಗ್ರಾಮಗಳ ಭೂ ಪ್ರದೇಶದಲ್ಲಿ ಅಲೆದಾಡುವುದರಿಂದ ಆ ಪ್ರದೇಶಗಳಲ್ಲಿ ವಸತಿ ಶಾಲೆಗಳನ್ನು ತೆರೆಯಬೇಕು. ಈ ರೀತಿಯಾಗಿ ವಸತಿ ಶಾಲೆ ತೆರೆಯುವುದರಿಂದ ಹದಿನೈದು ಅಥವಾ ತಿಂಗಳಿಗೊಮ್ಮೆ ತಮ್ಮ ಮಕ್ಕಳನ್ನು ನೋಡಿಕೊಂಡು ಬರಲು ಅಲೆಮಾರಿ ಕುರುಬರ ತಂದೆ-ತಾಯಿಗಳಿಗೂ ಅನುಕೂಲವಾಗುತ್ತದೆ ಮತ್ತು ಸರ್ಕಾರದ ಸರ್ವರಿಗೂ ಶಿಕ್ಷಣ ಎಂಬ ಯೋಜನೆಯು ಕಾರ್ಯಗತವಾದಂತಾಗುತ್ತದೆ.

**ಕುರಿ ಮೇಕೆಗಳಿಗೆ ಮಾರುಕಟ್ಟೆ ಸೌಲಭ್ಯ**

ಅಲೆಮಾರಿ ಕುರುಬರಲ್ಲಿ ಅಗಾಧವಾದ ಕುರಿ-ಮೇಕೆ ಸಂಪತ್ತಿದೆ. ಇದು ರಾಜ್ಯದ ಆರ್ಥಿಕ ಅಭಿವೃದ್ಧಿಗೆ ಮೂಲ ಬಂಡವಾಳವಾಗಿದೆ. ಸದ್ಯದ ಕುರಿ-ಮೇಕೆ ಮಾರುಕಟ್ಟೆ ವ್ಯವಸ್ಥೆ ಮಧ್ಯವರ್ತಿಗಳ ಬಿಗಿ ಹಿಡಿತದಲ್ಲಿರುವುದರಿಂದ ಅಲೆಮಾರಿ ಕುರುಬರಿಗೆ ನ್ಯಾಯಯುತವಾದ ಬೆಲೆ ದೊರೆಯುತ್ತಿಲ್ಲ. ಆದ್ದರಿಂದ ಕೃಷಿಉತ್ಪನ್ನಗಳ ಮಾರುಕಟ್ಟೆ ಮಾದರಿಯಲ್ಲಿ "ಕುರಿ-ಮೇಕೆ ಉತ್ಪನ್ನಗಳ ಮಾರುಕಟ್ಟೆ ಕಾಯಿದೆ" ಜಾರಿಗೆ ಬರಬೇಕು. ಕುರಿಗಳ ನಡುವನ್ನು ಒತ್ತಿ ಕುರಿ ವ್ಯಾಪಾರ ಮಾಡುವುದನ್ನು ಬಿಟ್ಟು, ಕುರಿಗಳ ತೂಕದ ಆಧಾರದ ಮೇಲೆ ಬೆಲೆ ನಿರ್ಧಾರವಾಗಬೇಕು. ಮಧ್ಯಸ್ಥಗಾರರಿಂದ ಶೋಷಣೆ ಕಡಿಮೆ ಮಾಡಲು ಅಲೆಮಾರಿ ಕುರುಬರು ಅಲೆದಾಡುವ ಪ್ರದೇಶಗಳಲ್ಲಿ ಉತ್ತಮ ಮಾರುಕಟ್ಟೆ, ಸೌಲಭ್ಯ ಒದಗಿಸುವ ಸಲುವಾಗಿ ಹೊಸಪೇಟೆಯಲ್ಲಿ ಸುಸಜ್ಜಿತವಾದ ಕಸಾಯಿಖಾನೆಯನ್ನು ಸ್ಥಾಪಿಸಬೇಕು.

**ರೋಗ ನಿರೋಧಕ ಲಸಿಕೆ**

ಅಲೆಮಾರಿ ಕುರುಬರ ಬದುಕುಗಳನ್ನು ಕಾಡುತ್ತಿರುವ ದೊಡ್ಡರೋಗ, ಪಿ.ಪಿ.ಆರ್. ಮೈಲಿಬೇನೆ, ನೀಲಿನಾಲಿಗೆ, ಸಿಡುಬು, ಕಾಲು-ಬಾಯಿ ಬೇನೆ ಇತ್ಯಾದಿ ರೋಗಗಳ ನಿಯಂತ್ರಣ ಮಾಡುವ ಸಲುವಾಗಿ 'ಪಲ್ಸ್ ಪೋಲಿಯೋ ಅಭಿಯಾನ' ಮಾದರಿಯಂತೆ ಇವರ ಬದುಕುಗಳಿಗೆ ರೋಗ ನಿರೋಧಕ ಲಸಿಕೆ ಹಾಕುವ ಆಂದೋಲವನ್ನು ಸರ್ಕಾರ ಕೈಗೊಳ್ಳಲೇಬೇಕು. ರಾಜ್ಯದಲ್ಲಿರುವ ಸಮಸ್ತ ಕುರಿ-ಮೇಕೆಗಳ ಆರೋಗ್ಯ ರಕ್ಷಣೆಗೆ ಸರ್ಕಾರ ಜಂತುನಾಶಕ ಔಷಧಗಳನ್ನು ಸರಬರಾಜು ಮಾಡಬೇಕು.

**ಅಲೆಮಾರಿ ಕುರುಬರಿಗೆ 'ಜನಶ್ರೀ ವಿಮಾ' ಮತ್ತು ಕುರಿಗಳಿಗೆ 'ಸಮಗ್ರ ವಿಮಾ' ಯೋಜನೆಗಳು ಜಾರಿಗೊಳಿಸುವುದು**

ಅಕಾಲಿಕ ಮಳೆಗಾಲ ಮತ್ತು ಅನಿರ್ದಿಷ್ಟ ವರಮಾನದಿಂದಾಗಿ ತತ್ತರಿಸಿರುವ ಅಲೆಮಾರಿ ಕುರುಬರು, ಆಕಸ್ಮಿಕ ದುರಂತಗಳಿಗೆ ತುತ್ತಾದ ಸಂದರ್ಭಗಳಲ್ಲಿ ದುಡಿಯುವ ವ್ಯಕ್ತಿ ಇಲ್ಲದೆ ಕುಟುಂಬಗಳು ಬೀದಿ ಪಾಲಾಗುತ್ತವೆ. ಇಂತಹ ದುರಂತಮಯ ಸನ್ನಿವೇಶಗಳನ್ನು ತಡೆಗಟ್ಟಲು ಕುರಿಗಾರರಿಗೆ 'ಜನಶ್ರೀ' ವಿಮೆ ಯೋಜನೆಯನ್ನು ಜಾರಿಗೊಳಿಸುವುದು ಅವಶ್ಯವಿದೆ.

ಅತಿವೃಷ್ಟಿ, ಅನಾವೃಷ್ಟಿ ಮತ್ತು ಇತರೆ ಪ್ರಕೃತಿ ವಿಕೋಪಗಳಿಗೆ ತುತ್ತಾಗುವ ಕುರಿಗಳಿಗೆ ರಾಜ್ಯ ಮಟ್ಟದ ಒಂದು "ಸಮಗ್ರ ವಿಮಾ" ಯೋಜನೆಯನ್ನು ಸಂಪೂರ್ಣವಾಗಿ ರಾಜ್ಯಸರ್ಕಾರದಿಂದಲೇ ಜಾರಿಗೊಳಿಸುವುದು ಅವಶ್ಯಕವಾಗಿದೆ. ಏಕೆಂದರೆ ಅಲೆಮಾರಿ ಕುರುಬರು ಕ್ಷಣಾರ್ಧದಲ್ಲಿ ತನ್ನದೆನ್ನುವ ಎಲ್ಲವನ್ನು ಕಳೆದುಕೊಂಡು ಬಿಡುತ್ತಾರೆ. ಇದಕ್ಕೆ ಪರಿಹಾರ ಕಂಡುಕೊಳ್ಳುವ ಉದ್ದೇಶದಿಂದ ಜಮ್ಮು ಮತ್ತು ಕಾಶ್ಮೀರ ರಾಜ್ಯದ ಮಾದರಿಯಲ್ಲಿ "ಜನಶ್ರೀ ವಿಮಾ" ಯೋಜನೆಯನ್ನು ಇತ್ತೀಚಿಗೆ ರಾಜ್ಯ ಸರ್ಕಾರ ಆರಂಭಿಸಿದೆ. ಈ ವಿಮಾ ಸೌಲಭ್ಯವನ್ನು ನೈಸರ್ಗಿಕ ವಿಕೋಪದ ವೇಳೆ ಮರಣ ಹೊಂದುವ ಕುರಿಗಳಿಗೆ ಮಾತ್ರ ನೀಡಲಾಗಿದೆ. ಆದರೆ ವರ್ಷಗಟ್ಟಲೆ ಮನೆ, ಮಠಗಳನ್ನು ತೊರೆದು ಪ್ರಾಣವನ್ನು ಕೈಯಲ್ಲಿ ಹಿಡಿದು ಕುರಿಗಳೊಡನೆ ಅಲೆಯುವ ಅಲೆಮಾರಿ ಕುರುಬರನ್ನು ವಿಮಾ ಸೌಲಭ್ಯ ಪಡೆಯುವುದರಿಂದ ಅನರ್ಹಗೊಳಿಸಲಾಗಿದೆ. ಬಡತನದ ರೇಖೆ ಎಂಬ ಮಾನದಂಡ ಅಳವಡಿಸಿದ್ದರಿಂದ ನೂರರಿಂದ ಐದು ನೂರು ಕುರಿಗಳನ್ನು ಹೊಂದಿರುವ ಅಲೆಮಾರಿ ಕುರುಬರು ಈ ಸೌಲಭ್ಯದಿಂದ ವಂಚಿತರಾಗುತ್ತಾರೆ. ಪ್ರತಿ ಕುರಿ ಕನಿಷ್ಟ ೧,೫೦೦ ರೂಪಾಯಿ ಬೆಲೆ ಇರುವುದರಿಂದ ನೂರಿನ್ನೂರು ಕುರಿಗಳ ಒಡೆಯರ ಆಸ್ತಿಯ ಮೌಲ್ಯ ಲಕ್ಷ ರೂಪಾಯಿ ದಾಟುತ್ತದೆ. ಅಂತಹ ಅಲೆಮಾರಿ ಕುರುಬರು ಬಡತನದ ರೇಖೆಗಿಂತ ಕೆಳಗಿನ ವರ್ಗ ಸೇರದಿರುವುದರಿಂದ ವಿಮಾ ಸೌಲಭ್ಯದ ವ್ಯಾಪ್ತಿಗೆ ಬರುವುದಿಲ್ಲ. ವಿಚಿತ್ರ ಕಾಯಿಲೆ, ನೈಸರ್ಗಿಕ ವಿಕೋಪ, ಸಿಡಿಲಿನ ದಾಳಿಗೆ ಒಳಗಾಗಿ ಎಲ್ಲಾ ಕುರಿಗಳು ಸತ್ತು ಹೋದರೆ ಕುರಿಗಾರರು ಬೀದಿಪಾಲಾಗುವ ಸಾಧ್ಯತೆಗಳು ಇರುವುದರಿಂದ ಜಾಸ್ತಿ ಕುರಿಗಳನ್ನು ಹೊಂದಿರುವ ಅಲೆಮಾರಿ ಕುರುಬರನ್ನು ಈ ಯೋಜನೆ ವ್ಯಾಪ್ತಿಗೆ ಒಳಪಡಿಸಬೇಕು. ನೈಸರ್ಗಿಕ ವಿಕೋಪಗಳಿಂದ ಜೀವ

ಕಳೆದುಕೊಳ್ಳುವ ಇವರಿಗೆ ೭೫ ಸಾವಿರದಿಂದ ಒಂದು ಲಕ್ಷದವರೆಗೆ ವಿಮಾ ಸೌಲಭ್ಯ ನೀಡಬೇಕು.

**ಅಲೆಮಾರಿ ಕುರುಬರ ಮಹಿಳೆಯರಿಗೆ ಸ್ತ್ರೀ-ಶಕ್ತಿ ಯೋಜನೆ ಅಡಿ ಪ್ರಾಮುಖ್ಯತೆ**

ಅಬಲೆಯಾದ ಮಹಿಳೆಯನ್ನು ಸಬಲೆಯನ್ನಾಗಿಸುವ ದೃಷ್ಟಿಯಿಂದ ಸರ್ಕಾರ ಹಲವಾರು ಸ್ತ್ರೀಶಕ್ತಿ ಯೋಜನೆಗಳನ್ನು ಜಾರಿಗೆ ತಂದಿದೆ. ಅದೇ ಮಾದರಿಯಲ್ಲಿ ಅಲೆಮಾರಿ ಕುರುಬರ ಮಹಿಳೆಯರಿಗೆ ಸೂಕ್ತವಾದ ಕುರಿ ಸಂಗೋಪನೆ ಯೋಜನೆಗಳನ್ನು ರೂಪಿಸಿ ಜಾರಿಗೊಳಿಸ ಬೇಕು. ಆಗ ಮಾತ್ರ ಇವರ ಕುಟುಂಬದ ಆರ್ಥಿಕ ಮಟ್ಟವನ್ನು ಸುಧಾರಿಸಲು ಸಾಧ್ಯವಾಗುತ್ತದೆ.

**ಕಂಬಳಿ ಉದ್ಯಮಕ್ಕೆ ಕಾಯಕಲ್ಪ**

ಪರಂಪರಾಗತ ಪದ್ಧತಿಗಳಲ್ಲಿಯೇ ಕಂಬಳಿ ನೇಯ್ಗೆ ಮಾಡುತ್ತಿರುವುದರಿಂದ ಆಧುನಿಕ ವಸ್ತುಗಳ ಪೈಪೋಟಿಯಿಂದ ಕಂಬಳಿ ಉದ್ಯಮ ನೆಲಕಚ್ಚಿದೆ. ಬದುಕಿಗೆ ಬದಲಿ ಆಸರೆ ಇಲ್ಲದೆ ತತ್ತರಿಸಿ ಆತ್ಮಹತ್ಯೆಯ ದಾರಿ ತುಳಿಯುತ್ತಿದ್ದಾರೆ. ಆದ್ದರಿಂದ ಕಂಬಳಿ ಉದ್ಯಮಕ್ಕೆ ಕಾಯಕಲ್ಪ ನೀಡುವುದು ತಕ್ಷಣದ ಅವಶ್ಯಕತೆಯಾಗಿದೆ. ಇದಕ್ಕಾಗಿ ಸರ್ಕಾರದ ಅಧೀನದ ವಿದ್ಯಾರ್ಥಿ ನಿಲಯಗಳು, ಜೈಲುಗಳು, ರಿಮೆಂಡ್ ಹೋಮ್‌ಗಳು, ಅನಾಥ ಆಶ್ರಮಗಳು ಮತ್ತು ಇತರೆ ಯಾವುದೇ ಹೊದಿಕೆಗಳನ್ನು ಖರೀದಿಸುವ ಸಂಸ್ಥೆಗಳಿಗೆ ಕಂಬಳಿಗಳನ್ನು ಖರೀದಿಸುವುದನ್ನು ಕಡ್ಡಾಯಗೊಳಿಸಿ ಆದೇಶಿಸಬೇಕು. ಈ ರೀತಿ ಆದೇಶ ಮಾಡುವುದರಿಂದ ಕುರಿ ಉಣ್ಣೆಗೆ ಹೆಚ್ಚಿನ ಬೇಡಿಕೆ ಬರುವುದರಿಂದ ಅಲೆಮಾರಿ ಕುರುಬರ ಆರ್ಥಿಕ ಪರಿಸ್ಥಿತಿ ಸುಧಾರಿಸುವುದು.

**ಕುರಿ ಸಾಕಣಿಕೆ ಫಾರ್ಮ್ ಸ್ಥಾಪಿಸಬೇಕು**

ಇವರು ಹೆಚ್ಚು ಅಲೆದಾಡುವ ಹತ್ತಿರದ ಪ್ರದೇಶಗಳಲ್ಲಿ ಕುರಿಸಾಗಣಿಕೆಯ ಫಾರ್ಮ್ ಗಳನ್ನು ಸ್ಥಾಪಿಸಬೇಕು ಇದರಿಂದ ಅಲೆಮಾರಿ ಕುರುಬರಿಗೆ ಅನುಕೂಲವಾಗುತ್ತದೆ. ಇವರು ತಮ್ಮ ಕುರಿಗಳಿಗೆ ಔಷಧ ಮತ್ತು ಕುಟುಂಬದ ಸಂತೆ ತರಲು ಪಟ್ಟಣಗಳಿಗೆ ಆಗಾಗ್ಗೆ ಹೋದಾಗ ಕುರಿ ಸಾಕಾಣಿಕೆ ಫಾರ್ಮ್‌ಗೆ ಭೇಟಿ ನೀಡಲು ಅನುಕೂಲವಾಗುತ್ತದೆ. ಫಾರ್ಮ್‌ನಲ್ಲಿ ಯಾವ ಜಾತಿಯ ಕುರಿಗಳಿವೆ. ಯಾವುದನ್ನು ಸಾಕಬೇಕು, ಯಾವುದನ್ನು ಸಾಕಿದರೆ ಲಾಭದಾಯಕ ಎನ್ನುವ ಮಾಹಿತಿಗಳು ದೊರೆಯುತ್ತವೆ, ಪ್ರತ್ಯಕ್ಷವಾಗಿ ಗಮನಿಸಲು ಸಾಧ್ಯವಾಗುತ್ತದೆ.

**ಕುರಿ ಸಾಕಣೆ ಸಂಶೋಧನಾ ಕೇಂದ್ರ ಸ್ಥಾಪನೆ**

ಕರ್ನಾಟಕ ರಾಜ್ಯದಲ್ಲಿ ಕುರಿ ಸಾಕಾಣಿಕೆಗೆ ವಿಫುಲ ಅವಕಾಶಗಳಿದ್ದು ಸಂಶೋಧನಾ ಕೇಂದ್ರ ಸ್ಥಾಪನೆಯ ಅವಶ್ಯಕತೆಯಿದೆ. ಈಗಾಗಲೇ ದೇಶದಲ್ಲಿಯೇ ಉತ್ತಮವಾಗಿ ಕಾರ್ಯನಿರ್ವಹಿಸುತ್ತಿರುವ ಜೈಪುರದ 'ಕುರಿ ಸಾಕಾಣಿಕೆ ಸಂಶೋಧನಾ ಕೇಂದ್ರ'ದ ಮಾದರಿಯಲ್ಲಿಯೇ ಕರ್ನಾಟಕ ರಾಜ್ಯದ ಬಳ್ಳಾರಿ ಜಿಲ್ಲೆಯ ಹೊಸಪೇಟೆಯಲ್ಲಿ ಕುರಿ ಸಾಕಾಣಿಕೆ ಸಂಶೋಧನಾ ಕೇಂದ್ರ ಸ್ಥಾಪನೆಯಾಗಬೇಕು. ಇದರಿಂದ ಅಲೆಮಾರಿ ಕುರುಬರು ವೈಜ್ಞಾನಿಕವಾಗಿ ಕುರಿಸಾಕಾಣಿಕೆ ವಿಧಾನ ಕಂಡುಕೊಳ್ಳಲು ಸಾಧ್ಯವಾಗುತ್ತದೆ.

ಅರಣ್ಯದೊಳಗೆ ಕುರಿ ಮೇಯಿಸಲು ಅವಕಾಶ

ಕುರಿಗಳು ಮುಖ ಎತ್ತಿ ಮೇಯುವುದಿಲ್ಲ. ಕುರಿಹಿಂಡು ಮತ್ತು ಮೇಕೆ ಹಿಂಡುಗಳನ್ನು ಭಾಗ ಮಾಡಿ ಮೇಕೆ ಹಿಂಡು ಹೊರತು ಪಡಿಸಿದ ಕುರಿಹಿಂಡನ್ನು ಮಾತ್ರ ಅರಣ್ಯದೊಳಗೆ ಮೇಯಿಸಲು ಅವಕಾಶ ನೀಡಬೇಕು. ಇದು ಸಾಮಾನ್ಯ ಜ್ಞಾನವಾಗಿದ್ದು ಅರಣ್ಯ ಅಧಿಕಾರಿಗಳು ಪ್ರಾಯೋಗಿಕವಾಗಿ ತಿಳಿದುಕೊಂಡು ಮಳೆಗಾಲದ ಅವಧಿಯಲ್ಲಿ ಕುರಿ ಮೇಯಿಸಲು ಅವಕಾಶ ನೀಡಬೇಕು.

ಪಡಿತರ ಚೀಟಿ ನೀಡಬೇಕು

ಸರ್ಕಾರವು ಅಲೆಮಾರಿ ಕುರುಬರಿಗಾಗಿ ವಿಶೇಷ ಪಡಿತರ ಚೀಟಿ ನೀಡಬೇಕು. ಆ ಚೀಟಿಯಿಂದ ಅವರು ಅಲೆದಾಡುವ ಯಾವುದೇ ಗ್ರಾಮಗಳಲ್ಲಿಯ ನ್ಯಾಯಬೆಲೆ ಅಂಗಡಿಗಳಲ್ಲಿ ದೊರೆಯುವ ವಸ್ತುಗಳನ್ನು ಕೊಳ್ಳಲು ಅವಕಾಶ ಮಾಡಿಕೊಡಬೇಕು.

ಸಮಾಜ ಎಂಬುದು ವಿಶಾಲತೆಯ ದೃಷ್ಟಿಯಿಂದ ಕೈಗೆಟಕದಿರುವ ವ್ಯಾಪ್ತಿಯನ್ನು ಹೊಂದಿದೆ. ವಿಜ್ಞಾನವು ನಿಗೂಢ ವಿಸ್ಮಯಗಳ ತವರೂರಾಗಿದೆ. ಈ ಎರಡೂ ವಿಷಯಗಳು ಮನುಷ್ಯನನ್ನು ಹೊರತುಪಡಿಸಿ ನಿಲ್ಲುವುದಿಲ್ಲ. ಮಾನವನ ಬೌದ್ಧಿಕ ಶಕ್ತಿಯ ಫಲವಾಗಿ ಜಗತ್ತಿನಲ್ಲಿ ಎಷ್ಟೋ ಹೊಸ ಹೊಸ ಆವಿಷ್ಕಾರಗಳನ್ನು ಮಾಡಿದರೂ ಕೆಲವೊಂದು ಸಮುದಾಯಗಳ ಮೂಲ ವೃತ್ತಿಯನ್ನು ಬದಲಾಯಿಸಿಕೊಳ್ಳಲು ಸಾಧ್ಯವಾಗಿಲ್ಲ. ಅಂತಹ ಸಮುದಾಯಗಳಲ್ಲೊಂದಾದ ಅಲೆಮಾರಿ ಕುರುಬರು ತಮ್ಮ ವೃತ್ತಿ ಜೀವನವನ್ನು ಬದಲಾಯಿಸಿ ಕೊಳ್ಳದ, ಬದಲಾಯಿಸಿಕೊಂಡರೆ ಜೀವನಕ್ಕೆ ಬೇರೆ ಗತಿ ಇಲ್ಲದ ಸ್ಥಿತಿಯಲ್ಲಿ ರುವರು. ನೈಸರ್ಗಿಕ ವಿಜ್ಞಾನದೊಂದಿಗೆ ಹಾಗೂ ಸಮಾಜದ ವಿವಿಧ ಆಚರಣೆಗಳಿಗೆ ಹೊಂದಿ ಕೊಂಡು ಇಂದಿಗೂ ತಾವು ಬದುಕುವ ಪ್ರಾಣಿ ಸಂತತಿಗಳನ್ನು ಅಭಿವೃದ್ಧಿಪಡಿಸುತ್ತಾ ಮಾನವನ ಆಹಾರ ಸರಪಳಿಗೆ ಕೊಂಡಿ ಯಾಗಿದ್ದಾರೆ. ಅವರ ನಿತ್ಯದ ಬದುಕು, ಕೌಟುಂಬಿಕ ಪರಿಸರ, ದುಡಿಮೆಯ ಫಲ, ಸಾಧು ಪ್ರಾಣಿಗಳಿಗೆ (ಕುರಿ-ಮೇಕೆ) ವರವಾದರೆ, ಮನುಷ್ಯ ನಿರ್ಮಿತ ಮೂಲ ಸೌಕರ್ಯಗಳಿಂದ ದೂರವಾಗಿದ್ದಾನೆ.

ಪ್ರಸ್ತುತ ಕೃತಿಯ ಹಾದಿ ಅಲೆಮಾರಿ ಕುರುಬರಂತೆ ಅಲೆದಾಡುತ್ತಾ ಸಾಗಿದಾಗ ಜನವಸತಿ ಪ್ರದೇಶಗಳಲ್ಲಿ ಜೀವಿಸುವ ಅಕ್ಷರಸ್ಥ, ವಿದ್ಯಾವಂತ, ಜ್ಞಾನವಂತ ಮನುಷ್ಯರ ಸೌಲಭ್ಯ ಗಳಿಲ್ಲವೆಂದು ಗೋಗರಿಯುವರು. ಯಾವುದೇ ನಿರ್ದಿಷ್ಟ ಸ್ಥಳದಲ್ಲಿ ವಾಸಿಸದೆ, ಅಕ್ಷರ ಲೋಕ ಕಾಣದ ಇವರ ಬದುಕಿನ ಸಮಸ್ಯೆಗಳು ಅನಂತವಾಗಿವೆ. ಈ ಸಮಸ್ಯೆಗಳಿಗೆ ಸೂಚಿಸುವ ಪರಿಹಾರೋಪಾಯಗಳು ಕೂಡ ಅಷ್ಟೇ ಜಟಿಲವಾಗಿವೆ. ಅದರೂ ಸಹ ಸಮಸ್ಯೆಗಳ ನಡುವೆಯೂ ಪರರದನ್ನು ಬಯಸದೆ, ವೃತ್ತಿ ಜೀವನವನ್ನು ಬಿಡದೆ, ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ಉಳಿಸಿಕೊಂಡು ಪರಿಸರ ಸ್ನೇಹಿಯಾಗಿರುವಂಥ "ಅಲೆಮಾರಿ ಕುರುಬ" ಸಮುದಾಯದ ಕೃತಿ ರಚನೆ ಮಾಡಲಾಗಿದೆ.

## ಅಂಕಿಅಂಶಗಳು: ೧. ಅಲೆಮಾರಿ ಕುರುಬ ನೆಲೆಗಳವಾರು ಮತ್ತು ಜನಸಂಖ್ಯೆ

| ಜಿಲ್ಲೆ | ತಾಲ್ಲೂಕು | ಗ್ರಾಮದ ಹೆಸರು | ಕುಟುಂಬ | ಜನಸಂಖ್ಯೆ | | |
|---|---|---|---|---|---|---|
| | | | | ಗಂಡು | ಹೆಣ್ಣು | ಒಟ್ಟು |
| I | II | III | IV | V | VI | VII |
| ಬೆಳಗಾವಿ | ಅಥಣಿ | ಮುರಗುಂಡಿ | ೧ | ೪ | ೩ | ೭ |
| | ಖಾನಾಪುರ | | ೧೧ | ೩೪ | ೨೯ | ೬೩ |
| | | ಕಕ್ಕೇರಿ | ೧ | ೫ | ೧ | ೬ |
| | | ಲಕ್ಕೋಸಿ | ೧ | ೩ | ೨ | ೫ |
| | | ಜೋಡುಕುರಲಿ | ೬ | ೧೬ | ೨೦ | ೩೬ |
| | | ಸದಲಗ | ೧ | ೪ | ೨ | ೬ |
| | | ಹಿಂದೋಳಿ | ೧ | ೫ | ೪ | ೯ |
| | ಗೋಕಾಕ್ | | ೪ | ೧೧ | ೧೪ | ೨೫ |
| | | ಅಂಕಲಗಿ | ೧ | ೨ | ೪ | ೬ |
| | | ಗೋಸಬಾಳ್ | ೧ | ೩ | ೪ | ೭ |
| | | ತುಕ್ಕನಟ್ಟಿ | ೧ | ೩ | ೪ | ೭ |
| | | ಯಾದವಾಡ | ೧ | ೩ | ೨ | ೫ |
| | ಚಿಕ್ಕೋಡಿ | | ೩೦೬ | ೧೦೦೩ | ೯೦೨ | ೧೯೦೫ |
| | | ಅಕ್ಕೋಳ | ೨೪ | ೭೨ | ೬೪ | ೧೩೬ |
| | | ಅಡಿ | ೩ | ೬ | ೧೦ | ೧೬ |
| | | ಅಪ್ಪಾಚಿವಾಡಿ | ೫ | ೨೩ | ೧೧ | ೩೪ |
| | | ಅಂಬಲಚೇರಿ | ೫ | ೧೬ | ೧೨ | ೨೮ |
| | | ಎಕ್ಸಂಬ | ೩ | ೭ | ೧೧ | ೧೮ |
| | | ಕಡಕಲಾಟ | ೪೦ | ೧೧೩ | ೧೧೩ | ೨೨೬ |
| | | ಗಳತಗಿ | ೩ | ೯ | ೮ | ೧೭ |
| | | ಚಿಕ್ಕಲವಾಡ | ೨ | ೫ | ೫ | ೧೦ |
| | | ಜತ್ರಾಟ್ | ೮ | ೨೫ | ೧೯ | ೪೪ |
| | | ಜೋಡುಕುರ್ಲಿ | ೯ | ೩೧ | ೨೯ | ೬೦ |

| I | II | III | IV | V | VI | VII |
|---|---|---|---|---|---|---|
| | | ನಾಗರಮುನೋಳಿ | ೩ | ೧೨ | ೮ | ೨೦ |
| | | ನವಲಿಹಾಳ್ | ೧೫ | ೫೩ | ೫೦ | ೧೦೩ |
| | | ನಾಯಿಂಗಲಾಜ್ | ೧೧ | ೪೩ | ೩೩ | ೭೬ |
| | | ನಿಪ್ಪಾಣಿ | ೬ | ೧೬ | ೧೭ | ೩೩ |
| | | ನೇಜ್ | ೪ | ೧೫ | ೧೩ | ೨೮ |
| | | ಬೇನಾಡಿ | ೫ | ೧೧ | ೧೪ | ೨೫ |
| | | ಬೋರಿಜ್ | ೪ | ೧೨ | ೧೧ | ೨೩ |
| | | ಲಟ್ಟೆ | ೪ | ೧೫ | ೧೨ | ೨೭ |
| | | ವಾಳ್ಕಿ | ೬ | ೧೯ | ೨೧ | ೪೦ |
| | | ಶಿರಗಾಂ | ೨ | ೫ | ೫ | ೧೦ |
| | | ಹೀರೆಕೊಡಿ | ೩ | ೧೨ | ೫ | ೧೭ |
| | | ಹುನ್ನರಗಿ | ೬ | ೧೯ | ೧೫ | ೩೪ |
| | | ಅಪ್ಪನಹಟ್ಟಿ | ೧ | ೨ | ೧ | ೩ |
| | | ಕೋಗನಹಳ್ಳಿ | ೧ | ೩ | ೨ | ೫ |
| | | ನಣದಿಗಿ | ೧ | ೨ | ೪ | ೬ |
| | | ಪ್ಯಟವಾಡಿ | ೧ | ೪ | ೫ | ೯ |
| | | ಬೆಡಕಿಹಾಳ್ | ೧ | ೩ | ೨ | ೫ |
| | | ಮಾಳಪ್ಪುರ | ೧ | ೩ | ೨ | ೫ |
| | | ಸೆಂಡೂರ್ | ೧ | ೨ | ೩ | ೫ |
| | | ಸೌಂದಲಗ | ೧೩೪ | ೪೪೫ | ೩೯೭ | ೮೪೨ |
| | ಬೆಳಗಾವಿ | | ೫೧ | ೧೨೭ | ೧೧೫ | ೨೪೨ |
| | | ಕಡೋಲಿ | ೪೯ | ೧೨೩ | ೧೦೮ | ೨೩೧ |
| | | ಯಳ್ಳೂರ್ | ೧ | ೨ | ೩ | ೫ |
| | | ರಾಂಪುರ | ೧ | ೨ | ೪ | ೬ |
| | ರಾಮದುರ್ಗ | | ೨ | ೬ | ೫ | ೧೧ |
| | | ಮುದೇನೂರು | ೧ | ೪ | ೨ | ೬ |
| | | ಹೊಸಕೇರಿ | ೧ | ೨ | ೩ | ೫ |

| I | II | III | IV | V | VI | VII |
|---|---|---|---|---|---|---|
| | ರಾಯಬಾಗ್ | | ೫ | ೧೫ | ೧೬ | ೩೧ |
| | | ಚಿಂಚಲಿ | ೪ | ೧೩ | ೧೪ | ೨೭ |
| | | ಇಡಕಲ್ಲು | ೧ | ೨ | ೨ | ೪ |
| | ಸವದತ್ತಿ | ಗೋರಗುದ್ದಿ | ೧ | ೨ | ೩ | ೫ |
| | ಹುಕ್ಕೇರಿ | | ೪ | ೧೦ | ೧೧ | ೨೧ |
| | | ಬವಕುಂದ್ರಿ | ೧ | ೩ | ೩ | ೬ |
| | | ಬೆಳ್ವಾವಿ | ೩ | ೭ | ೮ | ೧೫ |
| ಒಟ್ಟಾರೆ ಜಿಲ್ಲಾವಾರು | | | ೩೮೬ | ೧೨೧೨ | ೧೦೯೮ | ೨೩೧೦ |

## ಕ್ಷೇತ್ರಕಾರ್ಯದಲ್ಲಿ ಸಂದರ್ಶನ ನೀಡಿದ ಮಾಹಿತಿದಾರರ ವಿವರಗಳು

| ಹೆಸರು ಮತ್ತು ವಿಳಾಸ | ವಯಸ್ಸು | ಬೆಡಗು | ವೃತ್ತಿ |
|---|---|---|---|
| **ಮಾಯಪ್ಪ ತಂದೆ ಲಕ್ಷ್ಮಣ** | ೪೦ | ಕರಗಾರ | ಕುರಿಗಾರಿಕೆ |
| ಕುರ್ಲಿ, ಚಿಕ್ಕೋಡಿ ತಾ. ಬೆಳಗಾವಿ ಜಿ. | | | |
| ದೂ. ೯೪೪೮೬೩೯೫೭ | | | |
| **ಸಿದ್ರಾಮಪ್ಪ ದತ್ತಪ್ಪ ಪೂಜಾರಿ** | ೪೮ | ಕರಗಾರ | ಕುರಿಗಾರಿಕೆ |
| ನಣದಿಗಿ | | | |
| ಚಿಕ್ಕೋಡಿ ತಾ. ಬೆಳಗಾವಿ ಜಿಲ್ಲೆ. | | | |
| ದೂ. ೯೭೪೨೧೧೦೪೦೬ | | | |
| **ಮಾಳಪ್ಪ ಅಪ್ಪಣ್ಣ ಕಾವಳೆ** | ೪೮ | ಕಾವಳೆ | ಕುರಿಗಾರಿಕೆ |
| ಹೊಸಕೇರಿ | | | |
| ರಾಮದುರ್ಗ ತಾ. ಬೆಳಗಾವಿ ಜಿಲ್ಲೆ. | | | |
| **ಮಾಯಪ್ಪ ತಂದೆ ಅಪ್ಪಣ್ಣ** | ೪೨ | ಕೊರಲ್ಲೇರು | ಕುರಿಗಾರಿಕೆ |
| ಹುಲ್ಲೋಳಿ | | | |
| ಚಿಕ್ಕೋಡಿ ತಾ. ಬೆಳಗಾವಿ ಜಿಲ್ಲೆ. | | | |
| ದೂ. ೯೩೪೨೫೧೨೫೪೧ | | | |
| **ಸೂರಪ್ಪ ವಿಠಪ್ಪ ಕೊಳಕರ್** | ೫೦ | ಕೊಳಕರ್ | ಕುರಿಗಾರಿಕೆ |
| ಕೋಗನಳ್ಳಿ | | | |
| ಚಿಕ್ಕೋಡಿ ತಾ. ಬೆಳಗಾವಿ ಜಿಲ್ಲೆ. | | | |
| **ಲಿಂಗಪ್ಪ ಕೆಂಚಪ್ಪ ಸಾವಿರಕುರಿ** | ೬೦ | ಕೌಲಪುರೆ | ಕುರಿಗಾರಿಕೆ |
| ನವಲಿಹಾಳ್ | | | |
| ಚಿಕ್ಕೋಡಿ ತಾ. ಬೆಳಗಾವಿ ಜಿಲ್ಲೆ. | | | |
| ದೂ. ೯೪೮೦೨೭೬೩೧೩ | | | |
| **ಶಾರದಮ್ಮ ಗಂಡ ಲಿಂಗಪ್ಪ ಸಾವಿರಕುರಿ** | ೫೫ | ಕೌಲಪುರೆ | ಕುರಿಗಾರಿಕೆ |
| ನವಲಿಹಾಳ್ | | | |
| ಚಿಕ್ಕೋಡಿ ತಾ. ಬೆಳಗಾವಿ ಜಿಲ್ಲೆ. | | | |
| ದೂ. ೯೪೮೦೨೭೬೩೧೩ | | | |

| | | | |
|---|---|---|---|
| ಸಹದೇವಪ್ಪ ಸತ್ಯಪ್ಪ<br>ಲಕ್ಕೋಬಿ<br>ಖಾನಾಪುರ ತಾ. ಬೆಳಗಾವಿ ಜಿಲ್ಲೆ. | ೪೮ | ಕೌಲಪುರೆ | ಕುರಿಗಾರಿಕೆ |
| ಹೂವಣ್ಣ ಸತ್ಯಪ್ಪ ಸಾವಿರ ಕುರಿ<br>ನವಲಿಹಾಳ್<br>ಚಿಕ್ಕೋಡಿ ತಾ. ಬೆಳಗಾವಿ ಜಿಲ್ಲೆ. | ೪೫ | ಕೌಲಪುರೆ | ಕುರಿಗಾರಿಕೆ |
| ಖಾನಪ್ಪ ಬೀರಪ್ಪ ದೇವರಸಿ<br>ನಾಯಿಂಗಳಾಜ್<br>ಚಿಕ್ಕೋಡಿ ತಾ. ಬೆಳಗಾವಿ ಜಿಲ್ಲೆ. | ೫೫ | ಗವಡೆ | ಕುರಿಗಾರಿಕೆ |
| ಭೀರಪ್ಪ ಸತ್ಯಪ್ಪ ಗವಡೆ<br>ನೇಜ್<br>ಚಿಕ್ಕೋಡಿ ತಾ. ಬೆಳಗಾವಿ ಜಿಲ್ಲೆ. | ೩೪ | ಗವಡೆ | ಕುರಿಗಾರಿಕೆ |
| ಸಿದ್ದಪ್ಪ ಮಾರುತಿ ಪೂಜಾರಿ<br>ನಾಗರಮನೌಳಿ<br>ಚಿಕ್ಕೋಡಿ ತಾ. ಬೆಳಗಾವಿ ಜಿಲ್ಲೆ.<br>ದೂ. ೯೪೪೯೨೩೧೦೩೯ | ೪೦ | ಗವಡೆ | ಕುರಿಗಾರಿಕೆ |
| ಮಾಲ್ಲಪ್ಪ ತಂದೆ ಅವಗೋಡೆಪ್ಪ<br>ಕಡಕಲಾಟ<br>ಚಿಕ್ಕೋಡಿ ತಾ. ಬೆಳಗಾವಿ ಜಿಲ್ಲೆ. | ೫೫ | ಗೋಸರವಾಡೆ | ಕುರಿಗಾರಿಕೆ |
| ಸಿದ್ದಪ್ಪ ಅಪ್ಪಣ್ಣಾ ಪೂಜಾರಿ<br>ಸಿಂದೋಳಿ<br>ಖಾನಾಪುರ ತಾ. ಬೆಳಗಾವಿ ಜಿಲ್ಲೆ. | ೫೪ | ಗೋಸಂಡೆ | ಕುರಿಗಾರಿಕೆ |
| ಚೆನ್ನಬಸಪ್ಪ ತಂದೆ ಸಿದ್ದಪ್ಪ<br>ಕುಶಲಾಪುರ<br>ಶಿರಹಟ್ಟಿ ತಾ. ಗದಗ ಜಿಲ್ಲೆ<br>ದೂ. ೯೪೮೦೨೦೮೫೬೪ | ೩೫ | ಗೌಡ್ನರು | ಕುರಿಗಾರಿಕೆ<br>(ಆಳು ಮಗ) |
| ಮಾಳಪ್ಪ ವಿಠ್ಠಪ್ಪ ಡೋಣೆ<br>ಬದಕುಂದ್ರಿ<br>ಹುಕ್ಕೇರಿ ತಾ. ಬೆಳಗಾವಿ ಜಿಲ್ಲೆ. | ೪೮ | ಡೋಣೆ | ಕುರಿಗಾರಿಕೆ |
| ಶಾಂತಮ್ಮ ಗಂಡ ಅಪ್ಪಣ್ಣ<br>ಕುರ್ಲಿ, ಚಿಕ್ಕೋಡಿ ತಾ. ಬೆಳಗಾವಿ ಜಿಲ್ಲೆ. | ೫೦ | ದಿವಟೆ | ಕುರಿಗಾರಿಕೆ |

| | | | |
|---|---|---|---|
| ಬೀರಪ್ಪ ಭರಮ ಅಂಚಿನಮನೆ<br>ಕಡೋಲಿ<br>ಬೆಳಗಾವಿ ತಾ. ಜಿಲ್ಲೆ, | ೨೮ | ನರಾಟೆ | ಕುರಿಗಾರಿಕೆ |
| ಮಾಯಪ್ಪ ಬೀರಪ್ಪ ಹೆಗಡೆ<br>ನವಲಿಹಾಳ್<br>ಚಿಕ್ಕೋಡಿ ತಾ. ಬೆಳಗಾವಿ ಜಿಲ್ಲೆ.<br>ದೂ. ೯೪೪೯೨೦೪೮೭೦ | ೪೨ | ನರಾಟೆ | ಕುರಿಗಾರಿಕೆ |
| ವಾಸಪ್ಪ ಬೀರಪ್ಪ ನರಾಟೆ<br>ನಾಯಿಂಗಳಾಜ್<br>ಚಿಕ್ಕೋಡಿ ತಾ. ಬೆಳಗಾವಿ ಜಿಲ್ಲೆ. | ೪೭ | ನರಾಟೆ | ಕುರಿಗಾರಿಕೆ |
| ಅಣ್ಣಾಪ್ಪ ತಂದೆ ಸತ್ಯಪ್ಪ ಪೂಜಾರಿ<br>ಅಪ್ಪನಹಟ್ಟಿ<br>ಚಿಕ್ಕೋಡಿ ತಾ. ಬೆಳಗಾವಿ ಜಿಲ್ಲೆ.<br>ದೂ. ೯೪೪೮೬೩೯೯೩೭ | ೫೦ | ಬತ್ತೇ | ಕುರಿಗಾರಿಕೆ |
| ಮಾಯಪ್ಪ ಬೀರಪ್ಪ ಹೆಗಡೆ<br>ನವಲಿಹಾಳ್<br>ಚಿಕ್ಕೋಡಿ ತಾ. ಬೆಳಗಾವಿ ಜಿಲ್ಲೆ.<br>ದೂ. ೯೪೪೮೭೨೦೨೦೯ | ೪೫ | ಬತ್ತೇ | ಕುರಿಗಾರಿಕೆ |
| ಅಪ್ಪಣ್ಣಾ ಕಾಮಣ್ಣಾ ಪೂಜಾರಿ<br>ಸೌಂದಲಗ<br>ಚಿಕ್ಕೋಡಿ ತಾ. ಬೆಳಗಾವಿ ಜಿಲ್ಲೆ.<br>ದೂ. ೯೮೪೫೪೩೧೧೫೧ | ೫೦ | ಬನ್ನೆ | ಕುರಿಗಾರಿಕೆ |
| ಖಾನಪ್ಪ ಭೀಮಪ್ಪ ಪೂಜಾರಿ<br>ಕಡಕಲಾಟ<br>ಚಿಕ್ಕೋಡಿ ತಾ. ಬೆಳಗಾವಿ ಜಿಲ್ಲೆ.<br>ದೂ. ೯೪೪೮೮೭೨೪೭೭ | ೫೫ | ಬನ್ನೇ | ಕುರಿಗಾರಿಕೆ |
| ನಸೀಮಪ್ಪ ಗಣಪತಿ ಮಾಯಣ್ಣನವರ್<br>ಅಕ್ಕೋಳ<br>ಚಿಕ್ಕೋಡಿ ತಾ. ಬೆಳಗಾವಿ ಜಿಲ್ಲೆ.<br>ದೂ. ೯೪೮೦೨೦೮೫೭೪ | ೩೮ | ಬನ್ನೇ | ಕುರಿಗಾರಿಕೆ |

| | | | |
|---|---|---|---|
| ಬೀಮಣ್ಣಾ ಸತ್ಯಪ್ಪ ಬೊರಗೊಂಡೆ<br>ಸೌಂದಲಗ<br>ಚಿಕ್ಕೋಡಿ ತಾ. ಬೆಳಗಾವಿ ಜಿಲ್ಲೆ.<br>ದೂ. ೯೪೪೮೬೪೯೬೦೮ | ೩೦ | ಬನ್ನೇ | ಕುರಿಗಾರಿಕೆ |
| ಮಲಕರಿ ತಂದೆ ದತ್ತಪ್ಪ ಪೂಜಾರಿ<br>ಯಕ್ಸಂಬ<br>ಚಿಕ್ಕೋಡಿ ತಾ. ಬೆಳಗಾವಿ ಜಿಲ್ಲೆ. | ೩೫ | ಬನ್ನೇ | ಬೀರದೇವರ<br>ಗುಡಿಪೂಜಾರಿ |
| ರಾಯಪ್ಪ ತಂದೆ ಸತ್ಯಪ್ಪ ಪೂಜಾರಿ<br>ಅಪ್ಪಾಚಿವಾಡಿ<br>ಚಿಕ್ಕೋಡಿ ತಾ. ಬೆಳಗಾವಿ ಜಿಲ್ಲೆ. | ೨೩ | ಬನ್ನೇ | ಕೃಷಿ |
| ಲಕ್ಷ್ಮಣ ಸತ್ಯಪ್ಪ ದಿವಟಿ<br>ಕುರ್ಲಿ<br>ಚಿಕ್ಕೋಡಿ ತಾ. ಬೆಳಗಾವಿ ಜಿಲ್ಲೆ.<br>ದೂ. ೯೪೪೮೬೯೧೩೬೪ | ೪೬ | ಬನ್ನೇ | ಕುರಿಗಾರಿಕೆ |
| ವಾಸಪ್ಪ ರಾಮಪ್ಪ ಕೋಡ<br>ಕಡಕಲಾಟ<br>ಚಿಕ್ಕೋಡಿ ತಾ. ಬೆಳಗಾವಿ ಜಿಲ್ಲೆ.<br>ದೂ. ೯೪೪೯೨೨೮೩೧೨ | ೩೦ | ಬನ್ನೇ | ಕುರಿಗಾರಿಕೆ |
| ವಿಠ್ಠಪ್ಪ ತಂದೆ ಶಿವಪ್ಪ<br>ಉಣ್ಣರಗಿ<br>ಚಿಕ್ಕೋಡಿ ತಾ. ಬೆಳಗಾವಿ ಜಿಲ್ಲೆ.<br>ದೂ. ೯೪೪೮೮೪೫೦೨೦ | ೫೫ | ಬನ್ನೇ | ಕುರಿಗಾರಿಕೆ |
| ಸತ್ಯಪ್ಪ ತಂದೆ ಲಕ್ಷ್ಮಣ<br>ಉಣ್ಣರಗಿ<br>ಚಿಕ್ಕೋಡಿ ತಾ. ಬೆಳಗಾವಿ ಜಿಲ್ಲೆ.<br>ದೂ. ೯೪೪೮೪೧೨೪೪೦ | ೬೦ | ಬನ್ನೇ | ಕುರಿಗಾರಿಕೆ |
| ಭೀರಪ್ಪ ಸಿದ್ದಪ್ಪ ನಸಲಾಪುರೆ<br>ನವಲಿಹಾಳ್<br>ಚಿಕ್ಕೋಡಿ ತಾ. ಬೆಳಗಾವಿ ಜಿಲ್ಲೆ.<br>ದೂ. ೯೪೪೮೬೨೦೨೦೯ | ೫೫ | ಮುತ್ತನೇರು | ಕುರಿಗಾರಿಕೆ |

| | | | |
|---|---|---|---|
| **ದುಂಡವ್ವ ಗಂಡ ದಿ. ಕಲ್ಲಪ್ಪ**<br>ಕಡಕಲಾಟ<br>ಚಿಕ್ಕೋಡಿ ತಾ. ಬೆಳಗಾವಿ ಜಿಲ್ಲೆ. | ೫೫ | ರಾಣಗೆ | ಕುರಿಗಾರಿಕೆ |
| **ಲಕ್ಷ್ಮಣ ತಂದೆ ಸಿದ್ಧಪ್ಪ**<br>ಉಣ್ಣರಗಿ<br>ಚಿಕ್ಕೋಡಿ ತಾ. ಬೆಳಗಾವಿ ಜಿಲ್ಲೆ. | ೩೦ | ಲವಟೆ | ಕುರಿಗಾರಿಕೆ |
| **ಮಾಳಪ್ಪ ಬಾಳಪ್ಪ ಲಾಂಡೆ**<br>ಜತ್ರಾಟ್<br>ಚಿಕ್ಕೋಡಿ ತಾ. ಬೆಳಗಾವಿ ಜಿಲ್ಲೆ. | ೭೯ | ಲಾಂಡೆ | ಕುರಿಗಾರಿಕೆ |
| **ಮಂಜುನಾಥ ದುರುಗಣ್ಣವರ ತಂದೆ ಭೀಮ**<br>ಸೌಂದಲಗ<br>ಚಿಕ್ಕೋಡಿ ತಾ. ಬೆಳಗಾವಿ ಜಿಲ್ಲೆ.<br>ದೂ. ೯೪೪೮೧೪೪೨೫ | ೨೮ | ಹೊನ್ನೆಬನ್ನೇ | ಕುರಿಗಾರಿಕೆ |
| **ಸೋನಬಾಯಿ ಗಂಡ ಮಂಜುನಾಥ ೩೦**<br>ಸೌಂದಲಗ<br>ಚಿಕ್ಕೋಡಿ ತಾ. ಬೆಳಗಾವಿ ಜಿಲ್ಲೆ. | | ಹೊನ್ನೆಬನ್ನೇ | ಕುರಿಗಾರಿಕೆ |
| **ಲಘುಮಣ್ಣ ತಂದೆ ಸಿದ್ಧಪ್ಪ ಬಾನಸೆ**<br>ಸೌಂದಲಗ<br>ಚಿಕ್ಕೋಡಿ ತಾ. ಬೆಳಗಾವಿ ಜಿಲ್ಲೆ. | ೪೪ | ಹೊನ್ನೆಸಿಂಗಾಡಿ | ಕುರಿಗಾರಿಕೆ |
| **ಲಕ್ಷ್ಮೀ ಸಿದ್ದು ಬಾನಸೆ**<br>ಸೌಂದಲಗ<br>ಚಿಕ್ಕೋಡಿ ತಾ. ಬೆಳಗಾವಿ ಜಿಲ್ಲೆ. | ೬೫ | ಹೊನ್ನೆಸಿಂಗಾಡಿ | ಕುರಿಗಾರಿಕೆ |
| **ವಸಂತ ತಂದೆ ಉಮಣ್ಣ ಕಲಾಲ್**<br>ಕಮಲಾಪುರ<br>ಹೊಸಪೇಟೆ ತಾ. ಬಳ್ಳಾರಿ ಜಿಲ್ಲೆ.<br>ದೂ. ೯೪೮೦೩೫೩೨೫೮ | ೪೫ | ಸತ್ಯನಕರ್ | ಕಟುಕರು<br>(ಕುರಿವ್ಯಾಪಾರಸ್ಥರು) |
| **ಪ್ಯಾರು ಕುರೇಶಿಯಾ ತಂದೆ ಬಷೀರ್ ಸಾಬ್**<br>ಕಂಪ್ಲಿ<br>ಹೊಸಪೇಟೆ ತಾ. ಬಳ್ಳಾರಿ ಜಿಲ್ಲೆ.<br>ದೂ. ೯೯೦೭೯೯೮೧೪೫ | ೪೫ | ಕುರೇಶಿಯಾ | ಕಟುಕರು<br>(ಕುರಿವ್ಯಾಪಾರಸ್ಥರು) |

| | | |
|---|---|---|
| ಕಲ್ಲಪ್ಪಮುತ್ಯಪ್ಪ ತೋರಪ್ಪಗೋಳ್ | ೫೫ | ಕುರಿಗಾರಿಕೆ |
| ಸುಟ್ಟಟ್ಟಿ ಗ್ರಾಮ | | |
| ಅಥಣಿ ತಾ. ಬೆಳಗಾವಿ ಜಿಲ್ಲೆ. | | |
| ದೂ. ೯೪೮೦೨೪೧೨೫೪ | | |
| ಗಾದಿಲಿಂಗನ ಗೌಡ | ೫೩ | ಸಹಾಯಕ |
| ಪಶುವೈದ್ಯಕೀಯ ಆಸ್ಪತ್ರೆ | | ನಿರ್ದೇಶಕರು |
| ಬಳ್ಳಾರಿ ತಾ. ಜಿಲ್ಲೆ. | | |
| ಗೋವರ್ಧನ ತಂದೆ ವೆಂಕಟೇಶ್ವರ ರಾವ್ | ೫೫ | ಜಮೀನ್ದಾರರು |
| ಮೈಲಾಪುರ ಕ್ಯಾಂಪ್ | | |
| ಸಿರುಗುಪ್ಪ ತಾ. ಬಳ್ಳಾರಿ ಜಿಲ್ಲೆ. | | |
| ಗೌಡರ್ ವೈ.ಎನ್. | ೪೮ | ಮಾಜಿ ಅಧ್ಯಕ್ಷರು |
| ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮ | | |
| ಬೆಂಗಳೂರು | | |
| ಲಕ್ಷ್ಮಣರಾವ್ ಚಿಂಗಳೆ | ೫೫ | ಅಧ್ಯಕ್ಷರು |
| ಕರ್ನಾಟಕ ಪ್ರದೇಶ ಕುರುಬರ ಸಂಘ, | | |
| ಬೆಂಗಳೂರು | | |
| ದೂ. ೯೪೪೮೧೨೮೪೦೯ | | |
| ಪ್ರಹ್ಲಾದ ಜೋಶಿ | ೫೦ | ಸಹಾಯಕ ನಿರ್ದೇಶಕರು |
| ಪಶುವೈದ್ಯಕೀಯ ಆಸ್ಪತ್ರೆ | | |
| ಬಳ್ಳಾರಿ | | |
| ಹೇಮಣ್ಣ ತಂದೆ ಪಾಂಡಪ್ಪ ಲಮಾಣಿ | ೧೮ | ಕುರಿಗಾರಿಕೆ |
| ವೀರಪಾಪುರ ತಾಂಡ | | (ಆಳು ಮಗ) |
| ಮುಂಡರಗಿ ತಾ. ಗದಗ ಜಿಲ್ಲೆ. | | |

# ಪರಾಮರ್ಶನ ಸೂಚಿ

## ಕನ್ನಡ


ಅನಂತರಾಮ ರಾವ್ ಕೆ., ಸುವರ್ಣ ಕರ್ನಾಟಕ ದರ್ಶನ, ೨೦೦೬, ವಿದ್ಯಾ ಪಬ್ಲಿಶಿಂಗ್‌ಹೌಸ್, ಬೆಂಗಳೂರು.

ಅಂಬಳಿಕೆ ಹಿರಿಯಣ್ಣ., *ಕಟ್ಟೆಗೌಳಿಗರ ಸಂಸ್ಕೃತಿ* (ಉಪಸಂಸ್ಕೃತಿ ಮಾಲೆ), ೧೯೯೩, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

ಏಚ್ಚಾರ್ಕೆ., ಭಾರತದ ಆರ್ಥಿಕ ವ್ಯವಸ್ಥೆ, ಸಪ್ನಬುಕ್‌ಹೌಸ್, ಬೆಂಗಳೂರು, ೨೦೦೩

ಒಡೆಯರ್ ಡಿ. ಹೆಗ್ಗಡೆ., *ಹಾಲುಮತ ಕುರುಬ ಜನಾಂಗದ ಅಭಿವೃದ್ಧಿ ಸಮಸ್ಯೆಗಳು*, ೨೦೦೩, ಪ್ರಕಾಶಕರು ಮಾನವಾಭಿವೃದ್ಧಿ ಅಧ್ಯಯನಗಳ ಕೇಂದ್ರ, ಮೈಸೂರು.

ಒಡೆಯರ್ ಡಿ. ಹೆಗ್ಗಡೆ., *ಮಹಿಳಾ ಅಧ್ಯಯನಗಳು* - ಆರ್ಥಿಕ ನೆಲೆಗಳು ಮತ್ತು ಆಯಾಮಗಳು, ೨೦೦೩, ಮಾನವಾಭಿವೃದ್ಧಿ ಅಧ್ಯಯನಗಳ ಕೇಂದ್ರ, ಮೈಸೂರು.

ಒಡೆಯರ್ ಡಿ. ಹೆಗ್ಗಡೆ., *ಹಾಲುಮತ ಕುರುಬ ಜನಾಂಗದ ಇತಿಹಾಸ*, ೨೦೦೫, ಅಖಿಲಾ ಏಜನ್ಸೀಸ್, ಮೈಸೂರು.

ಒಡೆಯರ್ ಡಿ. ಹೆಗ್ಗಡೆ., *ಹಕ್ಕ-ಬುಕ್ಕರು*, ತನುಮನ ಪ್ರಕಾಶನ, ಮೈಸೂರು

ಕಟ್ಟೀ, ವೆಂಕಟರಂಗೋ(ಅನು)., *ಗ್ಯಾಝೆಟೀಯರು ಮುಂಬಯೀ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು: ಧಾರವಾಡ ಬೆಳಗಾವಿ ವಿಜಾಪುರ ಕಾನಡಾ ಈ ನಾಲ್ಕು ಜಿಲ್ಲೆಗಳದ್ದು* (ಮುಂಬಯಿ: ಗವರ್ನಮೆಂತ ಸೆಂತ್ರಲ್ ಬುಕ್ ಡಿಪೋ, ೧೮೮೩; ಪುನರ್ ಮುದ್ರಣ. ೧೯೮೪, ಹೊಸ ದೆಹಲಿ: ಏಷಿಯನ್ ಎಜುಕೇಷನಲ್ ಸರ್ವೀಸೆಸ್).

ಕರಿಯಪ್ಪ ಎಂ., *ಹಾಲುತೊರೆ*, ನಗರೇಶ್ವರ ಕುರುಬರ ಸಂಘ (ರಿ), ೨೦೦೬, ದಾವಣಗೆರೆ.

ಕುಮಾರ್ ಆರ್.ಬಿ., ಕರ್ನಾಟಕದ ಮುದ್ದೆ ಕುಂಬಾರರು, ೨೦೦೦, ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕೃಷ್ಣ ಬಿ.ಆರ್., *ಆಧುನೀಕರಣ ಸಮಾಜಶಾಸ್ತ್ರ*, ಚೇತನ ಬುಕ್‌ಹೌಸ್, ಮೈಸೂರು.

ಕೇಶವನ್ ಪ್ರಸಾದ್ ಕೆ., *ಕಪ್ಪ ಹೊಳೆಯ ಸಂಸ್ಕೃತಿ* ೧೯೯೩, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

ಗಂಗಾಧರ ದೈವಜ್ಞ., *ಮಾಳಿಂಗರಾಯನ ಕಾವ್ಯ*, ೧೯೯೯, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಗಿರಿಜಾ ಶಂಕರ., *ಮಾರಾಟ ಹಾಗೂ ವಿಕ್ರಯಶಾಸ್ತ್ರ*, ೧೯೯೦, ವಿಜಯಬುಕ್ ಡಿಪೋ, ಗದಗ.

ಗುಂಡಕರ್ಜಗಿ., *ಹಾಲುಮತದ ಚರಿತ್ರೆ*, ೨೦೦೫, ವಿಜೇತ ಪ್ರಕಾಶನ, ಗದಗ.

ಗುಂಡಕರ್ಜಗಿ ವ್ಹಿ.ಕೆ., *ಹಂಡೆ ಕುರುಬರು : ಒಂದು ಅಧ್ಯಾಯನ*, ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೨೦೦೨

ಗುರುಲಿಂಗಯ್ಯ ಎಂ., *ಕರ್ನಾಟಕದ ಗೊಲ್ಲಸಮುದಾಯ*, ಶಕ್ತಿ ಪ್ರಿಂಟರ್ಸ್ ಮತ್ತು ಪಬ್ಲಿಷರ್ಸ್, ಬೆಂಗಳೂರು, ೨೦೦೫

ಗೋವಿಂದಯ್ಯ ಎಂ.ಜಿ., ಡಾ. ಜಗನ್ನಾಥ್., ಗ್ರಾಮೀಣ ಅಭಿವೃದ್ಧಿಯಲ್ಲಿ ಕುರಿಸಾಕಣೆ ಮಹತ್ವ, ಕೃಷಿ ವಿಶ್ವವಿದ್ಯಾಲಯ, ಬೆಂಗಳೂರು, ೨೦೦೫

ಚನ್ನಪ್ಪಕಟ್ಟಿ., ವಾಡೇದ ಆರ್.ಎಸ್., *ಕುರುಬರ ಜನಪದ*, ಕನಕ ಜಯಂತ್ಯೋತ್ಸವ ಸಮಿತಿ, ಸಿಂದಗಿ, ಬಿಜಾಪುರ, ೧೯೯೭

ಚೆಲುವರಾಜು., *ಒಕ್ಕಲಿಗರ ಸಂಸ್ಕೃತಿ* ೧೯೯೩, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

ಚಂದ್ರಶೇಖರ ಟಿ.ಆರ್., *ಮಹಿಳೆ ಆರ್ಥಿಕತೆ ಮತ್ತು ಅಭಿವೃದ್ಧಿ*, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. ವಿದ್ಯಾರಣ್ಯ.

ಚಂದ್ರಕಾಂತ ಬಿಜ್ಜರಗಿ., *ಕುರುಬರ ಹೆಜ್ಜೆಗಳು*, ಶೈಲೇಂದ್ರ ಪ್ರಕಾಶನ, ಬಿಜಾಪುರ, ೨೦೦೬

ಚಿಕ್ಕೇರಿ ಶಿವಶಂಕರ, *ಗೌರವರ ಸಂಸ್ಕೃತಿ*, ೧೯೯೩, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

ಜೈಕುಮಾರ., *ನಡೆ ಮಡಿ*, ೧೯೮೦, ಶೃತಿ ಪ್ರಕಾಶನ, ಬೆಂಗಳೂರು.

ಜೋಗನ್ ಶಂಕರ., *ಗ್ರಾಮಸಮಾಜ*, ೧೯೯೮, ಜೀವ ಪ್ರಕಾಶನ, ಮೈಸೂರು.

ದಿನೇಶ್‌ರಾವ್ ರಾ., ಭೂಗೋಳಶಾಸ್ತ್ರ, ದ್ವಿತೀಯ ಪಿ.ಯು.ಸಿ., ವಿಶ್ವವಿದ್ಯಾ ಪ್ರಕಾಶನ ಸಂಸ್ಥೆ, ಬೆಂಗಳೂರು. ೧೯೯೬

ದೊಡ್ಡಮನಿ ಲೋಕರಾಜ ಎ.ಕೆ., ಕರ್ನಾಟಕ ಸಿಂಧೋಳ್ಳು ಸಮುದಾಯದ ಸಮಾಜಶಾಸ್ತ್ರೀಯ ಅಧ್ಯಯನ, ೨೦೦೫, ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ.

ನಂಜಮ್ಮಣಿ ಎಂ., *ಸಾಮಾಜಿಕ ಮಾನವಶಾಸ್ತ್ರ*, ೧೯೭೪, ಕನ್ನಡ ಅಧ್ಯಯನ ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ನಂಜಣ್ಣವರ ಎಸ್.ಎಸ್., ಕರ್ನಾಟಕದ ಭೂಗೋಳಶಾಸ್ತ್ರ, ೧೯೯೯, ದಿಕ್ಸೂಚಿ ಪ್ರಕಾಶನ, ಬೆಂಗಳೂರು.

ನಂಜಣ್ಣನವರ ಎಸ್.ಎಸ್., ಮತ್ತು ಪಿ. ಮಲ್ಲಪ್ಪ., ಭೂಗೋಳ ಸಂಗಾತಿ-೩, ಪ್ರಕಾಶಕರು ಗಾಯತ್ರಿ ಎಂಟರ್‌ಪ್ರೈಸಸ್, ಮೈಸೂರು.

ನಾಗೇಶ ಎಚ್.ಎಂ., *ಗ್ರಾಮೀಣ ನ್ಯಾಯ*, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. ವಿದ್ಯಾರಣ್ಯ.

ಪ್ರಭಾಕರ್ ಎ.ಎಸ್., *ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು*, ೨೦೦೦, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

ಪ್ರಶಾಂತ, ಎಚ್ ಡಿ (ಸಂ)., *ಜನಸಮುದಾಯ ಸಂಪುಟ* (ಹಂಪಿ: ಕನ್ನಡ ವಿಶ್ವವಿದ್ಯಾಲಯ, ೨೦೦೦).

ಫ್ರೋಫೈಲ್ "ರೈತರ ಭಾಗ್ಯಕ್ಕೆ" *ಕುರಿ ಮತ್ತು ಮೇಕೆ ಸಂಗೋಪನೆ,* ಪಶುಪಾಲನೆ ಮತ್ತು ಪಶುವೈದ್ಯಕೀಯ ಆಸ್ಪತ್ರೆ ಮತ್ತು ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮ, ಬೆಂಗಳೂರು.

ಬಸವರಾಜಪ್ಪ ಎಸ್., ಜೈವಿಕ ಗೊಬ್ಬರಗಳು, ೨೦೦೧, ಪ್ರಸಾರಾಂಗ, ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ.

ಬರಗೂರು ರಾಮಚಂದ್ರಪ್ಪ., *ಸಂಸ್ಕೃತಿ ಮತ್ತು ಸೃಜನಶೀಲತೆ,* ೧೯೯೧, ಜನಸಿಂಹ ಪ್ರಕಾಶನ, ಬೆಂಗಳೂರು.

ಬ.ಪ. ನಾಯ್ಕರ್., *ಹಾಲುಮತಸ್ಥರು,* ವಿಧ್ಯಾನಿಧಿ ಪ್ರಕಾಶನ, ಗದಗ, ೨೦೦೩

ಭಟ ಎಲ್.ಜಿ., *ಹಾಲಕ್ಕಿ ಒಕ್ಕಲಿಗರು,* ೧೯೮೦, ಐ.ಬಿ.ಎಚ್. ಪ್ರಸಾರಾಂಗ, ಬೆಂಗಳೂರು.

ಬೋನಾ ಬಸವರಾಜ., *ಹಾಲುಮತದ ಹುಟ್ಟು,* ಲೇಖಕರ ಎದೆಯಾಳದಿಂದ

ಭೈರಪ್ಪ ಕೆ., *ಸಮಾಜಶಾಸ್ತ್ರದ ಮೂಲತತ್ವಗಳು,* ೧೯೯೫-೯೭, ಸುರೇಶ ಪಬ್ಲಿಕೇಷನ್, ಗದಗ.

ಭೈರಪ್ಪ ಕೆ., *ಭಾರತದಲ್ಲಿ ಸಾಮಾಜಿಕ ಸಮಸ್ಯೆಗಳು,* ೧೯೯೭, ಗುಲ್ಬರ್ಗಾ.

ಬೋರಲಿಂಗಯ್ಯ ಹಿ.ಚಿ., *ಗೊಂಡರ ರಾಮಾಯಣ,* ೧೯೯೯, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

ಬೋರಲಿಂಗಯ್ಯ ಹಿ.ಚಿ., *ಬುಡಕಟ್ಟು ದೈವಾರಾಧನೆ,* ೨೦೦೦, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. ವಿದ್ಯಾರಣ್ಯ.

ಬೋರಲಿಂಗಯ್ಯ ಹಿ.ಚಿ., *ಕಾಡುಕಾಂಕ್ರೀಟ್ ಮತ್ತು ಜನಪದ,* ಅಕ್ಷರ ಪ್ರಕಾಶನ, ಬೆಂಗಳೂರು.

ಬೋರಲಿಂಗಯ್ಯ ಹಿ.ಚಿ., *ಕರ್ನಾಟಕ ಗ್ರಾಮದೇವತೆಗಳು,* ಕರ್ನಾಟಕ ಜನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

ಮಧು ವೆಂಕಾರೆಡ್ಡಿ., *ಜನಪದ ಕಸೂತಿ,* ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

ಮೈತ್ರಿ ಕೆ.ಎಂ., ಬೀದರ ಜಿಲ್ಲೆಯ ಗೊಂಡ ಆದಿವಾಸಿ ಸಮುದಾಯ: ಒಂದು ಸಮಾಜಶಾಸ್ತ್ರೀಯ ಅಧ್ಯಯನ, ೧೯೯೪, ಮೈಸೂರು ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಅಪ್ರಕಟಿತ ಪಿಎಚ್.ಡಿ. ಪ್ರಬಂಧ.

ಮೈತ್ರಿ ಕೆ.ಎಂ., *ಬುಡಕಟ್ಟು ಕುಲಕಸುಬುಗಳು,* ೨೦೦೨, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

ಮೊಗಳ್ಳಿಗಣೇಶ., *ದಲಿತರು ಮತ್ತು ಜಾಗತೀಕರಣ,* ೧೯೯೦, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

ಮನೋಹರ ಕುಮಾರ ಸಿ.ಬಿ., *ಸಮಾಜಶಾಸ್ತ್ರದ ಮೂಲ ತಂತ್ರಗಳು*, ಶ್ರವಣ್ ಪ್ರಕಾಶನ, ಶಿವಮೊಗ್ಗ, ೨೦೦೪

ಯಲ್ಲನಗೌಡ ಫ. ಅತ್ತಿಕೊಳ್ಳ., ಹಾಲುಮತದ ಚರಿತ್ರೆ, ೧೯೪೪, ಚಂದ್ರೋದಯ ಮುದ್ರಣಾಲಯ, ಧಾರವಾಡ.

ರವಿ ಬಿ.ಕೆ., (ಅನು) *ಭಾರತದ ಕುರುಬರು* - ರಾಜ ಪರಂಪರೆಯ ಬುಡಕಟ್ಟು (ಸಮಾಜೋ ಸಾಂಸ್ಕೃತಿಕ ಅಧ್ಯಯನ), ೨೦೦೫, ಅಂಕಿತ ಪ್ರಕಾಶನ, ಬೆಂಗಳೂರು.

ರಾಘು ಕೆ., *ಭಾರತದಲ್ಲಿ ಶಿಕ್ಷಣ ಮತ್ತು ಸಮಾಜ*, ೧೯೯೯, ಚೇತನ ಬುಕ್‌ಹೌಸ್, ಮೈಸೂರು.

ರಾಮಚಂದ್ರ ಜೋಷಿ., *ಸಮಾಜಶಾಸ್ತ್ರದ ಮೂಲ ತತ್ವಗಳು*, ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ, ಗುಲ್ಬರ್ಗಾ, ೨೦೦೪ -

ರಾಮ್‌ರಾವ್ ಜ್ಯೋತಿ., ಆಡು ಮತ್ತು ಕುರಿಸಾಕಣೆ, ಸಮಾಜ ಪುಸ್ತಕಾಲಯ, ಧಾರವಾಡ, ೧೯೮೪

ರಾಜಶೇಖರ ಎಸ್., *ಸಾಮಾಜಿಕ ಸಂಶೋಧನೆ*, ೧೯೯೮, ಭ್ರಮರ ಪ್ರಕಾಶನ, ಶಿವಮೊಗ್ಗ.

ರಾಚೇಂದ್ರ ಬಿ.ಕೆ., *ನಮ್ಮ ಸುತ್ತಲಿನ ನಂಬಿಕೆಗಳು*, ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ, ಮೈಸೂರು.

ರೇಣುಕಾಚಾರ್ಯ ಸಿ.ಕೆ., *ಸಾಮಾಜಿಕ ಸಂಖ್ಯಾಶಾಸ್ತ್ರ*, ಚೇತನ ಬುಕ್‌ಹೌಸ್, ಮೈಸೂರು.

ರೇಣುಕಾರ್ಯ ಸಿ.ಕೆ., ಅರ್ಥಶಾಸ್ತ್ರ, ಪಿಯುಸಿ ದ್ವಿತೀಯ ವರ್ಷದ ಪಠ್ಯಪುಸ್ತಕ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

ರೈ ಎ ಸುಬ್ಬಣ್ಣ...(ಸಂ)., *ದ್ರಾವಿಡ ನಿಘಂಟು* (ಹಂಪಿ: ಕನ್ನಡ ವಿಶ್ವವಿದ್ಯಾಲಯ, ೨೦೦೧).

ಲಕ್ಕಪ್ಪಗೌಡ ಎಚ್.ಜೆ., (ಪ್ರ.ಸಂ). *ಕರ್ನಾಟಕ ಬುಡಕಟ್ಟುಗಳು ಸಂಪುಟ - ೩*, ಕರ್ನಾಟಕ ಜಾನಪದ ಯಕ್ಷಗಾನ ಅಕಾಡೆಮಿ, ಬೆಂಗಳೂರು

ಲಕ್ಕಪ್ಪಗೌಡ ಎಚ್.ಜಿ. (ಸಂ) ಪ್ರೊ. ಚನ್ನಪ್ಪಕಟ್ಟಿ ಮತ್ತು ಪ್ರೊ. ಆರ್.ಎಸ್.ವಾಡೇದ., *ಕುರುಬರ ಜನಪದ*, ಪ್ರಕಾಶಕರು ಕನಕ ಜಯಂತ್ಯೋತ್ಸವ, ಸಿಂದಗಿ, ೧೯೯೭

ಲಲಿತ ಎ.ಸಿ., *ಕಾಡುಕುರುಬರ ಮತ್ತು ಜೇನುಕುರುಬರ ಸಂಸ್ಕೃತಿ*, ೧೯೦೦, ಕರ್ನಾಟಕ ಸಾಹಿತ್ಯ ಆಲೂರು, ಬೆಂಗಳೂರು

ವಿಷ್ಣು ಎಂ. ಶಿಂದೆ., *ಮಹಾಶಕ್ತಿ ಚಿಂಚಲಿ ಮಾಯಕ್ಕದೇವಿ*, ಪ್ರಕಾಶಕರು ಮಾಯಕ್ಕದೇವಿ ಕಮಿಟಿ, ಚಿಂಚಲಿ, ೨೦೦೦

ವಿವೇಕ ರೈ ಬಿ.ಎ., *ಕರ್ನಾಟಕ ಜನಪದ ನಂಬಿಕೆಗಳು*, ೧೯೮೧, ಪ್ರಸಾರಾಂಗ ಬೆಂಗಳೂರು ವಿಶ್ವವಿದ್ಯಾಲಯ. ಬೆಂಗಳೂರು.

ವೀರಣ್ಣ ದಂಡೆ., *ಜನಪದ ಹಾಲುಮತ ಮಹಾಕಾವ್ಯ*, ೨೦೦೦, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

ಶಂಕರನಾರಾಯಣ ತೀ.ನಂ. *ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು*, ೧೯೮೨,
ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ಮೈಸೂರು.

ಶಂಕರರಾವ್ ಚ.ನ., *ಭಾರತೀಯ ಸಮಾಜ ಅಧ್ಯಯನ*, ೧೯೯೬, ಜೈ ಭಾರತ ಪ್ರಕಾಶನ,
ಮಂಗಳೂರು.

ಶಂಕರರಾವ್ ಚ.ನ., *ಸಾಮಾಜಿಕ ಸಂಶೋಧನೆಯ ಕೈಪಿಡಿ*, ೧೯೯೭, ಜೈ ಭಾರತ ಪ್ರಕಾಶನ,
ಬೆಂಗಳೂರು.

ಶಂ.ಬಾ.ಜೋಶಿ., *ಕರ್ನಾಟಕ ವೀರಕ್ಷತ್ರಿಯರು*, ಮನೋಹರ ಪಾಣೇಕರ ಪ್ರಕಾಶಕರು,
ಸಮಾಜ ಬುಕ್ ಡಿಪೋ, ಧಾರವಾಡ

ಶಿವಾನಂದ ಗುಬ್ಬಣ್ಣನವರ., *ದೇವ್ನಾರ್ ಬಂದಾವ್ ಬನ್ನಿರೀ* ಭಾಗ-೨, ೧೯೮೦, ಒಕ್ಕಲ
ಮಕ್ಕಳ ಪ್ರಕಾಶನ, ಯಳವತ್ತಿ.

ಶಿವಾನಂದ ಗುಬ್ಬಣ್ಣವರ., *ಕರ್ನಾಟಕದ ಕುರುಬರು*, ಅಕ್ಷಯ ಪ್ರಕಾಶನ, ಧಾರವಾಡ,
೧೯೯೩

ಶಿವಲಿಂಗ ಅ. ಕುಂಬಾರ., *ಬೀರೇಶ್ವರ ಮಾಳಿಂಗರಾಯರ ಡೊಳ್ಳಿನ ಪದಗಳು*, ೨೦೦೬,
ವಿದ್ಯಾನಿಧಿ ಪ್ರಕಾಶನ, ಗದಗ.

ಶ್ರೀರಾಮ್ ಇಟ್ಟಣ್ಣವರ., (ಸಂ), *ಹಾಲಕೆನೆ*, ಶ್ರೀಕಾಳಿದಾಸ ಶಿಕ್ಷಣ ಸಂಸ್ಥೆ,
ಬಿಜಾಪುರ, ೨೦೦೨

ಶೇಷಾದ್ರಿ ಬಿ., *ಬಳ್ಳಾರಿ ಜಿಲ್ಲೆಯಲ್ಲಿ ಕೈಗಾರೀಕರಣ ಮತ್ತು ಜನಾಂದೋಲನ*, ೧೯೯೮,
ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

ಷೇಮಾಲಿಂಗ ರಾನೂರ್., *ಯೋಜನೆ ಮತ್ತು ಬಡತನ ನಿವಾರಣೆ*, ೧೯೯೯, ಪ್ರಸಾರಾಂಗ
ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ.

ಸವಿತಾ ನಾಯಕ., *ಬುಡಕಟ್ಟು ಮಹಿಳೆಯರ ಪ್ರಧಾನ ಕಲೆ*, ೨೦೦೦, ಪ್ರಸಾರಾಂಗ ಕನ್ನಡ
ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

ಸಿದ್ಧರಾಮಯ್ಯ ಎಸ್.ಜಿ., *ಯಡಕುಂಟೆ ಗೆಣಸಾಲು*, ಅನ್ವೇಷಣ ಪ್ರಕಾಶನ,
ಬೆಂಗಳೂರು, ೧೯೯೫

ಹಂಪ, ನಾಗರಾಜಯ್ಯ., *ದ್ರಾವಿಡಭಾಷಾವಿಜ್ಞಾನ* (ಬೆಂಗಳೂರು: ಕನ್ನಡ ಮತ್ತು ಸಂಸ್ಕೃತಿ
ಇಲಾಖೆ, ೧೯೯೧).

ಹನುಮಂತಯ್ಯ ವಿ.ಆರ್., *ಕುರುಬರ ಚರಿತ್ರೆ* (ಸಂ) ಸುಧಾಕರ, ೧೯೯೭, ಪ್ರತಿಭಾ ಪ್ರಕಾಶನ,
ಮೈಸೂರು.

ಹಳ್ಳಿಕೇರಿ ಎಫ್.ಟಿ., *ಹಾಲ್ಮತೋತ್ತೇಜಕ ಪುರಾಣ*, ಪ್ರಕಾಶಕರು ಹಾಲುಮತ ಸಾಂಸ್ಕೃತಿಕ
ವೇದಿಕೆ

ಹಿರೇಮಠ ಎಸ್.ಎಸ್., *ಜಾತ್ರೆಗಳು*, ಸಮತಾ ಪ್ರಕಾಶನ, ಹೊಸಪೇಟೆ.

**ನಿಘಂಟು ಮತ್ತು ಗ್ಯಾಸೆಟಿಯರ್**

ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಭಾಗ-೩, ೧೯೮೬.

ಭಾರತ ಗ್ಯಾಸೆಟಿಯರ್, ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಭಾಗ-೨, ೧೯೯೮.

ಕನ್ನಡ ಜಾನಪದ ವಿಶ್ವಕೋಶ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ

ಬೆಳಗಾವಿ ಜಿಲ್ಲೆಯ ಆರ್ಥಿಕ ಮತ್ತು ಸಾಮಾಜಿಕ ಸಮೀಕ್ಷೆ, ಜಿಲ್ಲಾಸಂಖ್ಯಾ ಸಂಗ್ರಹಣಾಧಿಕಾರಿಗಳು, ಬೆಳಗಾವಿ, ೧೯೯೧-೯೨

ಮರಾಠಿ ಕನ್ನಡ ಶಬ್ದಕೋಶ, ಸಂ. ಗುರುನಾಯ ದಿವಾಕರ್, ಮಹಾರಾಷ್ಟ್ರ ರಾಜ್ಯ ಸಂಸ್ಕೃತಿ ಮಂಡಳಿ, ೧೯೭೩.

ಗೇಸೆಟಿಯರ್ ಮುಂಬಯಿ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು, ವೆಂಕಟರಂಗಿ ಕಟ್ಟಿ, ಸಂ. ಧಾರವಾಡ, ಬೆಳಗಾಂ, ವಿಜಾಪುರ, ಕಾನಡಾ, ೧೯೮೪.

ಆರ್ಥಿಕ ಸಮೀಕ್ಷೆ ೨೦೦೫-೦೬ರ ಯೋಜನೆ ಮತ್ತು ಸಾಂಖ್ಯಿಕ ಇಲಾಖೆ, ಬೆಂಗಳೂರು.

ಸೂರ್ಯನಾಥ ಕಾಮತ್ ಯು., (ಪ್ರ.ಸಂ.) ೧೯೮೪, ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಬೆಂಗಳೂರು, (ಕರ್ನಾಟಕ ಗ್ಯಾಸೆಟಿಯರ್ ಇಲಾಖೆ) ಪು. ೪-೫.

ಕರ್ನಾಟಕ ಹಿಂದುಳಿದ ವರ್ಗಗಳ ಆಯೋಗ ವರದಿ ಸಂಪುಟ-೧, ಭಾಗ-೧ ಮುಖ್ಯ ವರದಿ, ೧೯೭೫, ಎಲ್.ಜಿ. ಹಾವನೂರು ಅಧ್ಯಕ್ಷರು (೧೯೫೨ರ ವಿವರಣಾ ಆಯೋಗಗಳ ಅಧಿನಿಯಮದ ಮೇರೆಗೆ ರಚಿತ ೧೯೫೨ರ ಕೇಂದ್ರ ಅಧಿನಿಯಮ)

**ಪತ್ರಿಕಾ ವರದಿಗಳು**

*ರಾಜ್ಯದ ೭೦ ತಾಲೂಕುಗಳಲ್ಲಿ ತರಬೇತಿ ಶಿಬಿರ* (ಕುರಿ ಉತ್ಪನ್ನ ಗುಣಮಟ್ಟ), ಪ್ರಾದೇಶಿಕ ಸುದ್ದಿ, ಪ್ರಜಾವಾಣಿ, ೩.೧.೮.೨೦೦೪ ಪು.೩

ತುಂಗಭದ್ರಾ ಬಲದಂಡೆಯ ಅಕ್ಷರಜ್ಞಾನ ವಂಚಿತ ಕುರಿಗಾರ ಮಕ್ಕಳು, ಪ್ರಾದೇಶಿಕ ಸುದ್ದಿ, ಪ್ರಜಾವಾಣಿ, ೧.೩.೨೦೦೫

'ಕುರಿಗಾರರು' (ಕೊಪ್ಪಳ ರಾಯಚೂರು ಮತ್ತು ಬಳ್ಳಾರಿ ಜಿಲ್ಲೆಯ - ನೋಟ) ೧. *ಜಾನಪದ ಕ್ಷೇತ್ರದಲ್ಲೂ ಕುರಿಗಾರರ ಛಾಪು*, (ಲೇ) ರುದ್ರಪ್ಪ ಭಂಡಾರಿ, ೨. *ಸಾಮಾಜಿಕ ಸೌಲಭ್ಯ ವಂಚಿತ 'ಅಲೆಮಾರಿ' ಬದುಕು* (ಲೇ) ಕೆ.ಎಂ. ಮಂಜುನಾಥ, ವಿಜಯ ಕರ್ನಾಟಕ, ೭.೧೧.೨೦೦೫, ಪು. ೧೨

ಕುರಿಗಾರರ ರಕ್ಷಣೆಗೆ ವಿಮಾ ಯೋಜನೆ, ಪ್ರಾದೇಶಿಕ ಸುದ್ದಿ, ಪ್ರಜಾವಾಣಿ, ೧೧.೭.೨೦೦೫ ಪು.೨

*ಇತಿಹಾಸ ಸೇರಲಿರುವ ಹುಣಸೂರು ಕಂಬಳಿ*, (ಲೇ) ಎಚ್.ಎಸ್.ಸಚ್ಚಿತ್, ಪ್ರಜಾವಾಣಿ ಪ್ರಚಲಿತ ಸಾಪ್ತಾಹಿಕ ೮.೨.೨೦೦೬ ಪು.೨

'*ನಡೆದಾಡುವ ಬ್ಯಾಂಕ್'ಗಳನ್ನು ಕಾಡುವ ರೋಗ*, (ಲೇ) ಡಾ. ಬಳೂರು ಆರ್. ಹರೀಶ್, ಪ್ರಜಾವಾಣಿ, ಕೃಷಿ ಸಾಪ್ತಾಹಿಕ, ೮.೨.೨೦೦೬ ಪು.೪

*ಕಣ್ಮರೆಯಾದೆ ಕುರಿ ಸಾಗಿದ್ದೇ ಗುರಿ*, (ಲೇ) ರಾಘವೇಂದ್ರ ಭೋವಿ, ಪ್ರಜಾವಾಣಿ, ಕರ್ನಾಟಕ ದರ್ಶನ ಪುರವಣಿ,

ವಿಮೆ ಬಡ ಕುರಿಗಾರರನ್ನೇ ಮರೆತ ಜನಶ್ರೀ, (ಲೇ) ಸಿದ್ದಯ್ಯ ಹಿರೇಮಠ, ಪ್ರಜಾವಾಣಿ, ವಾಣಿಜ್ಯ ಪುರವಣಿ, ೨೪.೧.೨೦೦೬, ಪು.೧

*ಗ್ರಾಮೀಣಾಭಿವೃದ್ಧಿಯ ಜೀವನಾಡಿ ಕುರಿ ಸಾಕಣಿಕೆ*, (ಲೇ) ವೈ.ಎನ್.ಗೌಡರ್, ಸೂರ್ಯೋದಯ ಪತ್ರಿಕೆ, ೬.೧.೨೦೦೫, ಪು. ೧೦

*Shepherds Demand Insurance*, The Hindu (Region), July 11, 2007

ಇಂಗ್ಲೀಷ್

Alok Kumar., Tribal Culture and Economy, 1995, Inter - India Publication, New Delhi.

Ananthakrishna Iyer, L K., *The Mysore Tribes and Castes* (Mysore: The Mysore University, 1930; rpt. 1998, New Delhi: Mittal Publications), 5 Vols.

Banergee G.C., A Text Book of Animal husbandary, 1964, Oxford and IBH Publishing Co.Pvt. Ltd., Calculta.

Basava K.D., *Marketing Management*, Vidyavahini Prakashana, Hubli.

Basuthakur (ARS)., Sheep Research, Production and Marketing in India, 1998, Inter-India Publication, New Dehli.

Bharara L.P., Socio-Economic Aspects of Live Stock Migration and pastoral Nomadism in Drought Prone Areas of Rajasthan in Livestock Economy of India, Oxford and IBH Publishing Indian Society for Agrcultural Economics, Bombay, 1989.

*Brochure on Reservation for Scheduled Castes, Scheduled Tribes and other Categories of Backward Classes in Services and Posts* (Bangalore: Government Press, 1987).

*Brochure on Reservation and Concessions for Scheduled Castes, Scheduled Tribes and other Backward Classes...*(New Delhi: A Nabhi Publications, 2004).

Devy, G N (Chairman)., Technical Advisory Group on Denotified Nomadic and Semi-nomadic Tribes Report, 2006 (New Delhi: Ministry of Social Justice and Empowerment, Government of India).

Devendra C. and G.B. Mclercy., Goat and Sheep Production in the Tropics, 1982, International Tropical Agricutlture Series, New Delhi.

Elwin Verrier., *The Religion of an Indian Tribes*, 1981, Oxford University press Bombay.

Enthoven, R E., *The Tribes and Castes of Bombay* (Bombay: Government Central Press,1922; rpt. 1975, Delhi: Cosmo Publications) 3 Vols.

Eustace J Kitts, *A Compendium of the Castes and Tribes found in India: Census of India 1881* (Byculla: Education Sociey Press,1885; rpt.1982, Gurgaon: The Academic Press, Gurgaon).
Gunther-Dietz-Sontheimer., Pastoral Deities in Western India, 1993, Oxford University Press, New Delhi.
Gustav oppert., *The Original inhabitants of India*, Asain Education society, New Delhi, 1988
Hassan, S S., *The Castes and Tribes of H E H Nizam's Dominions* (Bombay: Government Central Press, 1920; rpt. 1989, New Delhi: Asian Educational Services).
Havanur, L G (Chairman)., *Karnataka Backward Classes Commission Report* (Bangalore: Government Press, 1975 ), 5 Vols.
Iyer L.K.A., The Mysore Tribes and Castes, Vol-4, 1988, Mittal Publication, Delhi.
John B. Owen., Sheep Production, 1981, Block Well Press, London.
Jodh., *Indian Population and Development Review*, NewDelhi, 1985
Louise E. Buck., James P. Lassoie., Erick C.M. Fernandes., Argoforestry in Sustainable Agricultural System, 1999, Lewis Publisher Wastington.
Mankad B.L., *Rabaris of Kathiwad- A social Study*, Jurnal of University of Bombay, 1939
Misra, P K, Rajalakshmi, C R, Verghese, I., *Nomads in the Mysore City* (Calcutta: Anthropological Survey of India, 1971).
Nagan Gowda, R (Chairman)., *Mysore Backward Classes Committee Report* (Bangalore: Government Press, 1979).
Nanjundayya, H V., *The Ethnographic Survey of Mysore* (Bangalore: Government Press, 1906).
Nanjundaiah H.V. and Anathakrishana, The Mysore Tribles and Castes IV. vols, 1926-35, Bangalore, Mysore Govt. Press.
Pragya Sharma., *Tribal Society in a Flux (Raika)*, Panchasheela Prakashan, Jaipur, 2005
Ravivarma Kumar (Chairman)., *The Karnataka State Commission for Backward Classes Special Report -2000* (Bangalore: Government Press, 2000).
Reddy, O Chinnappa (Chairman).,Report of the Karnataka Third Backward Classes Commission (Bangalore: Government Press, 1990), 2 Vols.
Risley, H H.,*The Caste and Tribes of Bengal* (Calcutta: Bengal Secretariat Press, 1891; rpt.1981, Calcutta: Firma Mukhopadhyay), vols
Ruddar Datt., K.P.M. Sundharam., 2001, Indian Economy, S.Chand and Company Ltd., New Delhi.

Russell, R V and Hiralal, *The Tribes and Castes of the Central Provinces of India* (London: Macmillan and Co., 1916; rpt. 1975, New Delhi:Cosmo Publications), vols

Sangammanavar N.M., Marketing Problems of Woollen Products of Khadi and Village Industries in Haveri District, (Ph.D. Thesis), 2002, Karnataka Universtiy, Dharawad.

Shashi S.S., Gaddi Tribe of Himachal pradesh A Sociological Study, 1977, Sterling Publishers Pvt. Ltd., New Delhi.

Shashi, S S., *The World of Nomads*(New Delhi: Lotus Press, 2006).

Singh, K S., *The Scheduled Castes* (Delhi: Oxford University, Press,1993) People of Inida National Series, vol. 2

........ ., *The Scheduled Tribes* (Delhi: Oxford University, Press,1994) People of Inida National Series, vol. 3

........ ., *India's Communities* (Delhi: Oxford University, Press,1998) People of Inida National Series, vol.4-6.

........ (General Editor)., *People of India : Karnataka* (New Delhi: Anthropological Survey of India, 2003) Volume XXVI.

*The Annual Administration Report on the Working of the Criminal Tribes Act in the Bombay Presidency Part - I* (Bombay: Govt. Central Press, 1936)

*The New Encyclopaedia Britannica* (The University of Chicago, 1992)

Srinivas M.N., *Social Change In Modern India*, 1966, Allied Publications, Bombay.

Thurrston, E., *Ethnographic Notes on Southern India* (Madrss: Government Press, 1906).

..........., *Castes and Tribes of Southern India* (Madrss: Government Press, 1909; rpt. 1975, Delhi: Cosmo Publications) 7 vols.

Thurstan and Rangachar K., *Caste and Tribes of Southern*, Vol. IV, Asian Education Services, New Delhi.

Venkataswamy, T (Chairman).,Report of the Karnataka Second Backward Classes Commission (Bangalore: Government Press, 1986), 3 Vols.

A Kannada-Engilsh Dictionary, 1894, By Ref. F. Kittel, Mangalore Basel Mission Book & tract Depostroy

**Artical and Journal**

Brara, Rita., 'Are Grazing Lands waste lands?' Some Evidence from Rajasthan, Economic and Political Weekly, Feb. 22, 1992

Indian Journal of Agricultural Economics Vol-5-6, Indian Society of Agricltural Economics New Delhi, Oct-Dec, 2001

Sheep and Goat Rearing in Himachal Hills - An Economic Analysis, 1998, Indian Journal of Regional Science, Vol-xxx.

Pratap S. Birthal and Joshi P.K., Policy Paper-15 Assesment of Research Priorties for Livestock sector in India, 2002, National Centre for Agricultural Economics and Ploicy Research New Delhi.

## Report

Report on Intergrated sample survey for estimation of production of Milk, Egg, Wool and Meat for the year 2005-06, Dept. of Animal Husbandry of Veterinary services, Bangalore.

World Bank - (1999), India Livestock Sector Review, Enhancing Growth and Development, Rural Development Sector Unit, South Asian Region, Allied Publishers Pvt. Ltd., New Delhi.



ಮರಿಗಳನ್ನು ಹೊತ್ತು ತರುತ್ತಿರುವ ಅಲೆಮಾರಿ ಕುರುಬರ ಮಹಿಳೆ, ಕಮಲಾಪುರ



ಮಳೆಗಾಲದಲ್ಲಿ ಕೂಡಿ ಹಾಕಿದ ಕುರಿಗಳ ಹಿಕ್ಕೆ (ಗೊಬ್ಬರ) – ಹಂಪಿ



ಹಾಲ ಹಳ್ಳದಲ್ಲಿ ಏಳೂರಿನ ಏಳು ದೇವರುಗಳ ಪಾಲ್ಕಿ, ಹುಲಿಜಂತಿ (ಮಹಾರಾಷ್ಟ್ರ)



ಉಣ್ಣೆ ನೂಲುತ್ತಿರುವ ವಯೋವೃದ್ಧ - ಸೌಂದಲಗ



ದೀಪಾವಳಿ ಹಬ್ಬದಂದು ಪೂಜೆಗೆ ನಿಲ್ಲಿಸಿರುವ ಕುರಿ–ಟಗರು, ಗುಡ್ಡದ ತಿಮ್ಮಪ್ಪ



ಕಟುಕನು ಮೇಕೆಮರಿಯ ನಡವು ಹಿಚಿಕಿ ನೋಡಿ ವ್ಯಾಪಾರ ಮಾಡುತ್ತಿರುವುದು,
ಸಂಡೂರು ಗುಡ್ಡ



ಮದುವೆ ಸಂಭ್ರಮದಲ್ಲಿ ಮಧುಮಕ್ಕಳು - ಸೌಂದಲಗ (ಚಿಕ್ಕೋಡಿ ತಾ.)



ಸೀಮಂತ ಕಾರ್ಯಕ್ರಮದಲ್ಲಿ ಉಡಿಅಕ್ಕಿ ಹಾಕುತ್ತಿರುವುದು - ಅಕ್ಕೋಳ (ಚಿಕ್ಕೋಡಿ ತಾ.)



ಯುಗಾದಿ ಹಬ್ಬದ ದಿನದಂದು ಬನ್ನಿ ಗಿಡಕ್ಕೆ ಪೂಜೆ, ಸೋಮಸಮುದ್ರ



ದೀಪಾವಳಿ ಹಬ್ಬದಂದು ಲಕ್ಷ್ಮೀ ಪೂಜೆಯ ಗದ್ದುಗೆ – ಹಂಪಿ



ಗುಡಾರದ ಕಡೆ ನೀರು ಹೊತ್ತುಯ್ಯುತ್ತಿರುವ ಮಹಿಳೆ



ಗುಡ್ಡಗಾಡು ಪ್ರದೇಶದಲ್ಲಿ ಅಲೆಯುತ್ತಿರುವ ಅಲೆಮಾರಿ ಕುರುಬರ ಬಾಲಕಿಯರು



ಗುಡಾರದ ಮುಂದೆ ಅಲೆಮಾರಿ ಕುರುಬರ ಮಹಿಳೆಯರು



ಅಲೆಮಾರಿ ಕುರುಬರ ಯುವತಿ



ಕುದರೆ ಸವಾರಿ ಮಾಡುತ್ತಿರುವ ಅಲೆಮಾರಿ ಕುರುಬರ ಯುವಕ



ಸಾವಿರ ಕುರಿಯಾದಾಗ ಕತ್ತೆ ಬಿಡುವ ಆಚರಣೆ - ಮಾಗಳ (ಹೂವಿನಹಡಗಲಿ)



ಕುಟುಂಬದೊಂದಿಗೆ ವಲಸೆ ಹೊರಟಿರುವ ಅಲೆಮಾರಿ ಕುರುಬ



ವಾರದ ಸಂತೆಯಲ್ಲಿ ಅಲೆಮಾರಿ ಕುರುಬರು – ಕಮಲಾಪುರ (ಹೊಸಪೇಟೆ ತಾ.)



ಅಲೆಮಾರಿ ಕುರುಬ



ಅಲೆಮಾರಿ ಕುರುಬರು ಹಾಕಿಕೊಳ್ಳುವ ಮೆಟ್ಟು (ಚಪ್ಪಲಿ)